**SOLUR SIDDAPPA**
Eminent Parlimentarian Series
Written by **SIDDAGANGAIAH KAMBALU,**
# 960, 2nd Main, 4th Block,
Rajajinagar, Bangalore-560 010
Phone: 23203688
Cell: 9731717388
**Published** by
Karnataka Legislature Library Committee
Vidhana Soudha, Bangalore-560001.
Page: 181 + xvi Price: 20-00 Rs.
© **Chairman** Karnataka Legislative Council
& **Speaker** Karnataka Legislative Assembly
First Edition: 2008 Copies: 2000
**Printed & Designed by**
Government Press, Bangalore.

**ಸೋಲೂರು ಸಿದ್ದಪ್ಪ**
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
**ಲೇಖಕರು: ಸಿದ್ಧಗಂಗಯ್ಯ ಕಂಬಾಳು**
# 960, 2ನೇ ಮೈನ್, 4ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು –560 010
ದೂರವಾಣಿ: 23203688
ಮೊಬೈಲ್: 9731717388
**ಪ್ರಕಾಶನ**
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು–560 001.
ಪುಟ: 181 + xvi ಬೆಲೆ: 20/– ರೂ.
© **ಸಭಾಪತಿಗಳು:** ಕರ್ನಾಟಕ ವಿಧಾನ ಪರಿಷತ್
**ಸಭಾಧ್ಯಕ್ಷರು:** ಕರ್ನಾಟಕ ವಿಧಾನ ಸಭೆ
ಮೊದಲ ಮುದ್ರಣ: 2008 ಪ್ರತಿಗಳು: 2,000
**ಮುದ್ರಣ ಮತ್ತು ವಿನ್ಯಾಸ**
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2002–2003

ಅಧ್ಯಕ್ಷರು

**ಶ್ರೀ ಬಿ.ಎಲ್. ಶಂಕರ್**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಎಂ.ವಿ. ವೆಂಕಟಪ್ಪ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಬಿ.ಬಿ. ಶಿವಪ್ಪ**

ವಿಧಾನಸಭಾ ಸದಸ್ಯರು ಹಾಗೂ ಗ್ರಂಥಾಲಯ ಉಪ ಸಮಿತಿಯ ಅಧ್ಯಕ್ಷರು

**ಶ್ರೀ ಡಿ.ಆರ್. ಪಾಟೀಲ್**

ವಿಧಾನಸಭಾ ಸದಸ್ಯರು

**ಡಾ|| ಭಾರತೀಶಂಕರ್**

ವಿಧಾನಸಭಾ ಸದಸ್ಯರು

**ಶ್ರೀ ಪಿ. ರಮೇಶ್**

ವಿಧಾನಸಭಾ ಸದಸ್ಯರು

**ಶ್ರೀ ಕೆ.ಬಿ. ಚಂದ್ರಶೇಖರ್**

ವಿಧಾನಸಭಾ ಸದಸ್ಯರು

**ಶ್ರೀ ರಾಮಚಂದ್ರಗೌಡ**

ವಿಧಾನ ಪರಿಷತ್ ಸದಸ್ಯರು

**ಡಾ|| ಎಂ.ಪಿ. ನಾಡಗೌಡ**

ವಿಧಾನ ಪರಿಷತ್ ಸದಸ್ಯರು

**ಶ್ರೀ ಎಂ.ಎಸ್. ಸಿದ್ದರಾಜು**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ವರ್ಗ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ (ಪ್ರ) |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಮುನೀರುನ್ನಿಸಾ | ಅಧೀನ ಕಾರ್ಯದರ್ಶಿ (ಪ್ರ) |
| ಅನಸೂಯ ಎನ್.ದೇವಗಿರಿ | ಸಹಾಯಕ ಗ್ರಂಥಪಾಲಕಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

# ಮುನ್ನುಡಿ

16 ಡಿಸೆಂಬರ್ 2008

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ದಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಬಿ. ಸಿದ್ಧಗಂಗಯ್ಯ ಕಂಬಾಳು** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ **ಸೋಲೂರು ಸಿದ್ಧಪ್ಪ** ಅವರ ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇವರ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಜಗದೀಶ್ ಶೆಟ್ಟರ್**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ಮಾತು

ವಿರಳ ಪಂಕ್ತಿಯ ಧೀಮಂತ ರಾಜಕಾರಣಿಗಳಲ್ಲಿ ಸೋಲೂರು ಸಿದ್ಧಪ್ಪನವರು ಒಬ್ಬರು. ಅವರನ್ನು ರಾಜಕಾರಣಿ ಎನ್ನುವುದಕ್ಕಿಂತ ಅಪ್ಪಟ ಮೈಸೂರು ಅರಮನೆ ಸಂಸ್ಕೃತಿಯ ಹರಿಕಾರರೆನ್ನುವುದೇ ಹೆಚ್ಚು ಸೂಕ್ತ. ಸಭ್ಯತೆ, ಮೆಲ್ನುಡಿ, ಸಾರಸ್ವತ ಮುಂತಾದ ಅಪರೂಪ ಶಬ್ದಗಳಿಗೆ ಅವರು ನಡೆದಾಡುವ ಅರ್ಥಕೋಶವಾಗಿದ್ದರು. ಮನಸ್ಸಿನ ಬಹುಭಾಗದಲ್ಲಿ ದೈವಭಕ್ತಿಯನ್ನು ತುಂಬಗಿಕೊಂಡು ತುಂಬು ಬಾಳನ್ನು ಬಾಳಿ ಹೋದವರು. ಜೀವ ಧರಿಸಿ ಭೂಮಿಗೆ ಬಂದ ಮೇಲೆ ಇಂತಹದಲ್ಲಿ ಇರುವವರೆವಿಗೂ ಪರರಿಗೆ ನೆರವಾಗಿಯೇ ಬದುಕು ಸವೆಸಬೇಕೆನ್ನುವ ಆದರ್ಶವಿರಿಸಿಕೊಂಡಿದ್ದವರು. ಸ್ವಾತಂತ್ರ ಪೂರ್ವದಲ್ಲಿ, ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ಸಕ್ರಿಯ ಸದಸ್ಯರಾಗಿ ಸೇವೆ ಸಲ್ಲಿಸಿ, ತಾನು ಹುಟ್ಟಿದ ಹಳ್ಳಿಯ ಹೆಸರನ್ನು ತನ್ನೊಡಲಿಗೆ ಕಟ್ಟಿಕೊಂಡು ತಾವೂ ಬೆಳೆದು ತಮ್ಮ ಹುಟ್ಟಿದ ಹಳ್ಳಿಯನ್ನು ಬೆಳೆಯಿಸಿದರು. ಸಹಕಾರೀ ಕ್ಷೇತ್ರವಿರಲಿ, ಕೃಷಿ ಕ್ಷೇತ್ರವಿರಲಿ, ನೀರಾವರಿಯಿರಲಿ, ಶಿಕ್ಷಣವಿರಲಿ, ಪರಿಸವಿರಲಿ ಎಲ್ಲದರ ಬಗ್ಗೆಯೂ ಅರಿತವರಾಗಿದ್ದು ಅಧಿಕಾರಯುತವಾಗಿ ಮಾತಾಡಬಲ್ಲರಾಗಿದ್ದರು. ವಿಧಾನಸಭೆಯ ಕಲಾಪದ ಒಂದೊಂದು ಕ್ಷಣವೂ ಅಮೂಲ್ಯವೆಂದು ಘೋಷಿಸುತ್ತಿದ್ದ ವಿರಳ ರಾಜಕಾರಣಿಯಾಗಿದ್ದವರು. ಚರ್ಚೆಗಳಲ್ಲಿ ಯಾರೊಬ್ಬರನ್ನು ಚುಚ್ಚಿ ಮಾತಾಡಿದವರಲ್ಲ. ಇತರರನ್ನು ಗೌರವಿಸುತ್ತಲೇ ತನ್ನ ಗೌರವವನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ಅವರು ನೀಡುತ್ತಿದ್ದ ಸಲಹೆಗಳಲ್ಲಿ ಜನಪರ ಕಾಳಜಿಯಿರುತ್ತಿತ್ತು. ಉತ್ತರ ಕರ್ನಾಟಕದಿಂದ ಚುನಾಯಿತರಾಗಿ ಬಂದಿದ್ದ ಎಸ್.ಆರ್. ಬೊಮ್ಮಾಯಿಯವರು ಒಂದೆಡೆ ಸೋಲೂರು ಸಿದ್ದಪ್ಪನವರ ಗಾಂಭೀರ್ಯ ಮೈಸೂರು ಸಂಸ್ಕೃತಿಯ ಹಿಡಿತವನ್ನು ಕುರಿತು ಮನದುಂಬಿ ಪ್ರಶಂಸಿದ್ದಾರೆ.

ಸೋಲೂರು ಸಿದ್ದಪ್ಪನವರ ಬಗ್ಗೆ ಅನೇಕ ಸ್ವಜಾತಿಯ ಬಂಧುಗಳು ಆಕ್ಷೇಪಗಳನ್ನೆತ್ತಿಯೇ ಮಾತಾಡುತ್ತಿದ್ದರು. ನಮ್ಮನ್ನು ರಾಜಕೀಯ ರಂಗದಲ್ಲಿ ಬೆಳೆಸಲಿಲ್ಲ. ಅನ್ಯರನ್ನು ಬೆಳೆಸಿದರು ಎಂದೇ ದೂರುತ್ತಿದ್ದರು. ಅಲ್ಲದೇ ಸದಾಕಾಲವು ಶ್ಯಾನುಭೋಗರುಗಳ ಸ್ನೇಹದಲ್ಲಿಯೇ ಇರುತ್ತಾರೆ ಅವರು ಹೇಳಿದಂತೆಯೇ ಇವರೂ ನಡೆಯುತ್ತಾರೆ, ಎಂಬುದು ನೆಂಟರನೇಕರ ಮುನಿಸಿಗೆ ಕಾರಣವಾಗಿತ್ತು. ಕೆಲವಂತರೂ

ಅವರ ಬಳಿಯೇ ಹೋಗುತ್ತಿರಲಿಲ್ಲ. ಇದು ಸಿದ್ಧಪ್ಪನವರಿಗೆ ಶ್ರೀರಕ್ಷೆಯಾಗಿತ್ತು ಮುಕ್ತವಾಗಿ ಜನ ಸೇವೆ ನಡೆಸಲು ಅನುಕೂಲವಾಗುತ್ತಿತ್ತು. ಅವರು ಸ್ವಜನಪಕ್ಷ ಪಾತಿಯಲ್ಲವೆಂಬ ಹೆಸರಿಗಿಂತ ಹೆಚ್ಚಿನದೇನನ್ನು ಅವರು ನಿರೀಕ್ಷಿಸುತ್ತಿರಲಿಲ್ಲ. ಹತ್ತಿರದಿಂದ ಬಲ್ಲವರಿಗೆ ಅವರೆಂಥವರೆಂದು ತಿಳಿಯುತ್ತಿತ್ತು. ಆಪ್ತ ನೆಂಟರ ಬಗ್ಗೆ ಪ್ರೀತಿ-ಗೌರವಗಳನ್ನು ವಿಫುಲವಾಗಿ ತೋರುತ್ತಿದ್ದರು. ಸ್ನೇಹಜೀವಿಯಾದ್ದರಿಂದ ಹತ್ತಾರು ಸಭ್ಯರನ್ನು ಆತ್ಮೀಯ ನೆಲೆಯಲ್ಲಿರಿಸಿಕೊಂಡಿದ್ದರು. ಆತ್ಮೀಯರಲ್ಲಿ ಎಲ್ಲ ಮತದವರೂ ಇದ್ದರು.

ಸೋಲೂರು ಸಿದ್ದಪ್ಪನವರಿಗೆ ಜಾತಿರಾಜಕಾರಣ ಹಿಡಿಸುತ್ತಿರಲಿಲ್ಲ. ಸೂಕ್ತ ಯೋಗ್ಯತೆಯಿಲ್ಲದವರು ಮಾತ್ರವೇ ಜಾತಿ ಹೇಳಿಕೊಂಡು ಅವಕಾಶಗಿಟ್ಟಿಸುತ್ತಾರೆಂದೂ, ಯೋಗ್ಯ ಮನುಷ್ಯರಿಗೆ ಜಾತಿಯೇ ಇರುವುದಿಲ್ಲವೆಂದು ಹೇಳುತ್ತಲೂ ಇದ್ದರು. ಬೀಸುವ ಗಾಳಿಗೆ ಯಾವ ಜಾತಿಯಿದೆ, ಬೆಳಗುವ ಸೂರ್ಯ ಚಂದ್ರರಿಗೆ ಯಾವ ಜಾತಿಯಿದೆ, ಎಂದೆಲ್ಲಾ ತಮ್ಮ ಭಾಷಣಗಳಲ್ಲಿ ಹೇಳುತ್ತಲೂ ಇದ್ದರು.

ಸೋಲೂರು ಸಿದ್ದಪ್ಪನವರು, ತುಂಬಾ ರಸಿಕರೂ, ನುಡಿ ಜಾಣರೂ ಆಗಿದ್ದರು. ಒಮ್ಮೆ ಅವರೊಡನೆ ಮೈಸೂರಿಗೆ ಹೋಗುವ ಸಂದರ್ಭ ನನಗೊದಗಿತ್ತು. ಜೊತೆಯಲ್ಲಿ ಸಾಹುಕಾರ ನೆಂಟರೂಬ್ಬರಿದ್ದರು. ಮದ್ದೂರು ಸಮೀಪಿಸುತ್ತಿದ್ದಂತೆಯೇ ಕಾರಿನ ಡ್ರೈವರನಿಗೆ "ಚಾಲಕರೇ ಒಳ್ಳೆಯ ಎಳನೀರು ಕಂಡರೆ ಕಾರುನಿಲ್ಲಿಸಿ" ಎಂದು ಹೇಳಿದರು. ಒಂದೆಡೆ ಕಾರು ನಿಂತಿತು. ನನ್ನತ್ತ ತಿರುಗಿ ಏನ್ರೀ ಸಾಹಿತಿಗಳೇ ನಿಮಗೆ ಎಷ್ಟು ಸಂಬಳ ಸಾರಿಗೆ ಬರುತ್ತದೆ ಎಂದರು. ನನಗೆ ಹೆಮ್ಮೆಯೆನಿಸಿತು ತಿಂಗಳಿಗೆ ಸಾವಿರ ರೂಪಾಯಿ ಬರುತ್ತೇ ಸಾರ್ ಎಂದಿದ್ದೆ ಮುಂದಿನದನ್ನು ಯೋಚಿಸದೆ. ನಿಮ್ಮ ಬರವಣಿಗೆ ಪುಸ್ತಕ ಕಾದಂಬರಿ ಇತ್ಯಾದಿ ವಗೈರೆಗಳಿಂದ ಏನಾದರೂ ಲಾಭವಿದೆಯೋ ಎಂದರು" ಒಹೋ!, ಯಾಕಿಲ್ಲ ಎಂದು ರೈಲುಬಿಟ್ಟೆ ನೋಡಿದಿರಾ ಸಾಹುಕಾರರೇ ಬಂಡವಾಳವಿಲ್ಲ ಬಾಡಿಗೆಯಿಲ್ಲ ತೋಚಿದ್ದನ್ನು ಬರೆದರೆ ಹಣ, ತಿಂಗಳಿಗೆ ಸಾವಿರ ರೂಪಾಯಿ ಸಂಬಳ, ನಾವು ನೌಕರಿ ಮಾಡುವಾಗ ಎರಡು ವರ್ಷ ದುಡಿದರೂ ಒಂದು ಸಾವಿರ ನೋಡಲಾಗುತ್ತಿರಲಿಲ್ಲ ನಮಗೆ ತಿಂಗಳಿಗೆ ಒಂಭತ್ತೂವರೆ ರೂಪಾಯಿ ಸಂಬಳ, ಸಾಹುಕಾರರೇ ಚಿಂತೆ ಮಾಡಬೇಡಿ ಎರಡೆರೆಡು ಎಳನೀರು ಕುಡಿಯಿರಿ ಸಂಕೋಚ ಬೇಡ ಸಾಹಿತಿಗಳು ಬಿಲ್‌ಕೊಡುತ್ತಾರೆ.

ಸಾವಿರ ಸಂಬಳ ಪಡೆಯುವ ಸಾಹಿತಿಗಳ ಮುಂದೆ ನಾವು ಎಳನೀರಿಗೆ ಹಣ ಕೊಟ್ಟರೆ ಇವರಿಗೆ ಖಂಡಿತ ಅಪಮಾನವಾಗುತ್ತದೆ. ನಮ್ಮ ಸಾಹಿತಿಗಳು ಮೈಸೂರಿನ ಖರ್ಚನ್ನೆಲ್ಲಾ ಭರಿಸುವಷ್ಟು ಹಣವುಳ್ಳವರು ಎಂದು ಬಿಟ್ಟರು. ನನಗೆ ಸಣ್ಣಗೆ ಒಳಬೆವರು ಮೂಡತೊಡಗಿತ್ತು.

ಸೋಲೂರು ಸಿದ್ದಪ್ಪನವರು ತುಂಬಾ ಸರಸಿಗಳಾಗಿದ್ದರು. ಕಂಬಾಳು ಮಠದ ದೊಡ್ಡದೊಂದು ಸಮಾರಂಭಕ್ಕೆ ಸಪತ್ನೀ ಕುಟುಂಬ ಸಮೇತರಾಗಿ ಆಗಮಿಸಿದ್ದರು. ಸಮಾರಂಭ ಮುಗಿದ ಮೇಲೆ ಉತ್ಸಾಹೀ ನೆಂಟರೆಲ್ಲ ಶಿವಗಂಗಾ ಕ್ಷೇತ್ರ ದರ್ಶನಕ್ಕೆ ಬೆಟ್ಟವೇರಲು ಹೊರಟರು, ಅವರೆಲ್ಲರ ಜೊತೆ, ಸಿದ್ದಪ್ಪನವರ ಧರ್ಮಪತ್ನಿ ಶ್ರೀಮತಿ ಚನ್ನಬಸಮ್ಮನವರೂ ಹೊರಟರು. ಅವರಿಗೆ ವಯಸ್ಸಾಗಿತ್ತು. ಪತ್ನಿಯ ಉತ್ಸಾಹಕ್ಕೆ ಅಡ್ಡಗೋಡೆ ಹಾಕಿದಂತೆ ಸಿದ್ದಪ್ಪನವರು; "ನೋಡಿ ನಿಮಗೆ ಅರವತ್ತರ ಮೇಲೆ ವಯಸ್ಸಾಗಿದೆ. ನಿಮಗೆ ರಕ್ತದೊತ್ತಡ ವಿಪರೀತವಾಗಿದೆ. ಮೂರು ಮೆಟ್ಟಿಲೇರಿದರೆ ಮೂರ್ಛೆ ಬೀಳುವಿರಿ, ಆರು ಮೆಟ್ಟಿಲೇರಿದರೆ ಪ್ರಾಣವೇ ಹೋದೀತು. ಪುಣ್ಯಾತ್ಮಗಾದೆ ಹೇಳಿದ್ದಾರೆ. ಚಿಕ್ಕ ವಯಸ್ಸಿನಲ್ಲಿ ತಾಯಿ ಸಾಯಬಾರದಂತೆ, ಮುಪ್ಪಿನಲ್ಲಿ ಹೆಂಡತಿ ಸಾಯಬಾರದಂತೆ, ದಯಮಾಡಿ ಈ ಮುದುಕನನ್ನು ಬಿಟ್ಟು ಹೊರಟು ಹೋಗೇ ಬಿಡುವ ಸಿದ್ದತೆ ನಡೆಸಬಾರದು". ಮುಂತಾಗಿ ಮಾತುಗಳನ್ನಾಡಿ ಮುಗುಳ್ನಗೆ ನಕ್ಕರು. ಪತಿಯ ಇಂಗಿತವರಿತ ಆ ಪತ್ನಿ ಬೆಟ್ಟವೇರುವ ಆಸೆ ತೊರೆದರು. ಸಿದ್ದಪ್ಪನವರು, ಯಾವ ಕಾರಣಕ್ಕೂ ಸಿಡುಕುತ್ತಿರಲಿಲ್ಲ. ಹೇಳಬೇಕಾದ್ದನ್ನು ಸ್ವಾರಸ್ಯವಾಗಿಯೇ ಹೇಳಿ ಮುಗಿಸುತ್ತಿದ್ದರು. ಅವರು ಹೇಳುತ್ತಿದ್ದ ಅನುಭವದ ನುಡಿಗಳಿಗೆ ಇನ್ನಿಲ್ಲದ ಸ್ವಾರಸ್ಯವಿರುತ್ತಿತ್ತು. ಅವರು ಮಾತಿಗೆ ತೊಡಗಿದರೆಂದರೆ ಇನ್ನಾದರೂ ಮಧ್ಯೆ ಮಾತಾಡಲು ಸಾಧ್ಯವಾಗುತ್ತಿರಲಿಲ್ಲ. ಅವರದೇ ಕೊನೆಯ ಮಾತಾಗುತ್ತಿತ್ತು. ಸೋಲೂರು ಸಿದ್ದಪ್ಪನವರು ಸವಿಮಾತಿನ ಮೃದು ಮನಸ್ಸಿನ ಅಪ್ಪಟಮನುಷ್ಯ ಯಾರಾದರೂ ತಮ್ಮನ್ನು ಬಹಿರಂಗವಾಗಿ ನಿಂದಿಸಿದರೆಂದು ತಿಳಿದರೆ ನಿಂದಿಸಿದವರನ್ನು ಹುಡುಕಿ ಹೋಗಿ ಮಾತಾಡಿಸಿಬರುತ್ತಿದ್ದರು. ನೋಡಿ ಸ್ವಾಮಿ, ನಾವು ಜನಪ್ರತಿನಿಧಿಗಳು ನಿಮ್ಮಂಥವರು ಸಾವಿರ ತಪ್ಪುಮಾಡಿ ಬಚ್ಚಿಟ್ಟುಕೊಳ್ಳಬಹುದು ನಾವು ಸಣ್ಣ ಪುಟ್ಟ ತಪ್ಪುಗಳನ್ನು ಬಚ್ಚಿಟ್ಟು ಕೊಳ್ಳಲು ಸಾಧ್ಯವಾಗುವುದಿಲ್ಲ. ನಿಂದಿಸುವುದಿದ್ದರೆ ಮುಖಾ ಮುಖಿ ನಿಂದಿಸಿ ತಪ್ಪಿದ್ದರೆ ತಿದ್ದಿಕೊಳ್ಳುತ್ತೇನೆ. ಅವರವರ ಮುಂದೆ ನಿಂದಿಸಿದರೆ ನಿಮ್ಮ ಗೌರವವೇ ಕುಂದಾಗುತ್ತದೆ. ಯಾರ ಮುಂದೆ ನೀವು ನಿಂದಿಸಿದಿರೋ

ಅವರೇ ಬಂದು ನನ್ನ ಮುಂದೆ ಹೇಳಿದ್ದಾರೆ ಅಂದ ಮೇಲೆ ನಿಮ್ಮ ನಿಂದನೆಗಳೆಲ್ಲ ವ್ಯರ್ಥವಲ್ಲವೇ? ನೀವು ನಿಂದಿಸಿದರು ಎಂದು ನಿಮ್ಮ ವಿಶ್ವಾಸ ಕಳೆದುಕೊಳ್ಳಲಾರೆ ನಾನಿನ್ನು ಹತ್ತಾರು ವರ್ಷ ರಾಜಕೀಯದಲ್ಲಿ ಇರಬೇಕಾಗಿದೆ ನೋಡಿ. ನಿಮಗಾದರೋ ಬೇರೆ ಬೇರೆ ವ್ಯವಹಾರಗಳಿವೆ. ನಮಗೆ ರಾಜಕೀಯವೇ ತಂದೆ, ತಾಯಿ, ಎಂದು ಹೇಳುತ್ತಿದ್ದರು. ಸೇಡಿನ ರಾಜಕಾರಣ ಅವರಲ್ಲಿ ಇರಲಿಲ್ಲವೆಂದು ಸಮಕಾಲೀನರೆಲ್ಲಾ ಹೇಳುತ್ತಿರುತ್ತಾರೆ.

ಹೆಂಡದ ಗುತ್ತಿಗೆದಾರರ ಹತ್ತಿರ, ಲೆಕ್ಕ ಬರೆವ ಗುಮಾಸ್ತೆಯಾಗಿ ಬದುಕನ್ನು ಪ್ರಾರಂಭಿಸಿ ವಿಧಾನಸಭಾ ಸದಸ್ಯನಾಗಿ ಸುಮಾರು ಅರವತ್ತು ಸಂವತ್ಸರಗಳಿಗೂ ಹೆಚ್ಚು ಕಾಲ ಸಾರ್ವಜನಿಕ ಜೀವನದಲ್ಲಿದ್ದರು. ಸೋಲೂರು ಸಿದ್ದಪ್ಪನವರು. ಅಪ್ಪಟ ಕಾಂಗ್ರೇಸಿಗರು. ಗಾಂಧೀ ವಾದದಲ್ಲಿ ಅಪಾರ ನಂಬುಗೆಯುಳ್ಳವರಾಗಿದ್ದರು. ಅವರು ರಾಜಕೀಂಯು ಪ್ರವೇಶ ಮಾಡಿದ ಆ ಕಾಲದಲ್ಲಿ ಇವರಂಥ ಜನರಿಗೆ, ಮಹಾತ್ಮಾಜೀಯವರ ಸಂಕಲ್ಪಗಳೇ ಮಾರ್ಗದರ್ಶಕ ಸೂತ್ರಗಳಾಗಿದ್ದವು. ಮಹಾತ್ಮಜೀ ಗುರುವಿನಂತೆ ಬೆಂಬಲಕ್ಕಿದ್ದರು ಸ್ವಾತಂತ್ರ–ಸ್ವಾವಲಂಬನೆ, ಗ್ರಾಮರಾಜ್ಯ ಮುಂತಾದ ಗುರಿಯಿತ್ತು ಆ ಗುರು–ಈ ಗುರಿ ಎರಡೇ ಸಾಕಾಗಿತ್ತು ಸತ್ಯ ನಿಷ್ಠೆ ಪ್ರಜಾಸೇವೆಗೆ, ರಾಜಕೀಯವೆಂದರೆ ಅಧಿಕಾರ ಹಿಡಿಯಲೇ ಬೇಕೆಂಬುದು ಏಕೈಕ ಗುರಿಯಾಗಿರಲಿಲ್ಲ ಪ್ರಜಾರಾಜ್ಯ ಕಟ್ಟಲು ರಾಜಕಾರಣವೊಂದು ದೀಕ್ಷೆಯಾಗಿತ್ತು. ಕೊಳಕು ಮನಸ್ಸುಗಳು ಪ್ರಜಾಸೇವಕರ ಹೃದಯಗಳನ್ನು ಪ್ರವೇಶಿಸುತ್ತಿರಲಿಲ್ಲ. ಬಡತನದ ವಿರುದ್ಧ, ಅಸಹಾಯಕತೆಯ ವಿರುದ್ಧ ಸಮರ ಸಾರಲು ಸ್ವಾತಂತ್ರವೊಂದೇ ಪರಮ ಗುರಿಯಾಗಿತ್ತು. ಇಂಥ ಒಳ್ಳೆಯ ಕಾಲದಲ್ಲಿ ಸೋಲೂರು ಸಿದ್ದಪ್ಪನವರು ರಾಜಕೀಯ ಪ್ರವೇಶ ಮಾಡಿ ಜನರಿಗಾಗಿ ದುಡಿದರು. ಇಂತಹ ಮಹನೀಯರನ್ನು ಮರೆಯುವ ಮುನ್ನ ಈ ಹೊತ್ತಿಗೆ ಬರುತ್ತಿರುವುದು ಸಂತಸದ ಸಂಗತಿ.

ಸೋಲೂರು ಸಿದ್ದಪ್ಪನವರ ಜೀವಿತ ಕಾಲದಲ್ಲಿ ಒಡನಾಟವಿರಿಸಿಕೊಂಡಿದ್ದ ಹಿರಿಯರಾರೂ ಉಳಿದು ಕೊಂಡಿಲ್ಲ. ಕಿರಿಯ ಸಮಕಾಲೀನರನ್ನು ಸಂದರ್ಶಿಸಿಯೇ ಈ ಪುಸ್ತಕವನ್ನು ಸಿದ್ಧಪಡಿಸಿದ್ದಾಯಿತು. ಸಿದ್ದಪ್ಪನವರ ಮನೆಯಲ್ಲಿ ಕೆಲವೇ ಕೆಲವು ಪತ್ರಗಳು, ಮತ್ತು ಚಿತ್ರಗಳು ಬಿಟ್ಟರೆ ಬೇರಾವ ಮಹತ್ವದ ದಾಖಲೆಗಳು ದೊರೆಯಲಿಲ್ಲ. ಉಳಿಸಿಕೊಂಡಷ್ಟನ್ನು ಅವರ ಸುಪುತ್ರ ಶಿವಪ್ರಸಾದ್ ಮತ್ತವರ ಧರ್ಮಪತ್ನಿ

ಮಂಜುಳಾಪ್ರಸಾದ್ ಒದಗಿಸಿ ತುಂಬಾ ಉಪಕಾರ ಮಾಡಿದ್ದಾರೆ. ಅವರನ್ನೆಲ್ಲಾ ಸ್ಮರಿಸಬೇಕು. ಸೋಲೂರು ಸಿದ್ದಪ್ಪನವರ ವ್ಯಕ್ತಿತ್ವದ ಬಗ್ಗೆ ಮಾಹಿತಿ ಪಡೆಯಲು ಹಲವರನ್ನು ಸಂದರ್ಶಿಸಬೇಕಾಯಿತು. ಅವರೆಲ್ಲ ನನ್ನೊಡನೆ ತುಂಬಾ ಆಸಕ್ತಿ ವಹಿಸಿ ಸಹಕರಿಸಿದ್ದನ್ನು ನಾನೆಂದಿಗೂ ಮರೆಯಲಾರೆ.

ಈ ಹೊತ್ತಗೆಯನ್ನು ವಿಧಾನ ಪರಿಷತ್ತಿನ ಗ್ರಂಥಾಲಯ, ಸಮಿತಿ ಮೂಲಕ ಹೆಸರಾಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಪ್ರಕಟಿಸಿದ ಕೃಪೆಗೆ ನಾನು ಕೃತಜ್ಞನಾಗಿದ್ದೇನೆ.

ವಿಧಾನಪರಿಷತ್ತಿನ ಸಭಾಪತಿಗಳಾದ ಸನ್ಮಾನ್ಯ ವೀರಣ್ಣ ಮತ್ತಿಕಟ್ಟಿ ಅವರಿಗೂ ವಿಧಾನಸಭಾಧ್ಯಕ್ಷರಾದ ಸನ್ಮಾನ್ಯ ಜಗದೀಶ್ ಶೆಟ್ಟರ್ ಅವರಿಗೂ ಸಮಿತಿಯ ಎಲ್ಲಾ ಸದಸ್ಯರಿಗೂ, ಈ ವಿಭಾಗದ ಸಾಹಿತಿ ಮಿತ್ರ ಎಲ್.ಎನ್. ಮುಕುಂದರಾಜರಿಗೂ ಅಧಿಕಾರಿಗಳಾದ ಎನ್. ಬಸವರಾಜ್, ನೂರ್ ಮಹಮದ್, ನರಸಿಂಹಮೂರ್ತಿ, ಮಂಜುನಾಥ್, ಮಹಾಂತೇಶ್, ಸ್ವಾಮಿ, ದಯಾನಂದ್ ಹಾಗೂ ಸರ್ಕಾರಿ ಮುದ್ರಣಾಲಯದ ಡಿ.ಟಿ.ಪಿ. ಮಾಡಿದ ಬಿ.ಎಂ. ರವಿಕುಮಾರ್ ಇವರೆಲ್ಲರಿಗೂ ನಾನು ವಿನೀತನಾಗಿದ್ದೇನೆ.

**ಬಿ. ಸಿದ್ಧಗಂಗಯ್ಯ ಕಂಬಾಳು**

# 960, 2ನೇ ಮ್ಯೆನ್, 4ನೇ ಬ್ಲಾಕ್,
ರಾಜಾಜಿನಗರ, ಬೆಂಗಳೂರು –560 010
ದೂರವಾಣಿ: 23203688
ಮೊಬೈಲ್: 9731717388

# ಪರಿವಿಡಿ

ಮುನ್ನುಡಿ V
ಲೇಖಕರ ಮಾತು VII

ಭಾಗ – ೧
ಸೋಲೂರು ಸಿದ್ದಪ್ಪ ವ್ಯಕ್ತಿ–ವ್ಯಕ್ತಿತ್ವ

- ಹಿನ್ನೆಲೆ ಜನನ ಬಾಲ್ಯ – 03
- ತುಂಬು ಸಂಸಾರದಲ್ಲಿ – 06
- ಕಾಂಗ್ರೆಸ್ಸಿಗೆ ಪ್ರವೇಶ – 09
- ಶಿವಪುರ ಧ್ವಜ ಸತ್ಯಾಗ್ರಹದಲ್ಲಿ. – 10
- ಪ್ರಜಾಪ್ರತಿನಿಧಿ ಸಭೆ – 12
- ಕೆಂಗಲ್ ಹನುಂತಯ್ಯನವರ ಸ್ನೇಹ – 13
- ಮತ ಕ್ಷೇತ್ರದಲ್ಲಿ – 15
- ಕೆರೆಯ ನೀರನ್ನು ಕೆರೆಗೆ ಚೆಲ್ಲಿ – 18
- ಆನೆ ನಡೆದದ್ದು ಹಾದಿಯಾಯ್ತು – 21

ಭಾಗ – ೨
ಸದನದಲ್ಲಿ ಸೋಲೂರು ಸಿದ್ದಪ್ಪ

- ಗ್ರಾಮೀಣಾಭಿವೃದ್ಧಿ – 33
- ದವಸ ಧ್ಯಾನಗಳಿಗೆ ಬೆಲೆ ನಿಗದಿಪಡಿಸಿ – 36
- ಅರಣ್ಯ ಭೂಮಿ ಅಕ್ರಮ ಒತ್ತುವರಿ ತಪ್ಪಿಸಿ – 39
- ಶಾಸನ ಸಭೆಯಲ್ಲಿ ಸದಸ್ಯರು ಕನ್ನಡದಲ್ಲಿಯೇ ಮಾತಾಡಲಿ – 41

- ದೇವರ ಇನಾಮತಿಗಳು ಹಾಗೇ ಇರಲಿ – 42
- ನಮ್ಮ ಕ್ಷೇತ್ರಕ್ಕೆ ವಿದ್ಯುತ್ ಕೊಡಿ – 45
- ಮಾಗಡಿ ತಾಲ್ಲೂಕಿಗೆ ಆಗಬೇಕಾದ ನೀರಾವರಿ – 46
- ಕರ್ನಾಟಕ ಏಕೀಕರಣವಾಗಬೇಕು – 48
- ಕೃಷಿ–ಆದಾಯ ತೆರಿಗೆ ಬೇಡವೇ ಬೇಡ – 53
- ಆಹಾರ ಧಾನ್ಯಗಳ ಸಂಗ್ರಹ – ವಿತರಣೆ – 55
- ಆಸ್ಪತ್ರೆಗಳ ಸುಧಾರಣೆ; ವೈದ್ಯರ ಸಂಬಳ ಹೆಚ್ಚಿಸಿ – 58
- ಬಡವರ ಸಾಲ ಕೊಡಿ – 60
- ಗ್ರಾಮಾಂತರ–ಸಂಚಾರಿ ಆಸ್ಪತ್ರೆ – 62
- ಪ್ರಜಾಸರ್ಕಾರ ಬಂದು ಎಂಟು ವರ್ಷವಾಯ್ತು ಆಡಳಿತ ಸುಧಾರಣೆ ಆಗಿಲ್ಲ – 63
- ಲಂಚವನ್ನು ತಹಬಂದಿಗೆ ತರಲು ಹೀಗೆ ಮಾಡಿ – 64
- ಕೈಗಾರಿಕೆ – 67
- ಸಹಕಾರದಿಂದ ಉಪಕಾರ – 71
- ಆಸ್ಪತ್ರೆಗಳ ಸುಧಾರಣೆ ಆಗಲ್ಲ – 72
- ಬಂಧೀಖಾನೆಗೆ ಕಾಯಕಲ್ಪ: ಪೊಲೀಸ್ ಇಲಾಖೆಗೆ ಹೊಸರೂಪ – 77
- ಶಿಕ್ಷಣ ಸುಧಾರಣೆ – 80
- ಅಣೆಕಟ್ಟುಗಳ ನೀರಿನ ವಿತರಣೆ ಸರಿಯಾಗಿ ಆಗಲಿ – 83
- ಅರಣ್ಯ ಭೂಮಿ ಮತ್ತು ಗೋಮಾಳಗಳನ್ನು ಬಡರೈತರಿಗೆ ಹಂಚಿಬಿಡಿ – 83
- ಮಾಗಡಿ ತಾಲ್ಲೂಕು ಬೆಂಗಳೂರಿಗೆ ನೀರು ಒದಗಿಸುತ್ತಿದೆ. – 85
- ಗ್ರಾಮಗಳಲ್ಲಿ ಕೈಗಾರಿಕೆ ಸ್ಥಾಪಿಸಿ, ನಿರುದ್ಯೋಗ ತಪ್ಪಿಸಿ – 86

- ಕ್ಷಾಮ ಬಂದಿದೆ, ನೋಡಿ ಕೆರೆಕಟ್ಟೆ ಮಾಡಿಸಿ: ಜನರಿಗೆ ಕೂಲಿ ಕೊಡಿ – 88
- ನನ್ನ ತಾಲ್ಲೂಕಿನಲ್ಲಿ ಎಪ್ಪತ್ತು ಗ್ರಾಮಗಳಲ್ಲಿ ಶಾಲಾ ಕಟ್ಟಡಗಳಿಲ್ಲ – 89
- ಅರಣ್ಯ ಅಭಿವೃದ್ಧಿಯಾಗದೆ ಮಳೆ ಬೆಳೆ ಆಗದು – 89
- ಮಾಗಡಿಗೊಂದು ನ್ಯಾಯಾಲಯ ಬೇಕು – 90
- ಕೈಗಾರಿಕೆಗಳ ವಿಕೇಂದ್ರೀಕರಣವಾಗಲಿ – 90
- ಪ್ರತಿಭಾ ಪಲಾಯನ ನಿಲ್ಲಲಿ (ಡಾಕ್ಟರುಗಳು) – 91
- ಕಾಂಗ್ರೆಸಿಗರ ಎದೆಯೇನೋ ಕಲ್ಲು, ಹೃದಯ ಮೃದು – 92
- ಪಂಪ್‌ಸೆಟ್‌ಗಳಿಗೆ ವಿದ್ಯುತ್ ಒದಗಿಸಿ – 92
- ಶಾಲೆಗಳ ಸಂಖ್ಯೆ ಹೆಚ್ಚಾಗಲಿ – 92
- ಅರಣ್ಯ ಉಳಿಸಿದರೆ ಮಳೆ ಬರುತ್ತದೆ – 93
- ಉನ್ನತ ಶಿಕ್ಷಣ – 94
- ಕೈಗಾರಿಕೆ: – 94
- ಬೆಂಗಳೂರಿನಲ್ಲಿ ರಿಕ್ಷಾಗಳ ಸಂಖ್ಯೆ ನಿಯಂತ್ರಿಸಿ – 95
- ಆಯ–ವ್ಯಯ ಚರ್ಚೆ – 97
- ಖಾಸಗಿ ಪ್ರೌಢಶಾಲೆಗಳನ್ನು ಸರ್ಕಾರ ವಹಿಸಿಕೊಳ್ಳಲಿ – 97
- ಕಂದಾಯ ನಿಗಧಿ ಬಗ್ಗೆ – 97
- ಮುಜರಾಯಿ ಅರಣ್ಯ ಜಮೀನು ಬಡವರಿಗೆ ಹಂಚಿಬಿಡಿ – 98
- ಈಚಲು ವನಗಳನ್ನು ಸರ್ಕಾರ ವಹಿಸಿಕೊಳ್ಳಲಿ – 99
- ಶಿಕ್ಷಣದ ಬಗ್ಗೆ – 100
- ಮಾಗಡಿ ಕ್ಷೇತ್ರದ ಕೆರೆಗಳು – 101
- ಸಾರಿಗೆ ಸೌಕರ್ಯ ಹೆಚ್ಚಿಸಿ – 101
- ಎಸ್. ನಿಜಲಿಂಗಪ್ಪನವರಿಗೆ ಬೆಂಬಲ ನೀಡೋಣ – 102

- ಆಡಳಿತ ಚುರುಕಾಗಲಿ, ಇಲಾಖೆಗಳು ಕಡಿಮೆ ಇರಲಿ – 103
- ವಿದ್ಯುತ್ ಸರಬರಾಜು – 104
- ತಾಲ್ಲೂಕು ಬೋರ್ಡ್ ಗ್ರಾಮಪಂಚಾಯ್ತಿ – 111
- ಗ್ರಾಮ ಪಂಚಾಯಿತಿಗಳಿಗೆ ಕಾರ್ಯದರ್ಶಿಗಳನ್ನು ನೇಮಿಸಿ – 114
- ನ್ಯಾಯ ಬೆಲೆ ಅಂಗಡಿ – 115
- ಸಹಕಾರ ಇಲಾಖೆ ಸರಿಪಡಿಸಿ – 118
- ನಿಯಂತ್ರಿತ ಮಾರುಕಟ್ಟೆ – 121
- ಕೆಟ್ಟದ್ದನ್ನು ಕೆಟ್ಟದ್ದು ಎಂದು ಹೇಳುವ ಹಕ್ಕು ಮಾನವನಿಗೆ ಸೇರಿದೆ – 122
- ಜಲಾಶಯಗಳು, ಮೈನರ್ ಕೆರೆಗಳು ಮತ್ತು ರಸ್ತೆ ಕಾಮಗಾರಿ – 123
- ರೆವಿನ್ಯೂ ಸಬ್ ಡಿವಿಜನ್ ಆಫೀಸರುಗಳ ಅಗತ್ಯವಿಲ್ಲ – 128
- ಉನ್ನತ ಶಿಕ್ಷಣ – 130
- ನ್ಯಾಯಾಲಯ ಬೇಕು – 131
- ನೀರಾವರಿ ಮತ್ತು ರಸ್ತೆಗಳು – 132
- ಪೊಲೀಸ್ ಇಲಾಖೆ ಚೆನ್ನಾಗಿ ಕೆಲಸ ಮಾಡಲಿ – 136
- ಜಾತಿಗಳ ಬಗ್ಗೆ ಮಾತಾಡುವುದು ಸರಿಯಲ್ಲ – 137
- "ಬಂಧೀಖಾನೆ" ಸ್ಥಳಾಂತರಿಸಿ – 137
- ಅರಣ್ಯ ಭೂಮಿಯನ್ನು ಬೇಸಾಯಕ್ಕೆ ನೀಡಬೇಡಿ – 140
- ಮೀನುಗಾರಿಕೆ – 142
- ಪಶುಸಂಗೋಪನೆ ಅಮೃತ ಮಹಲ್ ಕಾವಲುಗಳ ರಕ್ಷಣೆಯಾಗಲಿ – 142
- ಕೃಷಿಕರಿಗೆ ಹೆಚ್ಚಿನ ಹಣದ ನೆರವು ನೀಡಿ – 142

- "ಬೆಂಗಳೂರು ದಿನ ಬೆಳಗಾದರೆ ಬೆಳೆಯುತ್ತಿದೆ ಈ ವಿಚಾರದಲ್ಲಿ ಸರಕಾರದವರು ಸರಿಯಾದ ವ್ಯವಸ್ಥೆ ಮಾಡಬೇಕಾಗಿದೆ" – 144
- "ಜನರಲ್ ಹಾಸ್ಟೆಲ್ ದ್ವಾರಾ ಮೇಲು ಕೀಳು ದೂರ" – 144
- ಸ್ಥಳೀಯ ಸಂಸ್ಥೆಗಳಿಗೆ ಅನುದಾನ ಸಾಲದು – 145
- "ಬಸ್ಸುಗಳ ಸಂಖ್ಯೆ ಹೆಚ್ಚಿಸಿ" – 146

**ಭಾಗ – ೩**

**ಗಣ್ಯರು ಕಂಡಂತೆ ಸೋಲೂರು ಸಿದ್ಧಪ್ಪನವರು**

- ಸಂತಾಪ ಸೂಚಕ ನಿರ್ಣಯ ವಿಧಾನ ಸಭೆ – 151
- ಶರಣಬಸವಪ್ಪ ಅಪ್ಪಾ – 152
- ಶ್ರೀ ಶಿವಕುಮಾರಸ್ವಾಮಿಗಳು – 153
- ಬಿ.ಡಿ. ಜತ್ತಿ – 154
- ವಿ.ಎಸ್. ಕೃಷ್ಣಯ್ಯರ್ – 154

**ಭಾಗ – ೪**

**"ನುಡಿದದ್ದು ಸ್ಫಟಿಕದ ಶಲಾಕೆ"**

- "ನುಡಿದದ್ದು ಸ್ಫಟಿಕದ ಶಲಾಕೆ" – 159

**ಭಾಗ – 5**

- **ಸೋಲೂರು ಸಿದ್ಧಪ್ಪನವರ ಭಾವಚಿತ್ರಗಳು** – 163


1753-2

ತಪ್ಪೆಂದು ಜನರನ್ನು ಎತ್ತಾಡದಿರು ಕಂಡ್ಯ
ಕಪ್ಪಾದ ಹಸುವು ಕರೆದರೆ ಆ ಹಾಲು
ಒಪ್ಪೋದು ಹರನ ಪೂಜೆಗೆ

**– ಜಾನಪದ ಗೀತೆ**

## ಹಿನ್ನೆಲೆ, ಜನನ-ಬಾಲ್ಯ

ಬೆಂಗಳೂರು-ಹಾಸನ ರಸ್ತೆಯ ನಲವತ್ತನಾಲ್ಕನೆಯ ಮೈಲಂತರದಲ್ಲಿ ಮಾದರಿ ಗ್ರಾಮದ ಕಳೆಯಿಂದ ಲಕಲಕಿಸುವ ಪುಟ್ಟಗ್ರಾಮ ಸೋಲೂರು. ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನಲ್ಲಿ ಹೆಸರಾಂತ ಗ್ರಾಮವೂ ಹೌದು. ಈ ಹೆಸರಿನ ಇನ್ನೊಂದು ಗ್ರಾಮ ಇರಲಾರದು.

ವೀರಶೈವ ಸಾಹಿತ್ಯದ ಪ್ರಕಾಂಡ ಪಂಡಿತರೆನಿಸಿದ್ದ ಮಾಗಡಿ ವೀರಪ್ಪ ಶಾಸ್ತ್ರಿಗಳು ಜನ್ಮತಃ ಸೋಲೂರಿನವರು. ವೀರಪ್ಪ ಶಾಸ್ತ್ರಿಗಳು 'ಎಸ್' ಎಂಬ ಇನಿಷಿಯಲ್ ಇರಿಸಿಕೊಳ್ಳಲು ಸೋಲೂರು ಕಾರಣ. ಶಾಸ್ತ್ರಿಗಳು ಪುರುಷ ಸರಸ್ವತಿಗಳೆನಿಸಿದ್ದವರು. ಹತ್ತೊಂಬತ್ತನೆಯ ಶತಮಾನದಲ್ಲಿ ವೀರಶೈವ ಸಾಹಿತ್ಯದ ಪ್ರಕಟಣೆಗಳನ್ನು ಎತ್ತಿನ ಗಾಡಿಯಲ್ಲಿ ತುಂಬಿಕೊಂಡು ಸಂತೆ-ಸಂತೆಗೆ ಕೊಂಡೊಯ್ದು ಮಾರಾಟ ಮಾಡುತ್ತಿದ್ದರು. ಗ್ರಂಥಗಳನ್ನು ರಚಿಸುತ್ತಿದ್ದರು.

ವಿಜಯನಗರದ ಅಚ್ಯುತ ರಾಯನ ಕಾಲದಲ್ಲಿ ಸಣ್ಣ ಪಾಳೆಯ ಪಟ್ಟಾಗಿದ್ದ ಸೋಲೂರು ತಿಮ್ಮಪ್ಪನಾಯಕನೆಂಬ ಪಾಳೆಯಗಾರನ ಆಡಳಿತಕ್ಕೆ ಸೇರಿತ್ತು. ಕ್ರಿ.ಶ. 1537 ರ ಸಮಯದಲ್ಲಿದ್ದ ಈ ನಾಯಕ ಆ ಪ್ರದೇಶದಲ್ಲಿ ಮದುವೆ ಸುಂಕ ವಿಧಿಸಿದ್ದರ ಬಗ್ಗೆ ಶಾಸನ ದೊರೆತಿದೆ.

ಸೋಲೂರಿನ 'ಚಿಲುಮೆ' ಮಠ ಧಾರ್ಮಿಕ ಕ್ಷೇತ್ರವಾಗಿ; ನೀರಚಿಲುಮೆಯಿಂದಾಗಿ ಪ್ರಸಿದ್ಧಿ ಪಡೆದಿತ್ತು. ಈ ಗ್ರಾಮಕ್ಕೆ 'ಸೋಲೂರು' ಎಂದೇಕೆ ಹೆಸರು ನಿಂತಿತೋ ತಿಳಿದು ಬಂದಿಲ್ಲ. ಪ್ರಾಯಶಃ ಯಾವುದೋ ರಾಜನಿಗೆ ಈ ಸ್ಥಳದಲ್ಲಿ ಸೋಲುಂಟಾದ್ದರಿಂದ 'ಸೋಲೂರು' ಹೆಸರಾಗಿ ನಿಂತಿರಬಹುದು.

ಇಲ್ಲಿ ಹುಟ್ಟಿದ ಸೋಲೂರು ಸಿದ್ದಪ್ಪನವರು. ರಾಜಕೀಯ ಕ್ಷೇತ್ರದಲ್ಲಿ ಬೆಳ್ಳಿ ಚುಕ್ಕೆಯಂತೆ ಬೆಳಗಿ ಎರಡು ವಿಧಾನ ಸಭಾ ಚುನಾವಣೆಗಳಲ್ಲಿ ಮತ ಪಡೆದು ಗೆದ್ದು ಸೋಲರಿಯದ ಸಿದ್ದಪ್ಪ ಎಂಬ ಹೆಸರು ಪಡೆದಿದ್ದರು ಇವರು ಮೈಸೂರು ಪ್ರಜಾಪ್ರತಿನಿಧಿ ಚುನಾವಣೆಯಲ್ಲಿಯೂ ಸೋಲುಕಂಡವರಲ್ಲ. ವಿಧಾನಸಭಾ ಕಲಾಪಗಳ ಹೊತ್ತಗೆಗಳಲ್ಲಿ ಸೋಲೂರು ಎಂಬ ಹೆಸರನ್ನು ಶಾಶ್ವತ ನಿಲ್ಲಿಸಿದವರು.

ಅತಿ ಬಡತನದ ರೈತ ಕುಟುಂಬದ ಸಂಜಾತರಾಗಿ ಕೇವಲ ನಾಲ್ಕು ತರಗತಿಗಳಲ್ಲಿ ಕನ್ನಡ ಕಲಿತು, ರಾಜಕೀಯವನ್ನು ಕಾರ್ಯಕ್ಷೇತ್ರವನ್ನಾಗಿ ಆರಿಸಿಕೊಂಡು ಜೀವಿತವನ್ನೆಲ್ಲ ಜನಹಿತ ಕಾರ್ಯಕ್ಕೆ ವಿನಿಯೋಗಿಸಿದ ಸೋಲೂರು ಸಿದ್ದಪ್ಪನವರು

ತಮ್ಮ ಮುತ್ಸದ್ಧಿತನದಿಂದಾಗಿ ಜೀವಿತ ಕಾಲದಲ್ಲಿಯೇ ದಂತಕತೆಯಾಗಿ ಕೀರ್ತಿಗಳಿಸಿದ್ದರು. ಈಗಲೂ ಸೋಲೂರು ಆಜುಬಾಜಿನ ಗ್ರಾಮಗಳಲ್ಲಿ ಯಾರಾದರೂ ಚತುರ ವ್ಯಕ್ತಿಯಿದ್ದರೆ ಆತನನ್ನು ಸೋಲೂರು-ಸಿದ್ದಪ್ಪ ಎಂಬ ಅಡ್ಡ ಹೆಸರಿಟ್ಟು ಕರೆಯುತ್ತಿದ್ದಾರೆ. ಅಷ್ಟರ ಮಟ್ಟಿಗೆ ಅವರು ಜನಪ್ರಿಯರಾಗಿದ್ದರು.

ಸೋಲೂರು ಸಿದ್ದಪ್ಪನವರ ತಂದೆ ತಾಯಿಗಳು ಜನ್ಮದಾರಭ್ಯ ಕೃಷಿಕರು. ಊರಿನ ಈಶಾನ್ಯ ದಿಕ್ಕಿನ ಸಂಗಮೇಶ್ವರ ಗದ್ದುಗೆಯ ಪೂಜೆ ಅವರಿಗೆ ನಿರತವಾಗಿ ಬಂದಿದ್ದ ವ್ರತ. ಮಹಂತೇಶ-ಸಂಗಮೇಶ ಎಂಬಿಬ್ಬರು ಶರಣರು. ಅವರಲ್ಲಿ ಹಿರಿಯ ಸಂಗಮೇಶರು ತಾಯಿಯ ನಿಜಸಮಾಧಿಯ ಎದುರು ನಿರ್ವಿಕಲ್ಪಸಮಾಧಿಗೆ ಹೋಗಿದ್ದರು. ಈಗ ಈ ಕ್ಷೇತ್ರಕ್ಕೆ ಕಡಲೆಮಠವೆಂಬ ಅಂಕಿತವಿದೆ. ಇಲ್ಲಿನ ಸಮಾಧಿ ಒಂದು ಉರಿಗದ್ದುಗೆಯೆಂದೇ ಪ್ರತೀತಿ, ಇದರ ಮೇಲೆ ಕಡಲೆ ಚೆಲ್ಲಿದರೆ ಅವು ಹುರಿಗಡಲೆಯಾಗಿ ಅವಲುಗೊಳ್ಳುತ್ತಿದ್ದವೆಂದು ಮಹಿಮೆಯಿತ್ತು.

ಇಂಥ ಪವಿತ್ರ ಗದ್ದುಗೆಗಳ ಅರ್ಚನೆಯಿಂದ ಬಡದಂಪತಿಗಳಾದ ಚನ್ನವೀರ ದೇವರು ಮತ್ತು ಸಾಕಮ್ಮ ಇವರಿಗೆ ಭಕ್ತಿ ಸಂಚಯ, ಪುಣ್ಯಸಂಚಯಗಳೇ ಪ್ರಧಾನವಾಗಿದ್ದವು. ಕೊಂಚ ಭೂಮಿ ಕಾಣಿಯಿತ್ತು. ಇವರಿಗೆ ನಾಲ್ಕು ಜನ ಗಂಡು ಮಕ್ಕಳು. ಒಂದನೇ ನಂಜಪ್ಪ. ಎರಡನೇ ರುದ್ರಪ್ಪ, ಮೂರನೇ ಸಿದ್ದಲಿಂಗಪ್ಪ, ಇವರಾದ ಮೇಲೆ ನಮ್ಮ ಜನನಾಯಕ ಸೋಲೂರು ಸಿದ್ದಪ್ಪನವರು 1894 ರಲ್ಲಿ ಹುಟ್ಟಿದರು. ಹುಟ್ಟಿದ ದಿನಾಂಕದ ಬಗ್ಗೆ ಖಚಿತವಿಲ್ಲ 1890 ಎಂದು ಹೇಳುವವರೂ ಉಂಟು. ಹುಟ್ಟಿದ ಕೊನೆ ಮಗನ ಬಲಗಣ್ಣು ದೊಡ್ಡದಾಗಿ ಕೊಂಚ ವಕ್ರವಾಗಿತ್ತು. ವಂಡರಗಣ್ಣಿನ ಮಗ ಹುಟ್ಟಿದ ಮೇಲೆ ಮನೆಯ ಸ್ಥಿತಿ-ಗತಿ ಸುಧಾರಿಸಿದಂತೆ ಸಂಸಾರ ಬಲವಾಯಿತು. ಕುಟುಂಬ ನಿರ್ವಹಣೆಗೆ ತಂದೆ ಚನ್ನವೀರದೇವರು ತುಪ್ಪದ ವ್ಯಾಪಾರಕ್ಕಿಳಿದರು. ಹಳ್ಳಿ ಗಾಡಿನಲ್ಲಿ ಉತ್ಪಾದನೆಗೊಳ್ಳುತ್ತಿದ್ದ 'ತುಪ್ಪ' ವನ್ನು 'ಸೊಲಿಗೆ'ಯಲ್ಲಿ ಅಳಕೊಂಡು ಇಂತಿಷ್ಟು ಬೆಲೆಗೆ ಕೊಂಡು ಬೆಂಗಳೂರಿಗೊಯ್ದು ಲಾಭಕ್ಕೆ ಮಾರುವದಾಗಿತ್ತು. ಎಲ್ಲ ಮಕ್ಕಳನ್ನು ಶಾಲೆಗೆ ಸೇರಿಸಿದಂತೆ ಕೊನೆಯ ಮಗನನ್ನು ಸೇರಿಸಿದ್ದರು. ನಾಲ್ಕು ತರಗತಿ ಓದು ಮುಗಿಸಿ ಕಲಿತಷ್ಟೇ ಸಾಕೆಂದು ಸಿದ್ದಪ್ಪ ಶಾಲೆಬಿಟ್ಟರು. ಪುಟ್ಟ ಬಾಲಕನ ಕೈಬೆರಳುಗಳು ಗಣಿತದ ಲೆಕ್ಕಾಚಾರಗಳನ್ನು ಎಣಿಸುತ್ತಿದ್ದರಿಂದ ಹುಡುಗ ಪ್ರತಿಭಾವಂತನೆಂಬ ಸುದ್ದಿಯಾಯಿತು. ಆಗ್ಗೆ ಹೆಂಡದ ಬಾಬಿನ ಕಂಟ್ರಾಕ್ಟ್ ಹೊಂದಿದ್ದ ಕೆಂಗೇಗೌಡ, ದಂಡಿನ ಗೌಡ ಎಂಬಿಬ್ಬರು ಸೋದರ ಸಾಹುಕಾರರು ಸಿದ್ದಪ್ಪನವರನ್ನು ಬಾಬಿನ ಲೆಕ್ಕ ಬರೆವ ಕೆಲಸಕ್ಕಿಟ್ಟುಕೊಂಡರು ಚುರುಕುಬುದ್ಧಿ-ಪ್ರಾಮಾಣಿಕತೆ ಸಂಪನ್ನತೆಗಳನ್ನು ಮೈಗೂಡಿಸಿಕೊಂಡಿದ್ದ ಹುಡುಗ

ಸಿದ್ದಪ್ಪನಿಗೆ ತಿಂಗಳಿಗೆ ಎರಡು ರೂಪಾಯಿ ಸಂಬಳ ದೊರೆಯುತ್ತಿತ್ತು. ಹೆಂಡದ ಬಾಬಿನಿಂದ ಬರುತ್ತಿದ್ದ ಹಣವನ್ನು ಪ್ರತಿವಾರ ಹತ್ತು ಮೈಲಿ ನಡೆದು ಮಾಗಡಿ ಖಜಾನೆಗೆ ಜಮಾ ಮಾಡಿ ಬರಬೇಕಾಗಿತ್ತು. ಎಳೆತನದಲ್ಲಿಯೇ ನಡೆವ ಕಾಲುಗಳಿಗೆ ಕಸುವು ತುಂಬಿಸಿಕೊಳ್ಳುತ್ತಿದ್ದರು. ನಡೆವ ರೂಢಿಯನ್ನು ಮೈಗೂಡಿಸಿಕೊಂಡು ಇವರು ಮುಂದೆ ಎಡವದೆ ಬದುಕು ಸಾಗಿಸಿದರು. ಧನಿಕರ ಕೈಕೆಳಗಿನ ಕರಣಿಕ ವೃತ್ತಿಯಿಂದ ವಿನಯ ಸಂಪನ್ನತೆ ತಂತಾನೇ ಎದೆ ತುಂಬಿಕೊಳ್ಳುತ್ತಿತ್ತು. ಮುಂದೆ ಹೆಂಡದ ಬಾಬಿನ ಸಾಹುಕಾರರಿಗೆ ಕುಣಿಗಲ್ ತಾಲ್ಲೂಕಿನ ಹರಾಜು ನಿಂತು ಸಿದ್ದಪ್ಪನವರು ಸೋಲೂರಿನಿಂದ ಕುಣಿಗಲ್ಲಿಗೆ ಹೋಗಬೇಕಾಯಿತು. ಅಲ್ಲಿಯೇ ವಾಸವಿದ್ದರು. ಈಡಿಗರ ಹೆಂಡದ ಬಾಬಿನ ಲೆಕ್ಕ ಬರೆದರು. ಇದರಿಂದ ಹಣ ಬಂತೋ ಇಲ್ಲವೋ ಆದರೆ ಯೌವನವಂತೂ ಬಂದೇಬಿಟ್ಟಿತು. ಸಿದ್ದಪ್ಪ ಹದಿನೆಂಟು ಮುಟ್ಟಿದ. ಕೈದೊಡ್ಡದಾಯಿತು. ಬೆರಳುಗಳು ನೀಳವಾದವು. ಲೆಕ್ಕ ಬರೆಯುವ ಕೆಲಸ ಬುದ್ಧಿ ಮತ್ತೆಗೆ ಸವಾಲಾಗಲಿಲ್ಲ. ಸೇಂದಿ ಗುತ್ತಿಗೆದಾರರಿಗೆ ವಿದಾಯ ಹೇಳಿ, ಬದುಕನ್ನು ಕಲಿಯಲು ಮತ್ತೆ ಸೋಲೂರಿಗೆ ಬಂದರು. ಪುಟ್ಟಮನೆ, ಒಟ್ಟು ಕುಟುಂಬ ಅಣ್ಣಂದಿರೊಡನೆ ಸಹಬಾಳ್ವೆ, ಸೋಲೂರಿನಲ್ಲಿ ಇದ್ದಷ್ಟು ದಿನವೂ, ಸಂಗಮೇಶ್ವರನ ಗದ್ದುಗೆಗೆ ಕೈಮುಗಿದರು.

ಸುತ್ತಮುತ್ತಲ ಪ್ರದೇಶದಲ್ಲಿ ರೈತರು ಹೇರಳವಾಗಿ ರಾಗಿ–ಬೆಳೆಯುತ್ತಿದ್ದರು. ಆ ಕಾಲದಲ್ಲಿ ಪಟ್ಟಣಿಗರು ಮತ್ತು ಮೇಲ್ವರ್ಗದವರು ಆಪೇಕ್ಷಿಸಿ ರಾಗಿ ತಿನ್ನುತ್ತಿರಲಿಲ್ಲ. ರಾಗಿಮುದ್ದೆಯೂಟವನ್ನು ಜೈಲು ಊಟವೆಂದೇ ಜರೆಯುತ್ತಿದ್ದರು. ಬೆಳೆ ಬೆಳೆದ ರೈತರು ಕೊಳ್ಳುವವರಿಲ್ಲದೆ ದಾಸ್ತಾನು ಮಾಡಲು ಸ್ಥಳವಿಲ್ಲದೆ, ತಮ್ಮ ತಮ್ಮ ಹೊಲಗಳಲ್ಲಿ 'ಹಗೇವು' ತೋಡಿ, ತಳಕ್ಕೆ ರಾಗಿ 'ಉಬ್ಬಲು' ಹರಡಿ ಅದರ ಮೇಲೆ ರಾಗಿ ಸುರಿದು ಜತನವಾಗಿ ಮುಚ್ಚಿಬಿಡುತ್ತಿದ್ದರು. ಕೆಲವರ ಹಗೇವುಗಳಿಗೆ ಮಳೆನೀರು ಜಿನುಗಿ ದಾಸ್ತಾನು ಮಾಡಿದ್ದ ಧಾನ್ಯವೆಲ್ಲ ಹಾಳಾಗುತ್ತಿತ್ತು. ಮಾರಾಟಕ್ಕೆ ಮುಂದಾದರೆ ತೀರಾ ಅಗ್ಗದ ಬೆಲೆಗೆ ಕೊಡಬೇಕಾಗಿತ್ತು ಮಾರದೇ ಇರುವುದೇ ಕ್ಷೇಮವೆನಿಸಿತ್ತು. ಅದೇ ಕಾಲಕ್ಕೆ ಗಾದೆಯೊಂದು ಹುಟ್ಟಿಕೊಂಡಿತ್ತು. ಹಳೇ ರಾಗಿ ಮುದ್ದೆಗೆ ಹುಳಿ ಮಜ್ಜಿಗೆ ಸಾರು" 'ಕಾಸಿಗೆ ಸೇರು ರಾಗಿ' ಎಂಬ ದುಸ್ಥಿತಿಯೊದಗಿತ್ತು. ಸೋಲೂರು ಸಿದ್ದಪ್ಪ ಹಳ್ಳಿಯ ಹಗೇವುಗಳಲ್ಲಿ ಕೆಟ್ಟು ಹಾಳಾಗುತ್ತಿದ್ದ ರಾಗಿಗೆ ಒಂದು ಕಾಗದ ಸ್ಥಾನ ನೀಡಲು ಮುಂದಾದರು. ಸುಗ್ಗಿಯಲ್ಲಿ ರೈತರಿಂದ ರಾಗಿಕೊಂಡು ಬೆಂಗಳೂರಿನ ಹಳೇ ತರಗು ಪೇಟೆಯ ಮಂಡಿಗಳ ಮುಂದೆ ರಾಶಿ ಸುರಿದು ಬಂದಷ್ಟು ಬೆಲೆಗೆ ಮಾರುವ ದಂಧೆ ಹಿಡಿದರು. 1918 ರ ಸುಮಾರಿಗೆ ಮೈಸೂರು ರಾಜ್ಯದಲ್ಲಿ

ಇನ್‌ಫ್ಲೂಯಂಜಾ ಜ್ವರದ ಖಾಯಿಲೆ ಹರಡಿತು. ಆಹಾರಧಾನ್ಯಗಳ ಕೊರತೆ ವಿಪರೀತವಾಯ್ತು ಅದೇಕಾಲದಲ್ಲಿ ಪ್ರಪಂಚದ ಮೊದಲನೆ ಯುದ್ಧವೂ ನಡೆಯುತ್ತಿತ್ತು. ಸರ್ .ಎಂ. ವಿಶ್ವೇಶ್ವರಯ್ಯನವರು ಸಂಸ್ಥಾನದ ದಿವಾನರಾಗಿದ್ದರು. ದೇಶದ ಬರ ಪರಿಸ್ಥಿತಿಯನ್ನು ನಿಯಂತ್ರಿಸಲು ನಾನಾ ಬಗೆಯ ಪರಿಹಾರಗಳನ್ನು ಕೈಗೊಂಡರು. ಆಹಾರ ಧಾನ್ಯಗಳ ರಫ್ತನ್ನು ನಿಲ್ಲಿಸಲಾಯ್ತು, ಪರಮಾವಧಿ ಚಿಲ್ಲರೆ ಮಾರಾಟ ಬೆಲೆಯನ್ನು ನಿಗದಿ ಪಡಿಸಲಾಯ್ತು. ದೇಶದೆಲ್ಲೆಡೆ ಡಿಪೋಗಳನ್ನು ತೆರೆಯಲಾಯ್ತು (ನ್ಯಾಯಬೆಲೆ ಅಂಗಡಿ) ಬೆಂಗಳೂರು ಮಾರುಕಟ್ಟೆಯಲ್ಲಿ ಅಕ್ಕಿ ರೂಪಾಯಿಗೆ $3^1/_2$ ಸೇರು, ರಾಗಿ ರೂಪಾಯಿಗೆ 4 ಸೇರು ಎಂದು ನಿಗದಿಯಾಗಿತ್ತು. ಇದು ಆಗ್ಗ ದಾಖಲೆ ಬೆಲೆಯಾಗಿತ್ತು. ಇದೆಲ್ಲ ಆಗುವಾಗ ಸೋಲೂರು ಸಿದ್ದಪ್ಪನವರಿಗೆ ಇಪ್ಪತ್ತನಾಲ್ಕರ ಹರೆಯ.

## 'ತುಂಬು ಸಂಸಾರದಲ್ಲಿ'

ಸೋಲೂರು ಸಿದ್ದಪ್ಪನವರ ಹತ್ತಿರದ ನೆಂಟರಲ್ಲಿ ಹಲವರು ಬೆಂಗಳೂರಿನ ಪ್ರಸಿದ್ಧ ಮಂಡಿ ಮಾಲೀಕರಾಗಿದ್ದರು. ರಂಗೇನಹಳ್ಳಿ ರೇವಣ್ಣನವರು, ಹರಳೂರು ಸಿದ್ದಪ್ಪನವರು, ನಾರಸಂದ್ರದ ಎನ್ ಸಿದ್ದಪ್ಪ ಸಹೋದರ ಹುಣ್ಣೀಗೆರೆ ಗುರುಸಿದ್ದಪ್ಪನವರು ಇತ್ಯಾದಿ ಇವರೆಲ್ಲ ಸೋಲೂರು ಸಿದ್ದಪ್ಪನವರ ರಾಗಿ ವ್ಯಾಪಾರಕ್ಕೆ ಪರೋಕ್ಷ ಬೆಂಬಲ ನೀಡಿದರು. ರಾಗಿಯನ್ನು ತಿಂದವನು ನಿರೋಗಿತಾನಾಗುವನು' ಇದು ಸರ್ವಜ್ಞ ಕವಿಯ ಅನುಭವಾಮೃತ. ಸಿದ್ದಪ್ಪನವರು ಹಳ್ಳಿಯ ನೀತಿವಂತ ರಾಗಿಯನ್ನು ಪಟ್ಟಣಿಗರಿಗೆ ಒದಗಿಸಿ 'ರಾಗಿಯನು ಮಾರುವನು ಸಿರಿವಂತನಾಗುವನು' ಎಂಬ ಹೊಸಗಾದೆಗೆ ಕಾರಣರಾದರು. ಸಾಲು ಸಾಲು ಬಂಡಿಗಳಲ್ಲಿ ರಾಗಿ ತುಂಬಿಕೊಂಡು ಬೆಂಗಳೂರಿಗೂ–ಸೋಲೂರಿಗೂ ಲಾಳಿಯಾಡಿದರು. ರೈತ ಸಮುದಾಯ ಸಿದ್ದಪ್ಪನವರಿಗೆ ಹತ್ತಿರ ಹತ್ತಿರವಾಯಿತು. ವ್ಯಾಪಾರದಲ್ಲಿ ವೃತ್ತಿನಿಷ್ಠೆ, ತೋರುತ್ತಿದ್ದರಿಂದ ಬಹುಬೇಗನೆ ರೈತರಿಗೆ ಬೇಕಾದ ಮನುಷ್ಯರಾದರು.

ಯುವಕ ಸಿದ್ದಪ್ಪನ ಚುರುಕುತನ ಮತ್ತು ಸಭ್ಯತೆಗಳು ನೆಂಟರ ಕಣ್ಣು ಸೆಳೆದವು. ತಮ್ಮ ಮಂಡಿಗಳಿಗೆ ಕರೆದು ಕೂಡಿಸಿಕೊಂಡು ಪ್ರೋತ್ಸಾಹದ ನುಡಿಯಾಡಿದರು. ಬೆಂಗಳೂರಿನ ಭಾಗ್ಯಲಕ್ಷ್ಮಿ ಕಟಾಕ್ಷದಂತೆ ಮಂಡಿ ರೇವಣ್ಣನವರ ಸುಪುತ್ರಿ ಚನ್ನಬಸಮ್ಮನವರನ್ನು ಸಿದ್ದಪ್ಪನವರು ಕೈ ಹಿಡಿದು ಚಾಮರಾಜಪೇಟೆ ಎರಡನೇ ಮುಖ್ಯರಸ್ತೆಯಲ್ಲಿದ್ದ ಛತ್ರದಂತಹ ಮಾವನ ಮನೆಯಲ್ಲಿಯೇ ಇದ್ದುಬಿಟ್ಟರು.

ಭಾವಮೈದುನ ಹೊನ್ನಪ್ಪನವರು ಅತಿ ಪ್ರೀತಿಯಿಂದ ನೋಡಿಕೊಂಡರು. ಸಂಸಾರದ ತಾಪತ್ರಯಗಳು ಸೋಲೂರರನ್ನು ಹಿಡಿದು ಕಟ್ಟಿ ಹಾಕಲಿಲ್ಲ ಒಳಗೆ ಕುಮುಲುತ್ತಿದ್ದ ಪ್ರಜಾ ಸೇವಾಕಾಂಕ್ಷೆಗಳಿಗೆ ಕುಮ್ಮಕ್ಕು ದೊರೆಯಿತು.

1929ರ ವೇಳೆಯಲ್ಲಿ ಸಿದ್ದಪ್ಪನವರು 'ನಾಗರತ್ನ' ಎಂಬ ಹೆಣ್ಣು ಮಗುವಿಗೆ ತಂದೆಯಾದರು. ನಾಗರತ್ನ ಬೆಳೆದು ಹತ್ತೊಂಬತ್ತು ವರ್ಷವಾದ ಮೇಲೆ ಎರಡನೆ ಮಗ ಶಿವಪ್ರಸಾದ್ ಹುಟ್ಟಿದರು. ಬಹುದಿನದ ಮೇಲೆ ಮನೆಗೆ ಬೆಳಕಾಗಿ ಬಂದ ಶಿವಪ್ರಸಾದರಿಗೆಂದು ನಾಗರತ್ನ ಇಟ್ಟ ಪ್ರೀತಿಯ ಹೆಸರು 'ಜ್ಯೋತಿ' ಅನಂತರ ಅದೇ ಅವರ ಹೆಸರಾಗಿ ನಿಂತಿತು (28–3–1945)

1948 ಜೂನ್ ತಿಂಗಳಿನಲ್ಲಿ ಸುಪುತ್ರಿ ನಾಗರತ್ನಮ್ಮನನ್ನು ಪದವೀಧರರಾದ ನಂದೀಶ್ವರ್ ಎಂಬುವರಿಗೆ ಕೊಟ್ಟು ವಿವಾಹ ಮಾಡಿದರು (ಇದೇ ನಂದೀಶ್ವರರು ಮುಂದೆ ಕೇಂದ್ರ ಸರ್ಕಾರದ ಅಡಿಷನಲ್ ಸ್ಟಾಂಡಿಂಗ್ ಕೌನ್ಸಿಲ್‌ನ (ನ್ಯಾಯಾಂಗ) ಉನ್ನತ ಹುದ್ದೆಯನ್ನಲಂಕರಿಸಿದ್ದರು) ಸೋಲೂರು ಸಿದ್ದಪ್ಪನವರು ಪೂರ್ಣಾವಧಿ ಸಾರ್ವಜನಿಕ ಸೇವೆಗೆ ನಿಂತ ಮೇಲೆ ಮನೆಯ ವಹಿವಾಟು ಧರ್ಮ ಪತ್ನಿ ಚನ್ನಬಸಮ್ಮನವರ ಪಾಲಿಗೆ ಬಂತು. ಅಳಿಯ ಬಂದ ಮೇಲೆ ಪಕ್ಕದ ಶಿರಸಿ ರೋಡಿನಲ್ಲಿ ಹೆಂಚಿನ ಮನೆಯೊಂದನ್ನು ಬಾಡಿಗೆಗೆ ಪಡೆದು ವಾಸಕ್ಕೆ ಹೋದರು (1952). ಅವರಿವರು ಹೇಳುವಂತೆ ಆ ಮನೆ ಸಿದ್ದಪ್ಪನವರ ಪಾಲಿಗೆ ಅದೃಷ್ಟದ ಮನೆ. ಎರಡನೇ ಪುತ್ರ ಜ್ಯೋತಿ ಹುಟ್ಟಿದ ವರುಷ ಮತ್ತೊಂದು ಅದೃಷ್ಟ ಸಿದ್ದಪ್ಪನವರ ಮನೆಯ ಬಾಗಿಲು ತಟ್ಟಿತ್ತು. ಸಾರಿಗೆ ಪರವಾನಗಿಗೆಂದು ಸರಕಾರಕ್ಕೆ ಸಲ್ಲಿಸಿದ್ದ ಅರ್ಜಿ ಸಾರಿಗೆ ಮಾರ್ಗವೊಂದರ ಪರವಾನಗಿಯಾಗಿ ಶುಭ ಹಾರೈಸಿತ್ತು. ಬೆಂಗಳೂರಿನ ಬದುಕಿಗೊಂದು ಆರ್ಥಿಕ ಬುನಾದಿ ಹಾಕಿಕೊಟ್ಟಂತಾಯಿತು. ಬೇರೆ ಆಲೋಚನೆ ಮಾಡದೆ ಸಾರಿಗೆ ವಾಹನವೊಂದನ್ನು ಖರೀದಿಸಿದ್ದರು. ಅದಕ್ಕೆ 'ಬಸವೇಶ್ವರ' ಎಂದು ಹೆಸರಿಟ್ಟರು. ಬಸವಣ್ಣನವರ ಕಾಯಕ ತತ್ವಕ್ಕೆ ಬದ್ದವಾದ ಆ ಪ್ರಯಾಣಿಕರ ಬಸ್ಸು ಹಳ್ಳಿಹಳ್ಳಿಗಳನ್ನು ಬೆಸೆಯುವ ಐರಾವತವಾಯಿತು. ಪ್ರಯಾಣಕ್ಕೆ ಕಾಲ್ನಡಿಗೆ ಮತ್ತು ಕಾಲವನ್ನು ಬಹುವಾಗಿ ವ್ಯಯಿಸುತ್ತಿದ್ದ ರೈತಾಪಿಗಳು ಬೆಂಗಳೂರು ಮುಂತಾದ ಊರುಗಳಿಗೆ ಪ್ರಯಾಸವಿಲ್ಲದೆ ಪಯಣಿಸುವಂತಾಯಿತು.

ಸೋಲೂರರದ್ದು ಲೆಕ್ಕಾಚಾರದ ಬದುಕು ಆರ್ಥಿಕವಾಗಿ ಬಲಶಾಲಿಗಳಾಗುತ್ತಿದ್ದಂತೆಲ್ಲಾ ಬುದ್ಧಿವಂತಿಕೆಯೂ ಬಲಗೊಳ್ಳುತ್ತಿತ್ತು. ಕೀರ್ತಿಸಂಪಾದನೆಯ ರಾಜಮಾರ್ಗ ಹಿಡಿದು ನಡೆದರು. ರಾಜಕಾರಣದಲ್ಲಿ

ನಿರುಮ್ಮಳವಾಗಿ ಏಗುವಂತಾದರು ಮಾಗಡಿ ತಾಲ್ಲೂಕಿನ ಮತದಾರರು ತಮ್ಮ ರಾಜಕೀಯ ನಾಯಕನನ್ನು ಸಿದ್ದಪ್ಪನವರಲ್ಲಿ ಕಂಡುಕೊಂಡರು.

ಮಾಗಡಿ ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ಬಹು ಸಂಮೃದ್ಧಿಯನ್ನು ಕಂಡಿತ್ತು. ಈಗಲೂ ಕೆಂಪೇಗೌಡನ ವಂಶಸ್ತರಲ್ಲಿ ಕೆಲವರು ಮಾಗಡಿ ತಾಲ್ಲೂಕಿನ ಹುಲಿಕಲ್ಲಿನಲ್ಲಿ ನೆಲೆಸಿದ್ದಾರೆ. ಈ ವಂಶದ ಕೊನೆಯ ಅರಸ ಕೃಷ್ಣೇಂದ್ರ ಎಂಬಾತ ಹೆಬ್ಬೂರಿನ ಹೇರಂಬ ಕವಿಯಿಂದ ಎಡೆಯೂರು ಸಿದ್ದಲಿಂಗೇಶ್ವರ ಸಾಂಗತ್ಯವನ್ನು ಬರೆಯಿಸಿ ಕೃತಾರ್ಥನಾಗಿದ್ದ. ಇಮ್ಮಡಿ ಕೆಂಪೇಗೌಡನ ಕಾಲಕ್ಕೆ ಭರ್ಗಾವತಿ ಕೆರೆ, ಕೆಂಪ ಸಾಗರ, ಸೋಮೇಶ್ವರ ದೇವಾಲಯ, ರಂಗನಾಥ ಸ್ವಾಮಿ ದೇವಾಲಯ ಮುಂತಾದ ಸಮಾಜೊ ಧಾರ್ಮಿಕ ಕಾರ್ಯಗಳು ನಡೆದಿದ್ದವು, ಅದಾದ ಮೇಲೆ ಮಾಗಡಿ ಪಟ್ಟಣ ಮತ್ತಿತರ ಪ್ರದೇಶಗಳು ಅಭಿವೃದ್ಧಿ ಕಾಣದೆ ಕೊಂಪೆಯಾದವು. ರಾಜಧಾನಿ ಬೆಂಗಳೂರಿಗೆ ಕೇವಲ ನಲವತ್ತು ಮೈಲು ಹತ್ತಿರವಾದ ಮಾಗಡಿ ಪ್ರದೇಶ ಸರ್ಕಾರಕ್ಕೆ ಸಾವಿರಾರು ಮೈಲಿಗಳಷ್ಟು ದೂರವಾಗಿಯೇ ಉಳಿಯಿತು

ಸೋಲೂರು ಸಿದ್ದಪ್ಪನವರು ಮೈಸೂರು ಶಾಸನ ಸಭೆಯ ಸದಸ್ಯರಾದ ಮೇಲೆ ಮಾಗಡಿ ರಾಜಧಾನಿಯ ನಡುವಣ ಅಂತರವನ್ನು ಕಡಿಮೆ ಮಾಡಿಕೊಳ್ಳತೊಡಗಿತ್ತು, ದುರ್ಗಮಬೆಟ್ಟ ಸಾಲುಗಳ ನಡುವೆ ಊರೂರುಗಳ ಸಂಪರ್ಕ ರಸ್ತೆಗಳಾದವು.

ಸಾವನದುರ್ಗ ಮಾಗಡಿ ಪಟ್ಟಣಕ್ಕೆ ಆಗ್ನೇಯಕ್ಕೆ ಏಳು ಕಿಲೋ ಮೀಟರು ಅಂತರದಲ್ಲಿದೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರಿಗೆ ಬಹು ಪ್ರಿಯವಾದ ದುರ್ಗವೂ ಇದಾಗಿತ್ತು. ಆಗ್ಗೆ ಇದು ದುರ್ಗಮ ಅರಣ್ಯ ಪದೇಶವಾಗಿತ್ತು. ಮಾರುಕಟ್ಟೆಯಲ್ಲಿ ಸಾವನದುರ್ಗದ ಬೇಲದ ಹಣ್ಣುಗಳಿಗೆ ಅಪಾರ ಬೇಡಿಕೆಯಿತ್ತು. ಇಲ್ಲಿ ಬೆಳೆಯುತ್ತಿದ್ದ ಬಹು ಗುಣಮಟ್ಟದ ಬಿದಿರು ಅನೇಕನೇಕ ಮೇದರಿಗೆ ಉದ್ಯೋಗ ಒದಗಿಸುತ್ತಿತ್ತು. ಮಾಗಡಿಯ ಬಿದಿರು ಮಂಕರಿಗಳು, ಬಾಗಿನದ 'ಮೊರ' ಮುಂತಾದವು ಅಗ್ಗದ ಬೆಲೆಗೆ ಮಾರಾಟವಾಗುತ್ತಿದ್ದವು.

ಸಾವನದುರ್ಗದ ಕಾಡಿನಲ್ಲಿ 'ಇರುಳಿಗರು' ಎಂಬ ಬುಡಕಟ್ಟು ಜನರು ವಾಸಿಸುತ್ತಿದ್ದಾರೆ. ಈಗ್ಗೆ ನಲವತ್ತು ವರ್ಷಗಳ ಹಿಂದೆ ಕಾಡಿನ ಕಲ್ಲು ಪೊಠರೆಗಳಲ್ಲಿ ಗುಹೆಗಳಲ್ಲಿಯೇ ವಾಸಿಸುತ್ತಿದ್ದ ಈ ಜನಾಂಗ ಈಗಿನ ನಾಗರೀಕತೆಯ ಬದುಕಿಗೆ ಆಕರ್ಷಿತರಾಗಿ ಮನೆಕಟ್ಟಿಕೊಂಡು ವಾಸಿಸುವಂತಾಗಿದ್ದಾರೆ. ಹಿಂದೂ ವರ್ಣಾಶ್ರಮಧರ್ಮಗಳಿಗೆ ಒಳಪಡದ ಅಚಾರ ವಿಚಾರ, ಸಂಪ್ರದಾಯಗಳನ್ನು

ಪಾಲಿಸುತ್ತಿರುವ ಈ ಜನಾಂಗ ಮಹದೇಶ್ವರ ಬೆಟ್ಟದ ಸೋಲಿಗರಿಗೆ ಹತ್ತಿರ ಹತ್ತಿರವಾದ ಜೀವನವನ್ನು ನಡೆಸುತ್ತಿದ್ದಾರೆ.

ಮಾಗಡಿ ತಾಲ್ಲೂಕಿನಲ್ಲಿ ಗಿರಿದುರ್ಗಗಳಿವೆ, ನದೀ ಮೂಲಗಳಿವೆ, ಬಯಲು ಸೀಮೆಯಿದೆ, ಹಳ್ಳ ಕೊಳ್ಳಗಳಿವೆ, ಇಲ್ಲಿನ 'ಅಗ್ನಿಶಿಲೆ'ಗಳು ದೇಶವಿದೇಶಗಳಿಗೆ ರಫ್ತಾಗುತ್ತಿವೆ. ಆದರೂ ಅಭಿವೃದ್ಧಿ ಕಾಣದೆ ಶತಶತಮಾನಗಳ ಹಿಂದೆ ಹೇಗಿತ್ತೋ ಹಾಗೆಯೇ ಇದೆ.

## ಕಾಂಗ್ರೆಸಿಗೆ ಪ್ರವೇಶ.

1935-36 ರ ಅವಧಿಯಲ್ಲಿ ಮಹಾತ್ಮ ಗಾಂಧೀಜಿಯವರು, ನಂದೀ ಬೆಟ್ಟದಲ್ಲಿ ವಾಸ್ತವ್ಯ ಹೂಡಿದ್ದರು. ಅವರ ಸಂದರ್ಶನಕ್ಕಾಗಿ; ಭೇಟಿಗಾಗಿ ಭಾರತ ಸ್ವಾತಂತ್ರ ಸಂಗ್ರಾಮದ ಹುರಿಯಾಳುಗಳು ನಂದೀಬೆಟ್ಟಕ್ಕೆ ಬರುತ್ತಿದ್ದರು.

ದೊಡ್ಡಬಳ್ಳಾಪುರದ ರುಮಾಲೆಚನ್ನಬಸವಯ್ಯನವರು, ಆಗಿಂದಾಗ್ಗೆ ನಂದಿಬೆಟ್ಟಕ್ಕೆ ಹೋಗಿ ಬಾಪೂರವರನ್ನು ಸಂದರ್ಶಿಸಿ ಬರುತ್ತಿದ್ದರು. ಅವರ ಸಂಗಡ ವಕೀಲ ಟಿ. ಸಿದ್ದಲಿಂಗಯ್ಯ ಒಮ್ಮೆ ನಂದಿಬೆಟ್ಟಕ್ಕೆ ಹೋಗಿ ಗಾಂಧೀಜಿಯವರನ್ನು ಭೇಟಿಯಾದರು. ಆಗಿನಿಂದಲೇ ಅವರ ಪ್ರಭಾವಕ್ಕೊಳಗಾಗಿಬಿಟ್ಟರು. ಅದೇ ಸಮಯಕ್ಕೆ ಸರಿಯಾಗಿ ಸರ್ದಾರ್‌ವಲ್ಲಭಬಾಯಿ ಪಟೇಲರು ಮಹಾತ್ಮರ ಬಳಿ ಬಂದಿದ್ದರು. ಅವರನ್ನು ಟಿ. ಸಿದ್ದಲಿಂಗಯ್ಯನವರು ದೊಡ್ಡಬಳ್ಳಾಪುರಕ್ಕೆ ಕರೆತಂದರು. ಬೃಹತ್‌ಸಭೆ ನಡೆಸಿದರು. ಪಟೇಲರ ಸಿಂಹವಾಣಿಗೆ ಪ್ರಭಾವಿತರಾದ ಜನ, ದೇಶಭಕ್ತಿಯ ಆತ್ಮ ಸಂಧಾನ ನಡೆಸಿದರು. ಅನೇಕರು ಕಾಂಗ್ರೇಸಿಗರಾದರು. ಟಿ. ಸಿದ್ಧಲಿಂಗಯ್ಯನವರು ವಕೀಲ ವೃತ್ತಿ ಬಿಟ್ಟರು. ಸಂಘಟನೆಗೆ ಮುಂದಾದರು. ಕಾಂಗ್ರೆಸಿನ ಅಧ್ಯಕ್ಷರೂ ಆದರು. 1937ರ ಸುಮಾರಿನಲ್ಲಿ ಹಲವು ಧುರೀಣರ ಜೊತೆ ಸಂಘಟನಾ ಪ್ರವಾಸ ಕೈಗೊಂಡರು. ಕ್ಲೋಸ್‌ಪೇಟೆ (ಈಗಿನ ರಾಮನಗರ) ಯಿಂದ ಮಾಗಡಿಗೆ ಬಂದರು. ಅವರನ್ನು ಅಲ್ಲಿನ ಮುಖಂಡರು ಸ್ವಾಗತಿಸಿದರು. ಮುನಿಸಿಪಲ್ ಸಮಿತಿಯ ಸದಸ್ಯರನ್ನು ಮೊದಲು ಕಾಂಗ್ರೇಸಿಗೆ ಸೇರಿಸಿಕೊಂಡರು. ಅಂತಹ ಸಂದರ್ಭದಲ್ಲಿಯೇ, ಪತ್ರಕರ್ತ ಚಿಕ್ಕೇಗೌಡರು, ಹರತಿ ಆದಿರಾಜಯ್ಯ, ನಾರಾಯಣಶೆಟ್ಟಿ, ಶಿವರಾಮಸಿಂಗ್ ಮುಂತಾದವರೊಡನೆ ಸೋಲೂರು ಸಿದ್ದಪ್ಪನವರೂ ಅಧಿಕೃತವಾಗಿ ಕಾಂಗ್ರೇಸಿಗರಾಗಿ ಹೋದರು.

## "ಶಿವಪುರ ಧ್ವಜ ಸತ್ಯಾಗ್ರಹದಲ್ಲಿ"

ಮೈಸೂರು ಇತಿಹಾಸ ಸೇರಿದ ಘಟನೆ ಶಿವಪುರ ಧ್ವಜ ಸತ್ಯಾಗ್ರಹ. ಮೈಸೂರು ಕಾಂಗ್ರೇಸಿನ ಸಂಘಟನಾ ಶಕ್ತಿಯನ್ನು ಬ್ರಿಟಿಷರಿಗೆ ಪರಿಚಯ ಮಾಡಿಕೊಟ್ಟ ಲಯ ಭೀಷಣ ಸೌಮ್ಯರೂಪ. ಈ ಘಟನೆ ನಡೆದದ್ದು ಸಾವಿರದ ಒಂಭೈನೂರಾ ಮೂವತ್ತೆಂಟನೆಯ ಇಸವಿ, ಏಪ್ರಿಲ್ ಮಾಹೆಯ, ಹತ್ತನೇ ತಾರೀಖಿನಂದು. ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಟಿ. ಸಿದ್ದಲಿಂಗಯ್ಯನವರು ತಮ್ಮ ರೋಚಕ ಭಾಷಣವನ್ನು ಮುದ್ರಣ ಮಾಡಿಸಿಕೊಂಡು, ಶಿವಪುರಕ್ಕೆ ಬಂದಿದ್ದರು. 1938ರ ಸುಮಾರಿನಲ್ಲಿ ಶಿವಪುರ ಮೈಸೂರು ಜಿಲ್ಲೆಯ ಸರಹದ್ದಿಗೆ ಸೇರಿತ್ತು. ಮದ್ದೂರು ರೈಲ್ವೆ ನಿಲ್ದಾಣಕ್ಕೆ ಹತ್ತಿರವಿದ್ದ ಹತ್ತಾರು ಎಕರೆ ಹೊಲದ ಬಯಲಿನಲ್ಲಿ ಈ ಸಮಾವೇಶ ನಡೆಸಲು ತೀರ್ಮಾನವಾಗಿತ್ತು. ಸಮಾವೇಶದ ಸ್ವಾಗತ ಸಮಿತಿಯಲ್ಲಿ ಕೆ.ಟಿ. ಭಾಷ್ಯಂ. ಎಚ್.ಟಿ. ಗುಂಡಪ್ಪಗೌಡ, ಡಿ.ಎಸ್. ಮಲ್ಲಪ್ಪ, ಬಳ್ಳಾರಿಸಿದ್ದಮ್ಮ, ಯಶೋಧರಾದಾಸಪ್ಪ, ಎಚ್.ಕೆ. ವೀರಣ್ಣಗೌಡ. ಸಾಹುಕಾರ ಚನ್ನಯ್ಯ ಮುಂತಾದ ಪ್ರಾತಃ ಸ್ಮರಣೀಯರಿದ್ದರು.

ಸಾಹುಕಾರ ಚನ್ನಯ್ಯನವರು, ಶಿವಪುರ ಸತ್ಯಾಗ್ರಹದ ರೂವಾರಿಯಾಗಿದ್ದರು. ಅವರು ತನ್ನೆಲ್ಲ ಪ್ರತಿಭೆ ಮತ್ತು ಬೆಂಬಲದಿಂದ ಸತ್ಯಾಗ್ರಹವನ್ನು ಯಶಸ್ವಿಗೊಳಿಸಿದ್ದರು. ಸಾಹುಕಾರ ಚನ್ನಯ್ಯನವರನ್ನು ಕಾಂಗ್ರೆಸಿಗರು, 'ಮೈಸೂರಿನ ಜಮ್ನಾಲಾಲ್ 'ಬಜಾಜ್' ಎಂದೇ ಕರೆಯುತ್ತಿದ್ದರು ಕಾಂಗ್ರೇಸ್ ಅಧಿವೇಶನದ ಶಿವಪುರದಲ್ಲಿ ನಡೆಯಕೂಡದೆಂದು ಸರ್ಕಾರ ಬಹುಕಟ್ಟು ನಿಟ್ಟಿನ ಬಂದೋಬಸ್ತು ಮಾಡಿತ್ತು. ಬಹುದೊಡ್ಡ ಪೋಲೀಸು ಪಡೆ ಸ್ಥಳವನ್ನು ಸುತ್ತುವರೆದಿತ್ತು. ಮದ್ರಾಸಿನಿಂದ ಹ್ಯಾಮಿಲ್ಟನ್ ಎಂಬ ನಿರ್ದಯಿ ಬ್ರಿಟಿಷ್ ಅಧಿಕಾರಿ, ಇನ್‌ಸ್ಪೆಕ್ಟರ್ ಜನರಲ್ಲನಾಗಿ ಶಿವಪುರಕ್ಕೆ ಬಂದು ಮೊಕ್ಕಾಂ ಹೂಡಿದ್ದನು. ಮೈಸೂರು ಜಿಲ್ಲಾ ಮಾಜಿಸ್ಟ್ರೇಟ್ ಜಿ.ಎಂ. ಮೇಕ್ರಿ ಖುದ್ದು ಹಾಜರಿದ್ದು. ಸತ್ಯಾಗ್ರಹ ನಡೆಯದಂತೆ ಸೆಕ್ಷನ್ 144 ನ್ನು ಜಾರಿಗೊಳಿಸಿದ್ದರು.

ಪುರುಷರೆನ್ನದೆ, ಸ್ತ್ರೀಯರೆನ್ನದೆ, ಮಕ್ಕಳೆನ್ನದೆ ಅಸಂಖ್ಯ ಕಾಂಗ್ರೆಸ್ ಮನಸ್ಸಿನ ಜನ ಶಿವಪುರವನ್ನು ಕುರಿತು ಬರುತ್ತಿದ್ದರು. ಯಾವೊಬ್ಬರ ಹೃದಯದಲ್ಲಿ ಉದ್ರೇಕಗೊಳ್ಳುವಂಥ ಭಾವನೆಗಳಿರಲಿಲ್ಲ. ಗಾಂಧೀಜಿಯವರ ಶಾಂತಿ ಮತ್ತು ಅಹಿಂಸಾ ಮಾರ್ಗವೇ ಎಲ್ಲರ ಮನಸ್ಸುಗಳನ್ನು ನಿಯಂತ್ರಿಸಿತ್ತು. ಅಂದು ನೂರು ಎತ್ತಿನ ಬಂಡಿಗಳಲ್ಲಿ ಕಾಂಗ್ರೆಸ್ ಧುರೀಣರ, ನಾಯಕ ಮುಖಂಡರ, ಮೆರವಣಿಗೆ ನಡೆಯಿತು. ಯಾವುದೇ ರೀತಿಯ ಸಂಘರ್ಷಕ್ಕೆ ಅವಕಾಶವಿಲ್ಲದಂತೆ ಹತ್ತಿರ, ಹತ್ತಿರ ಲಕ್ಷ ದೇಶಭಕ್ತರಿಗೆ ಮನದಟ್ಟು ಮಾಡಿಸಲಾಗಿತ್ತು. ಹತ್ತು ಅಡಿ ಎತ್ತರದ ವೇದಿಕೆಯ

ಮೇಲೆ ಧ್ವಜ ಹಾರಿಸಿ "ವಂದೇ ಮಾತರಂ" ಹಾಡಿಸಿ ನಂತರ ಕಾಂಗ್ರೆಸ್ ಅಧ್ಯಕ್ಷ ಟಿ. ಸಿದ್ಧಲಿಂಗಯ್ಯನವರ ಮತ್ತು ಎಂ.ಎನ್. ಜೋಯಿಸ್ ಭಾಷಣವಾಗಬೇಕಾಗಿತ್ತು. ಜಿಲ್ಲಾ ಮಾಜಿಸ್ಟ್ರೇಟ್ ಜಿ.ಎಂ. ಮೇಕ್ರಿಯವರು ಪ್ರತಿಬಂಧಕಾಜ್ಞೆಯನ್ನು ಭಂಗಗೊಳಿಸಿದ ಅಪರಾಧಕ್ಕೆ ವಾರೆಂಟ್ ಜಾರಿಗೊಳಿಸಿ ಇಬ್ಬರು ಮುಖಂಡರನ್ನು ದಸ್ತಗಿರಿ ಮಾಡುವುದಿತ್ತು. ಅಷ್ಟರಲ್ಲಿ ಟಿ. ಸಿದ್ಧಲಿಂಗಯ್ಯನವರು ಧ್ವಜ ಹಾರಿಸಿಯೆ ಬಿಟ್ಟರು. ಸುನಂದಮ್ಮ ಎಂಬ ಕಾಂಗ್ರೆಸ್ ಕಾರ್ಯಕರ್ತೆ, ಮಧುರ ಕಂಠದ ಗಾಯಕಿ ಧ್ವಜ ಹಾರುತ್ತಲೇ " ವಂದೇ ಮಾತರಂ" ಹಾಡಿದರು ಇಡೀ ಸಭೆ ದೇಶಭಕ್ತಿಯಿಂದ ರೋಮಾಂಚಿತವಾಯಿತು. ತಾಳ್ಮೆ ಮತ್ತು ಶಾಂತಿಗಳಿಗಿರುವ ಮಹಾಶಕ್ತಿಯ ಪ್ರದರ್ಶನವಾಯಿತು. ಜಿ.ಎಂ. ಮೇಕ್ರಿ ದಕ್ಷ ಆಡಳಿತಗಾರರಾಗಿದ್ದರು. ಅವರೇನಾದರೂ ಅಂದು ದುಡುಕಿದ್ದರೆ ಶಿವಪುರ 'ಜಲಿಯನ್‌ವಾಲಾಬಾಗ್ ಆಗಿಬಿಡುತ್ತಿತ್ತು ಸತ್ಯಾಗ್ರಹಿಗಳ ರಕ್ತ ಹರಿದು ಭೂಮಿ ಕೆಸರಾಗುತ್ತಿತ್ತು. ಹ್ಯಾಮಿಲ್ಟನ್ ಎಂಬ ಐ.ಜಿ.ಪಿ. ಸಹಸ್ರಜನರ ರಕ್ತ ಹರಿಸಲು ಆದೇಶಕ್ಕಾಗಿ ಕಾಯುತ್ತಿದ್ದ. ಟಿ. ಸಿದ್ದಲಿಂಗಯ್ಯ ಮತ್ತು ಎಂ.ಎಸ್. ಜೋಯಿಸರನ್ನು ದಸ್ತಗಿರಿ ಮಾಡಿ ಪೋಲೀಸ್ ವಾಹನದಲ್ಲಿ ಕೂರಿಸಿಕೊಂಡು ಮಂಡ್ಯದತ್ತ ಕರೆದೊಯ್ದರು. ದಸ್ತಗಿರಿಯಾಗಿ ವೇದಿಕೆಯಿಂದ ಇಳಿಯುವಾಗ ಟಿ. ಸಿದ್ದಲಿಂಗಯ್ಯನವರು ಕಂಚಿನ ಕಂಠದಿಂದ ಈ ಧ್ವಜ ಸತ್ಯಾಗ್ರಹ ನಮ್ಮ ಅಂತಃ ಶಕ್ತಿಯ ಸಂಕೇತವಾಗಿದೆ ಇಂದಿಗೇ ಇದು ನಿಲ್ಲಬಾರದು" ಎಂದು ಮನವಿಮಾಡಿದರು. ಅಂದಿನಿಂದ ಪ್ರತಿದಿನ ಒಬ್ಬರಂತೆ ಹದಿನೇಳು ಜನ ಕಾಂಗ್ರೆಸ್ ಧುರೀಣರು ಧ್ವಜ ಸತ್ಯಾಗ್ರಹ ನಡೆಸಿ ಬಂಧಿತರಾದರು ಶಿವಪುರ ಧ್ವಜ ಸತ್ಯಾಗ್ರಹದ ಕೊನೆಯ ದಿನ ಕೆಂಗಲ್ ಹನುಮಂತಯ್ಯ ಮತ್ತು ಮಳವಳ್ಳಿ ವೀರಪ್ಪನವರು ಧ್ವಜ ಹಾರಿಸಿ ಬಂಧಿತರಾದರು ಶಿವಪುರ ಧ್ವಜ ಸತ್ಯಾಗ್ರಹ ದೇಶ ಭಕ್ತರ ವಿಜಯ ದುಂದು ಮೊಳಗಿಸಿತ್ತು. ಸರ್ಕಾರ ವಿಚಲಿತವಾಯಿತು. ಆಮೇಲೆ ವಲ್ಲಭಬಾಯಿ ಪಟೇಲರು ಮತ್ತು ಮೈಸೂರಿನ ದಿವಾನ ಮಿರ್ಜಾರವರ ನಡುವೆ ಒಪ್ಪಂದವಾಗಿ ಬಂಧಿತರಾಗಿದ್ದ ಧುರೀಣರೆಲ್ಲರ ಬಿಡುಗಡೆಯಾಯ್ತು.

ಸೋಲೂರರನ್ನು ಇತರ ಸತ್ಯಾಗ್ರಹಿಗಳ ಜೊತೆ ಬಂಧಿಸಲಿಲ್ಲ ಇದಕ್ಕೆ ಪ್ರಬಲ ಕಾರಣವೂ ಇತ್ತು. ಆ ವೇಳೆಗಾಗಲೇ ಅವರು ಮೈಸೂರು ಪ್ರಜಾಪ್ರತಿನಿಧಿ ಸಭೆಯ ಚುನಾಯಿತ ಸದಸ್ಯರಾಗಿದ್ದರು. ಮೈಸೂರಿನ ಸಂಸ್ಕೃತಿಯ ಪ್ರತಿನಿಧಿಗಳಂತೆ ಕಾಣುತ್ತಿದ್ದ ಅವರನ್ನು ಬಂಧಿಸದೆ ಕೈಬಿಟ್ಟರು ಕಾಂಗ್ರೇಸ್ ಕಾರ್ಯಕರ್ತರಂತೆ ಅಂದು ಅವರು ಗಾಂಧಿಟೋಪಿ ಧರಿಸಿರಲಿಲ್ಲ ಖಾದಿ ತೊಟ್ಟಿರಲಿಲ್ಲ.

## ಪ್ರಜಾಪ್ರತಿನಿಧಿ ಸಭೆ

ಮೈಸೂರು ರಾಜ್ಯದ ಭವಿಷ್ಯವಿರುವುದು ರಾಜಕೀಯ ಸುಧಾರಣೆಯಲ್ಲಿ ಎಂಬ ತಿಳಿವು ಮಹಾರಾಜ ನಾಲ್ಮಡಿ ಕೃಷ್ಣರಾಜಒಡೆಯರರಿಗೆ ಮೂಡಿತ್ತು. 1924ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳೂ ಮಹಾವಿದ್ವಾಂಸರು ಆಗಿದ್ದ ಸರ್‌ಬ್ರಜೇಂದ್ರನಾಥಸೀಲ್ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿ ವರದಿ ತಯಾರಿಸಲು ಆದೇಶ ನೀಡಿದರು. ಸೀಲ್ ಸಮಿತಿ ಅದೇ ವರ್ಷ ವರದಿತಯಾರಿಸಿತು ಅದರ ಸಾಧಕ ಬಾಧಕಗಳ ಬಗ್ಗೆ ಸಾರ್ವಜನಿಕ ಅಭಿಪ್ರಾಯಗಳನ್ನು ಕೇಳಿ ಸರ್ವಸಮ್ಮತವಾದ ಪ್ರಜಾಪ್ರತಿನಿಧಿ ಸಭೆ ಪ್ರಾರಂಭವಾಯಿತು. ಮಹಾರಾಜರು 1924ರ ಮಾರ್ಚಿ ಹದಿಮೂರರಂದು ವಿದ್ಯುಕ್ತವಾಗಿ ಉದ್ಘಾಟನೆ ಮಾಡಿದರು. ಅದು ಶಾಸನ ಬದ್ಧ ಸಂಸ್ಥೆಯೂ ಆಯಿತು. ಪ್ರಜಾಪ್ರತಿನಿಧಿ ಸಭೆ ಆಡಳಿತದ ಸರ್ವ ವಿಷಯಗಳ ಬಗ್ಗೆ ಚರ್ಚಿಸುವ ಅಧಿಕಾರ ಪಡೆಯಿತು. ಆರಂಭದಲ್ಲಿ 250–275 ಸಂಖ್ಯೆಯಲ್ಲಿ ಸದಸ್ಯರಿರಬೇಕೆಂದು ನಿರ್ಧರಿಸಲಾಯಿತು. ಇದರ ಪೈಕಿ 150 ಮಂದಿ ಸದಸ್ಯರು ಗ್ರಾಮಾಂತರ ಪ್ರದೇಶದಿಂದ ಚುನಾಯಿತರಾಗಬೇಕಾಗಿತ್ತು. ಚುನಾಯಿತ ಪ್ರಜಾಪ್ರತಿ ನಿಧಿ ಸಭೆಗೆ ಧುರೀಣರೆನಿಸಿದ್ದ. ಎಂ. ವೆಂಕಟಕೃಷ್ಣಯ್ಯ, ಸಿ. ಶ್ರೀನಿವಾಸ ರಾವ್, ಕರಣಿಕ ಕೃಷ್ಣಮೂರ್ತಿ, ಮುಂತಾದವರು ಆರಿಸಿಬಂದಿದ್ದರು. ಪ್ರಜಾಪ್ರತಿನಿಧಿ ಸಭೆಗೆ ಸದಸ್ಯರನ್ನು ಆರಿಸುವ ಮತದಾರರು ಸರ್ಕಾರಕ್ಕೆ 25 ರೂ. ಕಂದಾಯ ನೀಡುವವರೂ, ಪುರಸಭೆಗಳಿಗೆ 5 ರೂ. ತೆರಿಗೆ ನೀಡುವವರೂ ಮತದಾನದ ಹಕ್ಕು ಪಡೆದಿರುತ್ತಿದ್ದರು. ಪ್ರತಿ ಸದಸ್ಯರ ಅವಧಿ ಮೂರು ವರ್ಷಗಳೆಂದಾಗಿತ್ತು ಅದರಂತೆ 1927ರಲ್ಲಿ ಚುನಾವಣೆ ನಡೆಯಿತು, ಅದರಲ್ಲಿ ಯುವ ಮುಖಂಡರುಗಳಾದ ಟಿ. ಸಿದ್ದಲಿಂಗಯ್ಯ, ಎಚ್.ಸಿ. ದಾಸಪ್ಪ, ಕೆ.ಸಿ. ರೆಡ್ಡಿ ಡಿ.ಎಸ್. ಚಂದ್ರಶೇಖರಯ್ಯ ಮೊದಲಾದ ಪ್ರತಿಭಾನ್ವಿತರು ಆರಿಸಿಬಂದರು. ಸರಕಾರವನ್ನು ಟೀಕೆ ಮಾಡುವ ಜಾಗೃತಿ ಹುಟ್ಟು ಹಾಕಿದರು. ಇಂಥ ಯುವಕರ ಜೊತೆ ಜೊತೆ ಪ್ರತಿನಿಧಿಗಳಾಗಿ ಸೋಲೂರು ಸಿದ್ದಪ್ಪನವರು ಚುನಾಯಿತರಾಗಿದ್ದರು. ಅಲ್ಲಿಂದ ಸತತವಾಗಿ 1941 ಮತ್ತು 1945 ರ ಚುನಾವಣೆಗಳಲ್ಲಿ ಚುನಾಯಿತರಾದರು. ಈ ಹೊಸಚುನಾವಣೆಯಲ್ಲಿ ಕಾಂಗ್ರೆಸ್ ಸದಸ್ಯರಾಗಿದ್ದ ಕೆ. ಹನುಮಂತಯ್ಯನವರು ಬಹುಮತದಿಂದ ಆರಿಸಿ ಬಂದರು ಕಾಂಗ್ರೆಸ್ ಪಕ್ಷದ ನಾಯಕರಾಗಿಯೂ ಕಾರ್ಯನಿರ್ವಹಿಸಿದರು.

ಮುಂದಿನ 1949 ರಲ್ಲಿ ಮೈಸೂರು ದಿವಾನರು ಮಂತ್ರಿ ಮಂಡಲದಲ್ಲಿ ಮುಂದುವರೆಯುವುದು; ಜವಾಬುದಾರಿ ಸರ್ಕಾರದಲ್ಲಿ ಅನುಚಿತವೆಂದು ಚಳುವಳಿ ಪ್ರಾರಂಭವಾಯಿತು. ಅದೇ ವರ್ಷ ಆಗಸ್ಟ್ ತಿಂಗಳೇ ದಿವಾನರ ಸ್ಥಾನ ರದ್ದಾಯಿತು.

1950ರ ಜನವರಿ 26ರಂದು ತಾತ್ಕಾಲಿಕ ಸರಕಾರ ಅನಿವಾರ್ಯವಾಗಿ, ಸಂಪೂರ್ಣ ಕಾಂಗ್ರೆಸ್ ಮಂತ್ರಿ ಮಂಡಲ ರಚನೆಯಾಯಿತು ಕೆ.ಸಿ. ರೆಡ್ಡಿಯವರು ಮುಖ್ಯಮಂತ್ರಿಗಳಾದರು

## ಕೆಂಗಲ್ ಹನುಮಂತಯ್ಯನವರೊಂದಿಗೆ ಸ್ನೇಹ.

ಕೆಂಗಲ್ಲರನ್ನು ಶುದ್ಧ ಹಸ್ತದ ರಾಜಕಾರಣಿ, ನಿರ್ಮಲ ಮನಸ್ಸಿನ ಮುಖ್ಯಮಂತ್ರಿ ಸಂಸ್ಕೃತಿಯ ಹರಿಕಾರ, ಕಾವ್ಯಪ್ರೇಮಿ, ಭಾವಜೀವಿ ಎಂದೆಲ್ಲಾ ಸಮಕಾಲೀನ ಪತ್ರಿಕೆಗಳು ಬರೆಯುತ್ತಿದ್ದವು 1943 ರ ಸುಮಾರಿನಲ್ಲಿ ಟಿ.ಸಿದ್ದಲಿಂಗಯ್ಯ, ಎಸ್. ನಿಜಲಿಂಗಪ್ಪ, ಕೆಂಗಲ್ಲರು ಹಾಗೂ ಮತ್ತಿತರ ಕಾಂಗ್ರೆಸ್ ಧುರೀಣರು ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿದ್ದರು. 5–12–1942ರಲ್ಲಿ ಈಸೂರಿನ (ಶಿವಮೊಗ್ಗಜಿಲ್ಲೆ) ಸತ್ಯಾಗ್ರಹಿಗಳ ಪೈಕಿ ಗುರಪ್ಪ, ಮಲ್ಲಪ್ಪ, ಸತ್ಯನಾರಾಯಣಾಚಾರಿ, ಶಂಕರಪ್ಪ ಹಾಲಪ್ಪ ಎಂಬ ಐವರಿಗೆ ಗಲ್ಲುಶಿಕ್ಷೆಯಾಯಿತು. ಅವರನ್ನೆಲ್ಲ ಬೆಂಗಳೂರಿನ ಸೆಂಟ್ರಲ್ ಜೈಲಿನಲ್ಲಿ ನೇಣು ಹಾಕುವುದಿತ್ತು ಆ ಸಮಯದಲ್ಲಿ ಕಾಂಗ್ರೇಸ್ ಮುಖಂಡರು ಜೈಲಿನಲ್ಲಿಯೇ ಇದ್ದರೆ ತೊಂದರೆಯಾದೀತೆಂಬ ಭಯದಿಂದ ಜೈಲಿನವರು ನಿಜಲಿಂಗಪ್ಪ, ಕೆಂಗಲ್ಲರು ಮತ್ತು ಟಿ. ಸಿದ್ಧಲಿಂಗಯ್ಯನವರನ್ನು ಕೆ.ಜಿ. ಎಫ್. ಜೈಲಿಗೆ ವರ್ಗಾಯಿಸಿಬಿಟ್ಟರು ಕೆಂಗಲ್ಲರು ಉಳಿದಿಬ್ಬರು ಸ್ನೇಹಿತರಿಗೆ ಭಾಗವತ ಮಹಾಭಾರತ, ಜೈಮಿನಿಗಳನ್ನು ಓದಿ ಹೇಳುತ್ತಿದ್ದರು.

ಸೋಲೂರರಿಗೆ ಕೆಂಗೆಲ್ಲರೊಡನೆ ಸ್ನೇಹ ಕೇವಲ ರಾಜಕೀಯದ್ದಾಗಿರಲಿಲ್ಲ. ಉಡುಪಿನಲ್ಲಿ, ಆಲೋಚನೆಗಳಲ್ಲಿ, ದಿಟ್ಟತನದಲ್ಲಿ ಇಬ್ಬರೂ ಸಮಾನ ಮನಸ್ಕರಾಗಿದ್ದರು. ಕೆಂಗಲ್ಲರು 27–10–1938ರಂದು ಶಿವಪುರದಲ್ಲಿ ಧ್ವಜ ಹಾರಿಸುವಾಗ ಸೋಲೂರು ಸಿದ್ದಪ್ಪನವರೂ ಬಾಡನಿದ್ದರು ಮುಂದೆ ಕೆಂಗಲ್ಲರು, ಮುಖ್ಯಮಂತ್ರಿಗಳಾಗಿ ಆಡಳಿತದ ಚುಕ್ಕಾಣಿ ಹಿಡಿದಾಗ, ಸೋಲೂರು ಸಿದ್ದಪ್ಪನವರು ತಮ್ಮ ಮಿತ್ರರಾದ ಬಿ. ಶಿವಮೂರ್ತಿಶಾಸ್ತ್ರಿಗಳ ಜೊತೆಗೂಡಿ, ಕನ್ನಡ ಸಂಸ್ಕೃತಿ ಪ್ರಚಾರದ ಯೋಜನೆಯನ್ನು ಮುಂದಿಟ್ಟರು. ಸ್ವತಃ ಕಾವ್ಯ ಪ್ರೇಮಿಗಳಾದ ಕೆಂಗಲ್ಲರು ಒಪ್ಪಿದರು ನಂತರ ಕುಮಾರ ವ್ಯಾಸಭಾರತ, ಜೈಮಿನಿಭಾರತ ಮುಂತಾದ ಅನೇಕ ಕೃತಿಗಳು ಪ್ರಕಟಗೊಂಡು

ಅಗ್ಗದ ದರದಲ್ಲಿ ಸಾಹಿತ್ಯಪ್ರೇಮಿಗಳಿಗೆ ದೊರೆತವು. ಅಂದು ಕೆಂಗಲ್ಲರು ಬೆಳಗಿಸಿದ ಸಾಹಿತ್ಯ ದೀಪ ನಿರುಪಾದಿಕಬೆಳಗುತ್ತಲೇ ಇದೆ.

ಮನೋಲ್ಲಾಸಕ್ಕಾಗಿ ಕೆಂಗಲ್ಲರು ಪತ್ನೀಸಮೇತ ಸೋಲೂರಿಗೆ ಹೋಗುತ್ತಿದ್ದರು. ಬೆಂಗಳೂರಲ್ಲಿಯೇ ವಾಸವಿದ್ದ ಸಿದ್ದಪ್ಪನವರೂ ಊರಿನ ದಾಯಾದಿಗಳ ಮನೆಗಳಲ್ಲಿ ಕೆಂಗಲ್ಲರಿಗೆ ಪ್ರಿಯವಾಗಿದ್ದ ಅಕ್ಕಿರೊಟ್ಟಿ–'ರಾಗಿಮುದ್ದೆ. ಉಪ್ಪೆಸರು ತಯಾರು ಮಾಡಿಸಿ ಊಟೋಪಚಾರ ಮಾಡಿಸುತ್ತಿದ್ದರು. ಆಮೇಲಾಮೇಲೆ ಕಾಂಗ್ರೇಸಿನಲ್ಲಿ ಎರಡು ಬಣಗಳಾದಾಗ, ಸೋಲೂರರು ಸ್ವಜಾತಿಯ ಎಸ್. ನಿಜಲಿಂಗಪ್ಪ ನವರನ್ನು ಬೆಂಬಲಿಸದೆ, ಆಪ್ತ ಸ್ನೇಹದ ಕೆಂಗಲ್ಲರನ್ನು ಬೆಂಬಲಿಸಿದರು. ಕಡಿದಾಳ್ ಮಂಜಪ್ಪನವರು ಮುಖ್ಯ ಮಂತ್ರಿಗಳಾದರು. ನಿಜಲಿಂಗಪ್ಪನವರಿಗೆ ಸೋಲೂರರ ಬಗ್ಗೆ ಸಿಟ್ಟು ಮೂಡಿತ್ತು. ಮುಂದಿನ ಚುನಾವಣೆಯಲ್ಲಿ ನಿಮಗೆ ಕಾಂಗ್ರೆಸ್ ಟಿಕೆಟ್ ಸಿಗದಂತೆ ಮಾಡುತ್ತೇನೆ ಎಂದೆಲ್ಲಾ ಛೇಡಿಸಿದರು. ಅದಕ್ಕುತ್ತರವಾಗಿ "ಸ್ವಾಮಿ ನಾವು ರಾಗಿಮುದ್ದೆಯುಂಡ ನಿಯತ್ತಿನ ಜನ, ನಮ್ಮದೇನಿದ್ದರೂ ಸ್ನೇಹರಾಜಕಾರಣ, ಪಕ್ಷ ರಾಜಕಾರಣಕ್ಕೆ ಎರಡನೆಯ ಸ್ಥಾನ, ಜಾತಿ ರಾಜಕಾರಣಕ್ಕೆ ಕನಿಷ್ಟಸ್ಥಾನ ತಾವು ಕಾಂಗ್ರೇಸ್ ಟಿಕೆಟ್ ನೀಡಿದಾಕ್ಷಣ ಗೆದ್ದುಬರುತ್ತೇವೆಂದು ಯಾವ ಖಾತರಿ?" ಅದನ್ನು ಮಾನ್ಯ ಮತದಾರರು ನಿರ್ಣಯಿಸುವವರು, ನಿಮ್ಮ ಟಿಕೆಟ್ಟಿನಿಂದಲೇ ಎಲ್ಲ ಕಾಂಗ್ರೇಸಿಗರೂ ಗೆಲ್ಲುವುದಾದರೆ ವಿರೋಧ ಪಕ್ಷಕ್ಕೆ ಯಾರು ತಾನೇ ಆರಿಸಿಬರುತ್ತಾರೆ? ನಮ್ಮ ತಲೆಯ ಮೇಲೆ ಪರಂಪರೆಯ ಮೈಸೂರು ಪೇಟವಿದೆ ಅದನ್ನು ತೆಗೆದು ಟೋಪಿ ಹಾಕಿಸಿಕೊಂಡರೆ ಜನರೆ ನಮ್ಮನ್ನು ಗುರುತಿಸುವುದಿಲ್ಲ". ಎಂದಿದ್ದರಂತೆ, ರಾಜಕೀಯ ಕ್ಷೇತ್ರದಲ್ಲಿ ವಿಶ್ವಾಸವಾಗಲೀ ವಿರೋಧವಾಗಲೀ ಬಹುಚಂಚಲವಾದುವು ನಂತರದ ದಿನಗಳಲ್ಲಿ ನಿಜಲಿಂಗಪ್ಪನವರು ಸೋಲೂರರನ್ನು ವಿಶ್ವಾಸಕ್ಕೆ ತೆಗೆದುಕೊಂಡರಂತೆ.

ಬದುಕಿನುದ್ದಕ್ಕೂ ಕೆಂಗಲ್ಲರು ಮತ್ತು ಸೋಲೂರರು ಗೆಳೆಯರಾಗಿದ್ದರು ಒಂದೇ ತಿಂಗಳಲ್ಲಿ ಇಬ್ಬರೂ ಇಹಲೋಕ ತ್ಯಜಿಸಿ ಪರದಲ್ಲಿಯೂ ಗೆಳೆತನ ಸಾಧಿಸಿದಂತೆ ಕಂಡರು. ಕೆಂಗಲ್ಲರ ಒಡನಾಟದಿಂದ ದೇಶದ ದಿಲ್ಲಿ ನಾಯಕರನ್ನು ಪರಿಚಯ ಮಾಡಿಕೊಂಡರು ಜವಾಹರಲಾಲರನ್ನು ಕೆಲವು ಸಲ ಆತ್ಮೀಯವಾಗಿ ಮಾತಾಡಿಸಿ ತಮ್ಮ ಉರ್ದು ಭಾಷೆಯ ವೈಖರಿಯನ್ನು ಮೆರೆಸಿದ್ದರು. ಸೋಲೂರು ಸಿದ್ದಪ್ಪನವರಿಗೆ ರಂಗಸ್ವಾಮಿ ಗುಡಿಬೀದಿಯಲ್ಲಿ ವಾಸವಿದ್ದ ಪಂಡಿತರತ್ನ ಬಿ. ಶಿವಮೂರ್ತಿಶಾಸ್ತ್ರಿಗಳ ಸ್ನೇಹವಿತ್ತು, ನಾಡು–ನುಡಿಯ ಅಭಿವೃದ್ಧಿಯ ವಿಷಯದಲ್ಲಿ ಶಾಸ್ತ್ರಿಗಳು ಅನೇಕ ಸಲಹೆಗಳನ್ನು ನೀಡುತ್ತಿದ್ದರು. ಸಾಹಿತಿಗಳ ಸತ್ಸಂಗದಲ್ಲಿ ಭಾಷಾಸಂಪತ್ತು ಹೆಚ್ಚುತ್ತದೆಂಬ

ಸಂಗತಿಯನ್ನು ಅರಿತಿದ್ದರು. ನಾಡಿನ ಸಂಸ್ಕೃತಿಯ ಹರಿಕಾರರಾದ ವಿದ್ವಾಂಸರನ್ನು ಗೌರವಿಸುವುದೆಂದರೆ ತಮ್ಮನ್ನು ತಾವೇ ಗೌರವಿಸಿಕೊಂಡಂತೆ ಎಂಬ ತಿಳಿವು ಅವರದ್ದಾಗಿತ್ತು. ಇಬ್ಬರೂ ಮೈಸೂರು ಸಂಸ್ಕೃತಿಯ ಪ್ರತೀಕವೆನಿಸಿದ್ದ 'ಪೇಟಾ' ದ ಹಿರಿಮೆಯನ್ನು ಮೆರೆಸಿದ್ದರು, ಸೋಲೂರು ಸಿದ್ದಪ್ಪನವರ ಪೇಟಾ ಬಳಸಿಬಳಸಿ ಸಡಿಲವಾಯಿತೆಂದರೆ ಅಥವಾ ವಿಶೇಷ ಸಮಾರಂಭಕ್ಕೆ ಹೊಸ ಪೇಟಾದ ಅಗತ್ಯವಾಯಿತೆಂದರೆ ತಮ್ಮ ಪೇಟಾ ತಾವೇ ಕಟ್ಟಿ ಕೊಳ್ಳುತ್ತಿರಲಿಲ್ಲ. ಚಾಮರಾಜಪೇಟೆಯ ಹೆಸರಾಂತ ಮಂಡಿವರ್ತಕ ಬಾಳಗಂಗಪ್ಪನವರನ್ನು ಕರೆಯಿಸಿ ಕೊಂಡು ಪೇಟಾ ಕಟ್ಟಿಸಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ತಲೆಯ ಮೇಲೆ ಪೇಟವಿಲ್ಲದೆ ಹೊರಗೆ ಕಾಣಿಸಿಕೊಳ್ಳುತ್ತಿರಲಿಲ್ಲ.

## ಮತಕ್ಷೇತ್ರದಲ್ಲಿ

ಹಳೆಯ ತಲೆಮಾರಿನ ರಾಜಕಾರಣಿಗಳಿಗೆ ದೇಶದ ಪ್ರಗತಿಯ ಬಗ್ಗೆ ಇನ್ನಿಲ್ಲದ ಹಂಬಲವಿತ್ತು. ಅಭಿವೃದ್ಧಿ ಒಂದು ಸವಾಲಿನಂತೆ ಎದುರಾಗಿತ್ತು. ಶಾಸಕರು ಮತ್ತು ಮಂತ್ರಿಗಳಿಗೆ ದೇಶದ ಪುನರುತ್ಥಾನದ ಬಗ್ಗೆ ಇದ್ದ ಹಂಬಲ ಕಾಳಜಿ; ಆರ್ಥಿಕ ಮುಗ್ಗಟ್ಟಿನ ಕಾರಣ ಮರುಟುತ್ತಿತ್ತು. ಸಂಪರ್ಕ ರಸ್ತೆಗಳು, ನೀರಾವರಿ, ಶಿಕ್ಷಣ, ವಸತಿ, ಒಂದೊಂದೂ ದೇಶದ ಸಂಪನ್ಮೂಲಗಳ ಅದಾಯವನ್ನು ಹಂಚಿಕೊಳ್ಳಬೇಕಾಗಿತ್ತು. ಪಂಚವಾರ್ಷಿಕ ಯೋಜನೆಗಳು ಪ್ರಗತಿಯ ಊರುಗೋಲಾದವು. ಜನಪ್ರತಿನಿಧಿಗಳಿಗೆ ಅಪಾರ ಸಂಕಲ್ಪಶಕ್ತಿಯಿತ್ತು. ಬೊಕ್ಕಸದಲ್ಲಿ ಹಣವಿರಲಿಲ್ಲ. ಜನಸೇವೆಯೆಂದರೆ ಅವರೆಲ್ಲರ ದೃಷ್ಟಿಯಲ್ಲಿ ದೇಶದ ಪ್ರಗತಿಯೆಂದೇ ಅರ್ಥೈಸಲಾಗುತ್ತಿತ್ತು. ಶಿಕ್ಷಣ, ಕೃಷಿ, ಕೈಗಾರಿಕೆ, ಸಾರಿಗೆ ಕ್ಷೇತ್ರಗಳಲ್ಲಿ ಪವಾಡ ಸದೃಶಪ್ರಗತಿಯಾದರೆ ಸಾಮಾಜಿಕ ಬದುಕು ಸುಧಾರಿಸುತ್ತದೆ ಎಂಬ ಗುರಿಯಿತ್ತು. ಇರುವಷ್ಟು ತೈಲದಿಂದಲೇ ಪ್ರಗತಿಯ ಪ್ರಣತಿ ಬೆಳಗಬೇಕಾಗಿತ್ತು. ಸಮಸ್ಯೆಗಳ ಸುಳಿಯಲ್ಲಿ ಈಸಲು ಸಾಧ್ಯವೇ? ಎಂಬ ಹಿಂಜರಿಕೆ ಜನಪ್ರತಿನಿಧಿಗಳಿಗಿರಲಿಲ್ಲ. ಅಂತಹ ಪ್ರಾತಃ ಸ್ಮರಣೀಯ ರಾಜಕಾರಣಿಗಳು ಅಂದು ಪ್ರಗತಿ ಮಂತ್ರ ಪಠಿಸಿ ಜನರನ್ನು ತಮ್ಮೊಡನೆ ಸೇರಿಸಿಕೊಂಡು ಹಾದಿನಡೆಯದಿದ್ದರೆ, ಇಂದು ಕಾಣುತ್ತಿರುವ ಕರ್ನಾಟಕ ಹೇಗಿರುತ್ತಿತ್ತೋ ಊಹಿಸಲೂ ಸಾಧ್ಯವಾಗದು.

ಆಡಳಿತದ ಚುಕ್ಕಾಣಿ ಹಿಡಿದವರು ಯಾವ ಪಕ್ಷದವರೇ ಆಗಿರಲಿ ಅವರೆಲ್ಲರೂ ನಮ್ಮ ಜನ, ನಮ್ಮ ಕನ್ನಡಿಗರು, ಆ–ಪಕ್ಷದವರಾಗಲೀ ವಿ–ಪಕ್ಷದವರಾಗಲೀ ಎಲ್ಲರ

1753-3

ಮನಸ್ಸುಗಳು ಪ್ರಗತಿ ತೇರಿಗೆ ಕೈ ಹಾಕಿ ಮುನ್ನಡೆಸಿದ್ದವು ಬದಲಾವಣೆಗಳೇನೇ ಆಗಿರಲಿ ಆ ಹಿರಿಮೆ, ರಾಜಕಾರಣಿಗಳು ಬಿಟ್ಟು ಹೋಗಿರುವ ಆದರ್ಶಗಳು, ರಾಜಕೀಯ ಶಿಸ್ತು, ಸಾರಸ್ವ ಕಲಹ, ಮುತ್ಸದ್ದಿತನ. ರಾಜಕೀಯ ಪರಂಪರೆಯಾಗಿ ಉಳಿದು ಹೋಗಿದೆ. ಆಗಿನ ಪ್ರಜಾಪ್ರತಿನಿಧಿಗಳು, ಅಧ್ಯಯನ ಶೀಲರಾಗಿದ್ದರು, ಅಂದಂದಿಗೆ ಅವರು ಕಲಾಪಗಳಲ್ಲಿ ಮಾಡಿದ ಭಾಷಣಗಳು, ನೀಡಿದ ಸಲಹೆಗಳು ಸೂಚಿಸಿದ ಮಾರ್ಗಗಳು ಇಂದಿಗೂ ದಾರಿದೀಪಗಳಂತೆ ಬೆಳಕು ಚೆಲ್ಲುತ್ತಿವೆ. ಅಂದಿನ ನಮ್ಮ ರಾಜ್ಯದ ಶಾಸಕರಿಗೆ ಕನ್ನಡದ ನೆಲ-ಜಲ-ಸಂಪನ್ಮೂಲಗಳ ಬಗ್ಗೆ ಅಪಾರ ಮಮಕಾರವಿತ್ತು. ಅಷ್ಟೇ ಪ್ರಮಾಣದಲ್ಲಿ ಸಾಹಿತ್ಯ-ಸಂಗೀತ-ಸಂಸ್ಕೃತಿಗಳ ಬಗ್ಗೆಯೂ ಇತ್ತು. ಬಲ್ಲವರು ಹೇಳುವಂತೆ ಕೆಂಗಲ್ ಹನುಮಂತಯ್ಯನವರು ಗಮಕಿಗಳಾಗಿದ್ದರು ಅಂದವರು ಅವುಗಳ ಬಗ್ಗೆ ಚಿಂತಿಸುತ್ತಲೂ ಇದ್ದರು.

ಬಹಳಷ್ಟು ಶಾಸಕರಿಗೆ ಸಾಮಾನ್ಯ ಓದು ಬರಹ ಮಾತ್ರ ಬರುತ್ತಿತ್ತು ಹಾಗೆಂದು ಅವರು ಮೂಢರಾಗಿರಲಿಲ್ಲ ಹಳ್ಳಿ ಬಾಳಿನ ಅನುಭವದ ಕೆನೆಯಂತಿದ್ದರು. ನೈತಿಕತೆ ಹೊಂದಿದ್ದರು. ಕಾರ್ಯಾಂಗದ ಸೂಟು ಬೂಟುಗಳನ್ನು ಪಳಗಿಸುವ ಛಾತಿಯಿತ್ತು. ಅಧಿಕಾರಿಗಳಿಗೂ-ಶಾಸಕರಿಗೂ ಶೈಕ್ಷಣಿಕ ತಾರತಮ್ಯವಿದ್ದರೂ, ಶಾಸಕರು ನೀರಿಗಿಳಿದು ಈಜಿದಡ ಸೇರುವ ಶಾಸ್ತ್ರವನ್ನು ಅಭ್ಯಾಸದಿಂದ ಮೈಗೂಡಿಸಿ ಕೊಂಡಿದ್ದರು ಅಧಿಕಾರಿಗಳು ಈಜುವುದು ಹೇಗೆಂದು ಓದಿಕೊಂಡಿದ್ದವರು ಪುಸ್ತಕದ ಬದನೇಕಾಯಿ ಕಾನೂನುಗಳನ್ನು ಮುಂದಕ್ಕಿಕೊಂಡು ಮಾತಾಡುತ್ತಿದ್ದರು. ಕೆಲಸ ಕಲಿಯದ ಅಧಿಕಾರ ಶಾಹೀ ಶಾಸಕರು ಕೆಲಸ ಕಲಿಸಿದರು.

ಸೋಲೂರರು ಓದಿದ್ದು ಅಲ್ಪ ಕಲಿತದ್ದು ಅಪಾರ, ಇತರರ ಗುಣ ಸ್ವಭಾವಗಳನ್ನು ಬಹುಬೇಗನೆ ಗ್ರಹಿಸುವ ಚಾಣಾಕ್ಷತನ ಅಪಾರವಾಗಿತ್ತು ಸರ್ಕಾರಿ ಅಧಿಕಾರೀ ಜನರ ವಿಳಂಬ ನೀತಿಯನ್ನು ಕುರಿತು ಅವರೊಮ್ಮೆ ಹಾಸ್ಯಭರಿತವಾಗಿ ಹೇಳಿದ್ದರು. ಯಾರೋ ಒಂದೆಡೆ ಎಲೆಕ್ಷನ್‌ಬಂದಾಗ ಕಾಂಗ್ರೆಸ್‌ನೋರು ಊರಿಗೆ ಬರ್‍ತಾರೆ ಉಳಿದಂತೆ ಇಲ್ಲ ಎಂದು ಗುಂಪಿನಲ್ಲಿ ಗೊಣಗಿದ್ದರು. ಅವರಿಗೆ ಉತ್ತರ ಕೊಡುತ್ತಾ ಸೋಲೂರರು ಪರಿಹಾಸ ಮಾಡಿದ್ದರು. ಆಗ್ಗೆ ಕಾಂಗ್ರೆಸಿಗೆ ನೊಗ ಹೂಡಿದ ಜೋಡೆತ್ತುಗಳು ಚನಾವಣಾ ಚಿಹ್ನೆಯಾಗಿತ್ತು" ನೋಡ್ರೀ ನೊಗಅನ್ನೊಂದು ನ್ಯಾಯಾಂಗ, ಬಲಗೋಲು ಶಾಸಕಾಂಗ, ಎಡಗೋಲು ಕಾರ್ಯಾಂಗ, ಹೇರು ಕಟ್ಟಿ ಹೊಲ ಊಳುವಾಗ ಯಾವ ಎತ್ತು ಕಣ್ಣಿ ಹಾಕಿದರೂ, ಉಳುಮೆ ಸರಿಯಾಗುವುದಿಲ್ಲ. ನೀವು ಹೇಳ್ತೀರಿ ಕಾಂಗ್ರೇಸ್ ಜನ ಚುನಾವಣೆ ಬಂದಾಗ ಮಾತ್ರ ಓಟು ಕೇಳಲು ಬರ್‍ತಾರೆ ಉಳಿದಂತೆ ರಾಜಧಾನಿಯಲ್ಲೇ ಇರ್‍ತಾರೇಂತ. ಈ

ವಿಷಯ ನಿಮಗೆ ತಿಳಿದಿರಬೇಕಾದ್ದು ಸರಿ. 'ವೆರಿಗುಡ್' ಮುಂಗಾರು ಮಳೆ ಬಿದ್ದಾಗ ಹೊಲ ಉಳುತ್ತಾರೆ ಬೆಳೆ ಬೆಳೆದಾಗ ಯಾರು ಹೊಲಕ್ಕೆ ಹೇರು ಕಟ್ತಾರೆ, ಶಾಸನ ಸಭೆ ನಡೀತಿರೋವಾಗ ನಾವಿಲ್ಲಿ ಬಂದು ಏನು ಮಾಡೋದೈತೆ ಈ ಊರಿಗೆ ರಸ್ತೆ ಇರಲಿಲ್ಲ, ಸ್ಕೂಲು ಇರಲಿಲ್ಲ, ನೀರಿನ ಭಾವಿ ಇರಲಿಲ್ಲ ಅವೆಲ್ಲ ಬಂದಿವೆ ಅವೆಲ್ಲಕ್ಕಿಂತ ಈ ಸೋಲೂರು ಸಿದ್ದಪ್ಪ ದೊಡ್ಡವನಲ್ಲ, ಇದಾವು ನಿಮ್ಮೂರಿಗೆ ಬೇಡಾ ಅಂತಿದ್ದರೆ ಹೇಳಿ ನಾನೂ ವಾರಕ್ಕೊಂದು ಸಲ ಬಂದು ಹೋಗ್ತೀನಿ ಹೇಗಿದ್ದರೂ ಸೊಗಸಾಗಿ ಮುದ್ದೆ–ಉಪ್ಪಿನ ಸಾರು ಊಟ ಹಾಕತೀರ. ನೀವೇ ಹೇಳಿ ನಾನು ಬಂದೂ ಬಂದೂ ಮಾತಾಡಿಸಿ ಹೋಗಬೇಕೋ, ಗ್ರಾಮಕ್ಕೆ ಬೇಕಾದ ಕೆಲಸ ಕಾರ್ಯ ಆಗಬೇಕೋ! ಎಂದಾಗ ಮಾತಿಗೆ ಮಧ್ಯೆ ಹಿರಿಯರೊಬ್ಬರು "ನೀವೂ ಬೇಕು ಅವೂ ಬೇಕು ಎಂದಿದ್ದರು." ನಾನು ಬೇಕಾದರೆ ಊಟ ಹಾಕಿ, ಕೆಲಸ ಕಾಮಗಾರಿ ಆಗಬೇಕು ಅಂದರೆ ಓಟು ಹಾಕಿ" ಎಂದು ನಗೆಯುತ್ತರ ನೀಡಿದ್ದರು.

ನಮ್ಮ ಪಕ್ಕದ ಹಳ್ಳಿಯ ಪ್ರೈಮರಿಶಾಲೆಯ ಮಾಸ್ತರರೊಬ್ಬರು, ಸರಿಯಾಗಿ ಶಾಲೆಗೆ ಹಾಜರಾಗದೆ, ಸದಾ ತಮ್ಮ ಕೃಷಿ ಚಟುವಟಿಕೆಯಲ್ಲಿ ಮಗ್ನರಾಗಿರುತ್ತಿದ್ದರು ಆ ಹಳ್ಳಿಯ ಕೆಲ ಹಿರಿಯಲು ಶಾಸಕರಿಗೆ ದೂರು ಕೊಟ್ಟರು.

"ಸ್ವಾಮಿ ನಮ್ಮ ಸ್ಕೂಲು ಮಾಸ್ಟರು ಸರಿಯಾಗಿ ಬರ್ತಾ ಇಲ್ಲ. ಯಾವಾಗ ನೋಡಿದರೂ ಅವರ ಹೊಲದಾಗೇ ಇರ್ತಾರೆ. ನಮ್ಮ ಮಕ್ಕಳನ್ನ ಸ್ಕೂಲಿಗೆ ಕಳಿಸೋದೇ ದಂಡ ಆಗ್ತಿದೆ. ನಾವೆಲ್ಲಾ ಪಕ್ಕದೂರಿನ ಸ್ಕೂಲಿಗೆ ಕಳಿಸಬೇಕಂತ ಮಾಡಿದ್ದೀವಿ."

ಇದು ತಪ್ಪು 'ಕೂರೇ ಕಡತಕ್ಕೆ ಸೀರೆ ಬಿಚ್ಚಿದಂತಾಗುತ್ತದೆ. ಅವನಾರಾದ್ರು ಆಗಿರಲಿ ಸರ್ಕಾರಿ ಸಂಬಳಾ ತಿನ್ನೋ ಮೇಸ್ಟ್ರು. ಅವನು ಮಾಡೋ ತಪ್ಪಿಗೆ ನಿಮ್ಮ ಮಕ್ಕಳಿಗೆ ಯಾಕೆ ಶಿಕ್ಷೆ, ನಾಳಿಂದ ಬಂದು ಕೆಲಸ ಮಾಡಿ ಆ ಮೇಸ್ಟ್ರು ರಜ ಹಾಕದೆ ಶಾಲೆಗೆ ತಪ್ಪಿಸಿ ಕೊಂಡರೆ ಅವನೆಲ್ಲಿರತಾನೋ ಅಲ್ಲಿಗೇ ನಿಮ್ಮ ಹುಡುಗರನ್ನು ಕರೆ ತಂದು ಬಿಡಿ ಎರಡು ದಿನ ಹಾಗೆ ಮಾಡಿ ಅವನೇ ದಾರಿಗೆ ಬರ್ತಾನೆ. ಮೇಸ್ಟ್ರಿಗೆ ಹುಡುಗರಿಂದಲೇ ಶಾಲೆಗೆ ಬರುವ ಪಾಠ ಕಲಿಸಿ. ಎಂದರಂತೆ ಆ ಶಾಲಾ ಮಾಸ್ತರನಿಗೆ ಜ್ಞಾನೋದಯವಾಗಿ ನಿವೃತ್ತ ನಾಗುವ ತನಕ ನಿಷ್ಠೆಯಿಂದ ಕೆಲಸ ಮಾಡಿದನೆಂದು ಸುದ್ದಿಯಾಯಿತು.

ಸಣ್ಣ ಪುಟ್ಟ ಕಾರಣಗಳಿಗೆ ಗ್ರಾಮಗಳ ಜನರು ಹೊಡೆದಾಡಿ. ಪೋಲಿಸು ಕೋರ್ಟು ಮುಂತಾದ್ದಕ್ಕೆ ಹೋಗುವುದನ್ನು ಸಿದ್ದಪ್ಪನವರು ತೀವ್ರವಾಗಿ

ಖಂಡಿಸುತ್ತಿದ್ದರು. ಅರಳೀ ಕಟ್ಟೆಯ ನೆರಳಲ್ಲಿ ಬಗೆಹರಿಸಿಕೊಳ್ಳಬಹುದಾದ ಜಗಳಗಳಿಗೆ ಕಾನೂನಿನ ಗಾಣಕ್ಕೆ ಯಾಕೆ ತಲೆ ಕೊಡಬೇಕು ನಿಮ್ಮ ಜಗಳ ನೀವೇ ಬಗೆಹರಿಸಿಕೊಳ್ಳಿ ಎಂದು ತಿಳಿ ಹೇಳುತ್ತಿದ್ದರು. ಗ್ರಾಮಾಂತರ ಪ್ರದೇಶದ ನ್ಯಾಯಗಳಲ್ಲಿ ಪಾಲ್ಗೊಂಡು ತಮ್ಮ ಜೀವನಾನುಭವದ ಬಲದಿಂದ ತೀರ್ಮಾನ ಹೇಳುತ್ತಿದ್ದರು ಸೋಲೂರು ಸಿದ್ದಪ್ಪನವರು ತೀರ್ಮಾನ ಹೇಳಿದ ಮೇಲೆ 'ಫೈಸಲ್' ಆಯಿತೆಂದೇ ಜನ ಆಡಿಕೊಳ್ಳುತ್ತಿದ್ದರು.

## ಕೆರೆಯ ನೀರನು ಕೆರೆಗೆ ಚೆಲ್ಲಿ.

ಸೋಲೂರು ಸಿದ್ದಪ್ಪನವರು ಜೀವಿತ ದುದ್ದಕ್ಕೂ ಸರಳ ಜೀವನ ನಡೆಸುತ್ತಿದ್ದರು. ಬೆಂಗಳೂರಿನ ಚಾಮರಾಜಪೇಟೆಯ ಸಿರಸಿ ರಸ್ತೆಯಲ್ಲಿ ಮಂಗಳೂರು ಹೆಂಚಿನ ಮನೆಯೊಂದನ್ನು ಬಾಡಿಗೆಗೆ ಪಡೆದು ವಾಸಿಸುತ್ತಿದ್ದರು. ಅವರದು ಚಿಕ್ಕ-ಚೊಕ್ಕ ಸಂಸಾರ, ವಿದ್ಯಾವಂತ ಮಗ ಬುದ್ಧಿವಂತೆ ಮಗಳು ಮೃದು ಸ್ವಭಾವದ ಹೆಂಡತಿ ಇವರೆಲ್ಲರ ಬೆಂಬಲವಿರದಿದ್ದರೆ ಅಷ್ಟೊಂದು ವರ್ಷ ಸಮಾಜ ಸೇವೆಗೆ ಸಾಧ್ಯವಾಗುತ್ತಿರಲಿಲ್ಲ. ಏಕಮಾತ್ರ ಪುತ್ರ ಶಿವಪ್ರಸಾದ್ ತಂದೆಯ ರಾಜಕೀಯ ಚಟುವಟಿಕೆಗಳತ್ತ ಬೆನ್ನು ತಿರುಗಿಸಿ ಇಂಜಿನಿಯರಿಂಗ್‌ನಲ್ಲಿ ಪದವೀಧರರಾಗಿ ಸ್ವಂತ ದುಡಿಮೆಗಿಳಿದರು. ತಂದೆಯ ಮಾರ್ಗದರ್ಶನ ತಾಯಿಯ ಮಮತೆ ಎರಡನ್ನು ಮೈಗೂಡಿಸಿಕೊಂಡು ಸ್ವಾವಲಂಬನೆಯತ್ತ ದಾಪುಗಾಲು ಹಾಕಿದರು.

ಸೋಲೂರರ ಬಳಿ ಫಿಯಟ್ ಟ್ಯಾಕ್ಸಿಯೊಂದಿತ್ತು ವಿಧಾನಸೌಧ ಮತ್ತಿತರ ಸರ್ಕಾರಿ ಕಛೇರಿಗಳಿಗೆ ಹೋಗಲು ಅದನ್ನು ಬಳಸುತ್ತಿದ್ದರು. ಉಳಿದಂತೆ ಆ ಟ್ಯಾಕ್ಸಿ ಸಾರ್ವಜನಿಕ ಬಾಡಿಗೆ ವಾಹನವಾಗುತ್ತಿತ್ತು. ಅಲ್ಪ ಸ್ವಲ್ಪ ಆದಾಯ ತರುತ್ತಿತ್ತು. ಸಿದ್ದಪ್ಪನವರು ತಮ್ಮ ಯೌವನದ ಕಾಲದಲ್ಲಿಯೇ ಜನಸೇವೆಗೆ ತಮ್ಮನ್ನು ತೊಡಗಿಸಿಕೊಂಡಿದ್ದರಿಂದ ಅದರ ಖರ್ಚು ವೆಚ್ಚಗಳು ಕಡಿಮೆಯೇನಿರುತ್ತಿರಲಿಲ್ಲ. ಆ ಕಾರಣಕ್ಕಾಗಿಯೂ ಅವರು. ತಮ್ಮ ಜೀವನ ಶೈಲಿಯನ್ನು ಸರಳಗೊಳಿಸಿಕೊಂಡಿದ್ದರು. ಅಂದಿನಿಂದ ಕೊನೆತನಕ ಸಂಸಾರ-ಮನೆ ಇವುಗಳ ಬಗ್ಗೆ ತಲೆಕೆಡಿಸಿ ಕೊಂಡವರಲ್ಲ. ಎಲ್ಲವನ್ನು ಪತ್ನಿ ಶ್ರೀಮತಿ ಚನ್ನಬಸಮ್ಮನವರೇ ನಿಭಾಯಿಸಿಕೊಳ್ಳುತ್ತಿದ್ದರು. ಅವರಿಗೆ ತವರು ಮನೆಯ ಬೆಂಬಲ ಅಪಾರವಾಗಿತ್ತು.

ಮತ ಕ್ಷೇತ್ರದ ಜನರೆಲ್ಲ ಸಾಮಾನ್ಯವಾಗಿ ಬಡವರೇ ಆಗಿರುತ್ತಿದ್ದರಿಂದ ಸರ್ಕಾರದ ನಾನಾ ರೀತಿಯ ಕೆಲಸ ಮಾಡಿಸಿಕೊಳ್ಳಲು ಸಿದ್ದಪ್ಪನವರ ಮನೆ ಹುಡುಕಿ

ಬರುತ್ತಿದ್ದರು. ಕೆಲವರು ಬೆಂಗಳೂರಿಗೆ ಬಂದು ಹೋಗುವ ಪ್ರಯಾಣ ವೆಚ್ಚವನ್ನು ಬರಿಸಲಾಗದಂತಹ ಸ್ಥಿತಿಯಲ್ಲಿದ್ದವರು. ಕಾರ್ಯಾರ್ಥಿಗಳ ಕೆಲಸ ಕಾರ್ಯಗಳ ಮಾಹಿತಿಗಳನ್ನು ವಿವರವಾಗಿ ವಿಚಾರಿಸುತ್ತಿದ್ದರು. ಯಾರಾರ ಕೆಲಸ ಕಾರ್ಯಗಳು ಯಾವಾವ ಕಛೇರಿಗಳಲ್ಲಿ ಆಗಬೇಕೋ ಆಯಾಯ ಕಛೇರಿಗಳ ಬಳಿ ಕಾಯ್ದಿರುವಂತೆ ಹೇಳುತ್ತಿದ್ದರು. ಕರಾರುವಾಕ್ಕಾಗಿ ಆಯಾ ಕಛೇರಿಗಳಿಗೆ ಹೋಗಿ ಆಗಬೇಕಾಗಿದ್ದ ಕೆಲಸಗಳನ್ನು ಮಾಡಿಸಿ ಕಳುಹಿಸುತ್ತಿದ್ದರು. ಸಾಗುವಳಿಗೆ ಜಮೀನಿಲ್ಲದ ರೈತರು, ಮನೆಯಿಲ್ಲದ ನಿರಾಶ್ರಿತರು, ಸರ್ಕಾರಿ ಉದ್ಯೋಗಕ್ಕೆ ಅರ್ಜಿ ಸಲ್ಲಿಸಿದ ಯುವಕರು, ವರ್ಗಾವಣೆ ಬಯಸಿ ಬಂದ ಉಪಾಧ್ಯಾಯರು, ಸರ್ಕಾರಿ ನೌಕರರು, ಊರಿನ ಅಭಿವೃದ್ಧಿಯ ಬಗ್ಗೆ ಮಾತಾಡಲು ಬಂದ ಗ್ರಾಮ ಮುಖಂಡರುಗಳು, ಪಂಚಾಯ್ತಿ ಅಧ್ಯಕ್ಷರುಗಳು ಇತ್ಯಾದಿ ಇಡೀ ಮತ ಕ್ಷೇತ್ರದ ಸಮಸ್ಯೆಗಳೆಲ್ಲವೂ ಮನುಷ್ಯ ರೂಪಧರಿಸಿ ಶಾಸಕ ಸೋಲೂರು ಸಿದ್ದಪ್ಪನವರ ಮನೆಗೆ ಬರುತ್ತಿದ್ದರು. ಪೂರ್ವ ನಿಯೋಜಿತ ವೇಳಾಪಟ್ಟಿಯನ್ನು ಅನುಸರಿಸಿ ಕಛೇರಿ ಮುಗಿವ ವೇಳಗೆ ಮುನ್ನ ಬಂದು ಕಾರ್ಯಾರ್ಥಿಗಳ ಕೆಲಸ ಮಾಡಿಸುತ್ತಿದ್ದರು. ಬಹುತೇಕ ಕೆಲಸಗಳನ್ನು ಶಿಫಾರಸು ಪತ್ರಗಳನ್ನು ಬರೆದೇ ಮಾಡಿಸುತ್ತಿದ್ದರು. ಅನಗತ್ಯ ಪತ್ರಗಳನ್ನು  ಬರೆದು ಕೊಡುತ್ತಿರಲಿಲ್ಲ. ಯಾವ ಅಧಿಕಾರಿಗೆ ಯಾರ ಪರವಾಗಿ ಪತ್ರ ಕೊಡುತ್ತಿದ್ದೇನೆ ಅದಾವ ಕೆಲಸ ಎಂಬ ಅರಿವು ಅಪಾರವಾಗಿತ್ತು. ಅವರಿಗೆ ನೆನಪಿನ ಶಕ್ತಿ ಅಗಾಧವಾಗಿತ್ತು. ಶಿಫಾರಸು ಪತ್ರ ನೀಡಿದರೂ ಆ ಕಾರ್ಯ ಮಾಡಿ ಕೊಡದ ಅಧಿಕಾರಿಯನ್ನು ಹೇಗಾದರೂ ಸಂಪರ್ಕಿಸಿ ನಮ್ಮ ಕ್ಷೇತ್ರದ ಕಾರ್ಯವೇನಾಯಿತು? ಏಕೆ, ತಡವಾಯಿತು, ಮಾಡದೇ ಇರುವುದಕ್ಕೆ ಸಮಜಾಯಿಷಿಯೇನು? ಎಂದೆಲ್ಲಾ ಜಾಲಾಡಿ ಬಿಡುತ್ತಿದ್ದರು. ಆ ಕಾಲದ ಸರ್ಕಾರಿ ಅಧಿಕಾರಿಗಳು ನೂರಕ್ಕೆ ಅರವತ್ತು ಪಾಲು ಸಾಚಾ ಇರುತ್ತಿರಲಿಲ್ಲ ಲಂಚಗುಳಿತನ, ಸ್ವಜನ ಪಕ್ಷಪಾತ, ಅನ್ಯಮತ ವಿರೋಧ ಮುಂತಾದ ಅವಗುಣಗಳೂ ಅವರಲ್ಲಿರುತ್ತಿದ್ದವು. ಅಕ್ರಮ–ಸಕ್ರಮ ಮಾಡುವುದು ಕಾನೂನು ತಿರುಚುವುದೂ, ಸರ್ಕಾರದ ಆದೇಶಗಳನ್ನು ಬಚ್ಚಿಡುವುದೂ ಇತ್ಯಾದಿ ಜನವಿರೋಧಿ ನೀತಿಗಳನ್ನು ಪಾಲಿಸುತ್ತಿದ್ದರು. ಶಾಸಕರೆಂದರೆ ಹೊರನೋಟಕ್ಕೆ ಹೆದರಿಕೊಳ್ಳುವ ನಾಟಕ ಮಾಡುತ್ತಿದ್ದರು ಇಂಥ ಒಳವಿಚಾರಗಳು ಸೋಲೂರು ಸಿದ್ದಪ್ಪನವರಿಗೆ ಹೇಗೋ ತಿಳಿದುಬಿಡುತ್ತಿದ್ದವು.

ಏನ್ರೀ ಸಾಹೇಬರೇ ನಾನು ಶಾಸಕ ಸೋಲೂರು ಸಿದ್ದಪ್ಪ ನನ್ನ ಹಸ್ತಾಕ್ಷರ ದ್ವಾರ ಪತ್ರ ಕೊಟ್ಟಿದ್ದೆ. ಆ ಬಡವರ ಕಾರ್ಯ ಮಾಡಿಲ್ಲ. ಅದಕ್ಕೆ ಏನಾದರೂ ಕಾನೂನು ತೊಡಕ್ಕಿದರೆ. ನನ್ನ ಗಮನಕ್ಕೆ ತರಬಹುದಾಗಿತ್ತು. ನಮ್ಮಂಥ

ಜನಪ್ರತಿನಿಧಿಗಳು ಹೇಳಿದ ಕಾರ್ಯವನ್ನೆ ನೀವು ಮಾಡದ ಮೇಲೆ ಇನ್ನಾರ ಕೆಲಸ ಮಾಡತೀರ? ನೀವು ನಮ್ಮ ರಾಜಧಾನಿಯಲ್ಲಿರಲು ಲಾಯಕ್ಕಲ್ಲ ಬೇರೆ ಸ್ಥಳ ನೋಡಿಕೊಂಡು ಹೋಗಿಬಿಡಿ ನಿಮ್ಮ ಬದಲಿಗೆ ಒಳ್ಳೆಯ ಅಧಿಕಾರಿಯನ್ನು ಹಾಕಿಸಿ ಕೊಳ್ಳುತ್ತೇವೆ." ಎಂದು ಅಧಿಕಾರಿಯ ಮುಖದ ನೀರಿಳಿಸುತ್ತಿದ್ದರು ಅನಂತರ ಅಧಿಕಾರಿಯ ವಿಶ್ವಾಸ ಗಳಿಸಲು ಆಡಬೇಕಾಗಿದ್ದ ಮಾತುಗಳನ್ನಾಡಿಯೇ ಹೊರಬರುತ್ತಿದ್ದರು.

ಆಗಾಗ್ಗೆ ತಾಲ್ಲೂಕಿನ ಕೆಲ ಅನುಕೂಲಸ್ಥರೂ ಸರ್ಕಾರದಿಂದ ಆಗ ಬೇಕಾದ ಕೆಲಸ ಮಾಡಿಸಿ ಕೊಳ್ಳಲು ಬರುತ್ತಿದ್ದರು. 'ಓಹೋ ಸಾಹುಕಾರರು ಬಂದಿದ್ದೀರಿ, ಈ ದಿವಸ ಶುಭ ದಿವಸ, ನಿಮ್ಮ ಕೆಲಸ ಮಾಡಿಸಿ ಕೊಟ್ಟ ಮೇಲೆಯೇ ಮಧ್ಯಾಹ್ನದ ಊಟ, ಲೇ ಸಾಹೇಬರೇ (ಟ್ಯಾಕ್ಸಿ ಡ್ರೈವರ್) ವಾಹನ ರೆಡಿ ಮಾಡಿಕೋ ಎನ್ನುವರು 'ಸ್ವಾಮಿ ಆಯಿತು" ಎನ್ನುವನು ಚಾಲಕ

'ರೈಟ್ ಬನ್ನಿ ಸಾಹುಕಾರರೇ ಹೋಗೋಣ ಸಂಬಂಧಪಟ್ಟ ಮಂತ್ರಿಗಳನ್ನು ಕಂಡು ಕೆಲಸ ಪೂರೈಸಿ ಕೊಳ್ಳೋಣ'

ಕಾರ್ಯಾರ್ಥಿ ಕಾರಿನಲ್ಲಿ ಕೂರುವನು ಸಿದ್ದಪ್ಪನವರು ಲೇ ಸಾಬರೇ ಪಿ–ಡಬ್ಲ್ಯು–ಡಿ ಮಂತ್ರಿಗಳ ಮನೆಗೆ ನೇರನಡೆ.

ಆ ಚಾಲಕ ಸೋಲೂರು ಸಿದ್ದಪ್ಪನವರ ಬಳಿ ಚೆನ್ನಾಗಿ ಪಳಗಿದ್ದವನು ವಿಶ್ವಾಸಕ್ಕೆ ಪಾತ್ರನಾಗಿದ್ದವನು. ಎದೆ ಸೀಳಿದರೂ ಗುಟ್ಟು ಬಿಟ್ಟು ಕೊಡದ ನಿಯತ್ತಿನ ಮನುಷ್ಯ. ಪೆಟ್ರೋಲ್ ಬಂಕ್ ಕಾಣುತ್ತಲೇ ಸ್ವಾಮಿ ಪೆಟ್ರೋಲ್ ಕಡಿಮೆಯಿದೆ ಎನ್ನುವನು. ಸಿದ್ದಪ್ಪನವರು ಕೋಪಿಸಿ "ಲೇ ಸಾಬರೇ ನಿನಗೆ ಕಾರು ಓಡಿಸುವುದು ಬರುತ್ತೆ ಬುದ್ದಿ ಓಡಿಸೋದು ಬರೋಲ್ಲ. ಮೊದಲೇ ಹೇಳಬಾರದೇನೋ ಮನೆಯಿಂದ ದೂರ ಬಂದ ಮೇಲೆ ಹೇಳುತ್ತಿದ್ದಿ ಎಂದು ನಿಲು ಕೋಟಿನ ಇಪ್ಪತ್ತು ಗುಂಡಿಗಳಲ್ಲಿ ಒಂದೆರಡನ್ನು ಬಿಚ್ಚುವ ಯತ್ನ ನಡೆಸಿದರು. ಕಾರಿನಲ್ಲಿ ಕುಳಿತ ಕಾರ್ಯಾರ್ಥಿ ಸಿರಿವಂತ ಪ್ರಜೆ ಪೆಟ್ರೋಲ್ ನೀವ್ಯಾಕೆ ಹಾಕಿಸಬೇಕು ನಾನು ಹಾಕಿಸುತ್ತೇನೆ ಎನ್ನುವನು. 'ಛೇ ಬೇಡ ನಿಮ್ಮ ಋಣ ತೀರಬೇಡವೇ ಎಂದು ಇವರೆನ್ನುವರು. "ವೆರಿಗುಡ್ ನಿಮಗೆ ವ್ಯವಹಾರ ಜ್ಞಾನ ಚೆನ್ನಾಗಿದೆ ಅದಕ್ಕೇ ನೀವು ಶ್ರೀಮಂತರಾಗಿರೋದು. ಲೇ ಸಾಬರೇ ಸಾಹುಕಾರರು ಪೆಟ್ರೋಲ್ ಹಣ ಕೊಡುತ್ತಾರೆ ರಶೀದಿ ಅವರಿಗೇ ಕೊಟ್ಟು ಬಿಡು." ಎನ್ನುವರು ಡ್ರೈವರ್ ಖಾಲಿಯಿದ್ದ ಪೆಟ್ರೋಲ್ ಟ್ಯಾಂಕನ್ನು ತುಂಬಿಸಿ ಕೊಂಡು ಬಿಲ್ಲನ್ನು ಕಾರ್ಯಾರ್ಥಿ ಸಾಹುಕಾರರಿಗೆ ಕೊಟ್ಟು ಪಾವತಿ

ಮಾಡಿಸುವನು. ಸಂಬಂಧಪಟ್ಟ ಮಂತ್ರಿಗಳಿಂದ ಆಗಬೇಕಾದ ಹತ್ತಾರು ಕೆಲಸಗಳನ್ನು ಮಾಡಿಸಿಕೊಂಡಾದ ಮೇಲೆ ಸಾಹೇಬರೇ ಒಳ್ಳೆ ಹೋಟೇಲಿಗೆ ನಡಿಯೋ ಸಾಹುಕಾರರು ಅಪರೂಪಕ್ಕೆ ಬಂದಿದ್ದಾರೆ ಅವರ ಜೊತೆ ಊಟ ಮಾಡಿ ಭಾಳ ದಿನವಾಯ್ತು ಎಂದ ಕೂಡಲೇ ಚಾಲಕ ಚಾಮರಾಜ ಶೇಟಿಯ ಪ್ರಕಾಶ ಕೆಫೆಗೆ ಕಾರು ಮುಟ್ಟಿಸುವನು. ಸಾಹುಕಾರರ ಜೊತೆ ಕುಳಿತು ಲೋಕಾಭಿರಾಮ ಮಾತಾಡಿ ಊಟ ಮುಗಿಸುತ್ತಿದ್ದರು. ಪ್ರಕಾಶ ಕೆಫೆಯ ಮಾಲೀಕರಾದ ಶ್ರೀ ಚಂದ್ರಶೇಖರಯ್ಯ ಮಾಗಡಿ ಪಟ್ಟಣದ ಹತ್ತಿರವಿದ್ದ ಕೆಂಪಸಾಗರದವರು ಅವರಿಗೂ ಸೋಲೂರರಿಗೂ ಆತ್ಮೀಯ ಸ್ನೇಹವಿತ್ತು. ಊಟವಾದ ಮೇಲೆ ಸಾಹುಕಾರರೇ ನಿಮ್ಮ ಕಾರ್ಯ ನನ್ನ ಕಡೆಯಿಂದ ಆಗಬೇಕಾದಷ್ಟು ಮಾತ್ರವೇ ಆಗಿದೆ. ಮುಂದೆ ಕಡತದ ಬೆನ್ನು ಹತ್ತಿ ಕೆಲಸ ಮಾಡಿಸಿಕೊಳ್ಳಿ ಶಾಸಕ ಹೇಳಿದ್ದು ಮಂತ್ರಿ ಬರೆದದ್ದು ಸರ್ಕಾರಿ ಆರ್ಡರ್ ಆಗುವುದಿಲ್ಲ. ಕಾರ್ಯಾರ್ಥಿಯನ್ನು ಬೀಳ್ಕೊಡುತ್ತಿದ್ದರು. ಆಗಿನ ರಾಜ ಕಾರಣದಲ್ಲಿಯೂ ಹಣಕಾಸಿನದೇ ದೊಡ್ಡ ಸಮಸ್ಯೆಯಾಗುತ್ತಿತ್ತು. ಮನೆಯ ಹಣವನ್ನು ಆ ಕ್ಷೇತ್ರಕ್ಕೆ ಬಳಸಿದ್ದರೆ ಮುಂದಿನ ರಾಜಕಾರಣಕ್ಕೆ ಕೊನೆ ಹಾಡಬೇಕಾಗುತ್ತಿತ್ತು. ಹೊಟ್ಟೆಗೆ-ಬಟ್ಟೆಗಿಲ್ಲದ ಜನರಿಂದ ಶಾಸಕರ ಖರ್ಚು ವೆಚ್ಚಗಳು ತೂಗುತ್ತಿರಲೇ ಇಲ್ಲ. ಸರ್ಕಾರದಿಂದ ಬರುತ್ತಿದ್ದ ಸಂಬಳ ಭತ್ಯೆ ಇತ್ಯಾದಿಗಳು "ರಾವಣಾಸುರನ ಹೊಟ್ಟೆಗೆ ಅರೆ ಕಾಸಿನ ಮಜ್ಜಿಗೆ" ಎನ್ನುವಂತಾಗಿತ್ತು. ಅರ್ಧಶತಮಾನ ಕಾಲ ಸಾರ್ವಜನಿಕ ರಂಗದಲ್ಲಿ ಸಕ್ರಿಯ ಚಟುವಟಿಕೆಯಿಂದಿರಲು ನಾನಾ ಚತುರೋಪಾಯಗಳನ್ನು ಅವಲಂಬಿಸ ಬೇಕಾಗಿತ್ತು. ರಾಜಕೀಯ ರಂಗದಿಂದ ದೂರಾದಾಗಲೂ ಯಾವ ಸಮಸ್ಯೆಯೂ ಬರಲಿಲ್ಲ. ಕೆರೆಯ ನೀರನು ಕೆರೆಗೆ ಚಲ್ಲಿ" ಸೇವೆ ಮಾಡಿದರು.

## ಆನೆ ನಡೆದದ್ದು ಹಾದಿಯಾಯ್ತು

ವರ್ತಮಾನ ಕಾಲಕ್ಕೆ ಸೋಲೂರು ಒಂದು ಮಾದರಿ ಗ್ರಾಮ. ಗ್ರಾಮ ನೆಮ್ಮದಿಗೆ ಏನೇನು ಸವಲತ್ತುಗಳು ಇರಬೇಕೋ ಎಲ್ಲವೂ ಇವೆ. ಹೆದ್ದಾರಿಯಿದೆ, ಅತ್ಯಾಧುನಿಕವಾದ ಅಂಚೆ ಕಛೇರಿ, ಪ್ರವಾಸಿ ಮಂದಿರ, ಬಸ್ ನಿಲ್ದಾಣವಿದೆ, ಆರೋಗ್ಯ ಕೇಂದ್ರವಿದೆ ಶಾಲೆಗಳಿವೆ, ರೇಷ್ಮೆ ಇಲಾಖೆಯ ಅಭಿವೃದ್ಧಿ ಕೇಂದ್ರವಿದೆ, ದೂರವಾಣಿ ವಿನಿಮಯ ಕೇಂದ್ರವಿದೆ, ಹಾಲು ಮಾರಾಟ ಮಂಡಳದ, ಶೈತ್ಯಾಗಾರವಿದೆ, ಪೊಲೀಸು ಠಾಣೆಯಿದೆ, ತುಂಬಿದ ಕೆರೆಯಿದೆ, ತೋಟ ತುಡಿಕೆಗಳಿವೆ, ದುಡಿವ ರೈತರಿದ್ದಾರೆ, ವಿದ್ಯಾವಂತರಿದ್ದಾರೆ, ಸೋಲೂರಿಗೀಗ ಯಾವ ಕೊರತೆಯೂ ಇಲ್ಲ.

ಹಿಂದೂ, ಮುಸಲ್ಮಾನ-ಕ್ರೈಸ್ತ ಧರ್ಮಗಳ ಒಳ ಹೊಂದಾಣಿಕೆ ತುಂಬಾ ತೃಪ್ತಿಕರವಾಗಿದೆ. ಈಡನ್ ಗಾರ್ಡನ್ ನಂತಹ ಕ್ರೈಸ್ತಮಿಷನರಿಗಳ ವಸತಿ ತಾಣವಿದೆ. ಮುಸಲ್ಮಾನರ ಮಸೀದಿಯೂ, ಹಿಂದೂಗಳ ಹಲವು ದೇವಾಲಯಗಳಿವೆ, ಸಾಮಾಜಿಕವಾಗಿ, ಧಾರ್ಮಿಕವಾಗಿ. ಆರ್ಥಿಕವಾಗಿ ಸೋಲೂರು ಕಲ್ಯಾಣ ಪುರವಾಗಿ ಬಿಟ್ಟಿದೆ. ಈ ಎಲ್ಲದರ ಹಿಂದೆ, ಸೋಲೂರು ಸಿದ್ದಪ್ಪನವರ ಸಂಕಲ್ಪ ಶಕ್ತಿಯಿದೆ ಎಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ ಪ್ರತಿಯೊಬ್ಬ ರಾಜ ಕಾರಣಿಯೂ ತನ್ನ ಹುಟ್ಟೂರಿನ ಬಗ್ಗೆ ಇಂಥದ್ದೇ ಅಭಿಮಾನವಿಟ್ಟು ಪ್ರಗತಿಪರ ಕಾರ್ಯಗಳನ್ನು ಛಲಬಿಡದೆ ನಿರ್ವಹಿಸಿದರೆ ನಮ್ಮ ನಾಡಿನ ಕುಗ್ರಾಮಗಳು ಕುಬೇರನ ಅಲಕಾವತಿಯಂತೆ ಲಕಲಕಿಸಿ ಬಿಡುತ್ತವೆ ಗ್ರಾಮವೆಂದರೆ ಹೀಗಿರಬೇಕೆನ್ನುವ ಮಾದರಿಯನ್ನು ನೋಡಬಯಸುವವರು ಸೋಲೂರನ್ನು ನೋಡಬೇಕು.

ಅರವತ್ತರ ದಶಕದಲ್ಲಿ ಫ್ರೆಂಚ್‌ಮೂಲದ ಕ್ರೈಸ್ತಪಾದ್ರಿಯೊಬ್ಬರು ಸೋಲೂರನ್ನು ತನ್ನ ಸೇವಾ ಕ್ಷೇತ್ರವನ್ನಾಗಿ ಆರಿಸಿಕೊಂಡರು. ಅವರ ಹೆಸರು ರೆವೆರೆಂಡ್ ಫಾದರ್ ಪಿಯರಿ ಪೆನ್‌ವಿನ್. ಸೋಲೂರಿಗೆ ಬಂದು ಸೇವಾಕಾರ್ಯ ಪ್ರಾರಂಭಿಸಲು ಸೋಲೂರು ಸಿದ್ದಪ್ಪನವರ ತಾತ್ವಿಕ ಸಮ್ಮತಿ ಪಡೆದರು. ಊರಿಗೆ ಒಳ್ಳೆಯದಾಗುವುದು ಯಾವ ದಿಕ್ಕಿನಿಂದ ಬಂದರೂ ಸಿದ್ದಪ್ಪನವರು ನಿರಾಕರಿಸುತ್ತಿರಲಿಲ್ಲ. ಒಪ್ಪಿದರು. ಪಿಯರಿಪೆನ್‌ವಿನ್ ಸೋಲೂರಿನ ಪರಿಶಿಷ್ಟರನ್ನು ಬಡವರನ್ನು ಗುರುತಿಸಿ, ವಾಸಕ್ಕೆ ಮನೆ ಬೇಸಾಯಕ್ಕೆ ನೆರವು ಗೃಹ ಕೈಗಾರಿಕೆ. ಆರೋಗ್ಯ ಇವುಗಳ ಬಗ್ಗೆ ಗಮನವಿಟ್ಟು ಕಾರ್ಯವೆಸಗಿದರು. ಫಾದರ್ ಪೆನ್‌ವಿನ್ನರ ಸೇವಾ ಕಾರ್ಯಗಳಿಗೆ ಮತ್ತೆರಡು ಕೈಗಳು ಮೂಡುವಂತೆ, ಮಂಗಳೂರು ಮೂಲದಿಂದ "ಸಿಸ್ಟರ್ಸ್ ಆಫ್ ಚಾರಿಟೀಸ್" ನಿಂದ ಸ್ನೇಹಾಲಯವೆಂಬ ಹೆರಿಗೆ ಆಸ್ಪತ್ರೆ ಪ್ರಾರಂಭಗೊಂಡಿದೆ. ಸೋಲೂರು ಸುತ್ತಮುತ್ತಣ ನೂರಾರು ಮೈಲಿಗಳ ಪಾಸಲೆಯಿಂದ ಬಡ ಹೆಣ್ಣು ಮಕ್ಕಳು ಸುರಕ್ಷಿತ ತಾಯ್ತನವನ್ನು ಹಂಬಲಿಸಿ ಇಲ್ಲಿಗೆ ಬಂದು ನಗುವ ಕಂದಮ್ಮಗಳನ್ನು ಹಡೆದು ಹಿಂತಿರುಗುತ್ತಿದ್ದಾರೆ. ಅನುಕೂಲ ರಹಿತ ಬಡ ಹೆಣ್ಣುಮಕ್ಕಳಿಗೆ ಸ್ನೇಹಾಲಯ ತಾಯ ತವರಿನ ವಾತ್ಸಲ್ಯವನ್ನು ತುಂಬಿ ಕೊಡುತ್ತಲಿದೆ. ಹಳ್ಳಿಗರ ಬಾಯಲ್ಲಿ ಈ ಸ್ನೇಹಾಲಯ ಆರೋಗ್ಯಧಾಮ ಸೋಲೂರು ಚರ್ಚಾಸ್ಪತ್ರೆಯೆಂದೇ ಹೆಸರುಗೊಂಡಿದೆ.

ರೋಮನ್ ಕ್ಯಾಥೋಲಿಕ್ ಚರ್ಚಿನಲ್ಲಿ ಪ್ರಾರ್ಥನೆಗಳು ನಡೆದರೆ, ಮಸೀದಿಯಲ್ಲಿ ಪ್ರಾರ್ಥನೆ ನಿತ್ಯ ಕೇಳಿಬರುತ್ತದೆ. ಹಿಂದೂ ದೇಗುಲಗಳ ಮಂಗಳ ನಿನಾದ ಘಂಟಾರವ ನಿನದಿಸುತ್ತದೆ. ಸುಖಗ್ರಾಮ ಜೀವನಕ್ಕೆ ಸೋಲೂರು

ಮಾದರಿಯಾಗಿದೆ. ಸೋಲೂರು ಸಿದ್ದಪ್ಪನವರಿಗೆ ತುಮಕೂರು ಬಳಿಯ ಸಿದ್ದಕ್ಷೇತ್ರ ಶ್ರೀ ಸಿದ್ದಗಂಗಾಮಠದ ಬಗ್ಗೆ ಅಪಾರ ಗೌರವವಿತ್ತು. ಅಲ್ಲಿನ ವಿರಕ್ತಪೀಠದ ಮಹಾತಪಸ್ವಿ ಉದ್ದಾನ ಶಿವಯೋಗಿಗಳನ್ನು ಕಂಡಿದ್ದವರು. ಅವರ ನಂತರ ಕ್ಷೇತ್ರಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ಸಾಧನಾ ಶಕ್ತಿಯನ್ನು ಕಂಡು ಗೌರವಿಸುತ್ತಿದ್ದರು. ಸಿದ್ದಗಂಗಾ ಮಠದ ಧರ್ಮಕಾರ್ಯಗಳಿಗೆ ಶಿಕ್ಷಣ ಸಂಸ್ಥೆಗಳಿಗೆ ತಮ್ಮ ಮನದುಂಬಿ ನೆರವಾಗುತ್ತಿದ್ದರು. ಸೋಲೂರಿನಲ್ಲಿ ಒಂದು ಪ್ರೌಢ ಶಾಲೆಯಾಗಬೇಕೆಂಬ ಆಕಾಂಕ್ಷೆಯಿಂದ ಸಿದ್ದಗಂಗಾ ಶಿಕ್ಷಣ ಸಂಸ್ಥೆಯ ಶಾಖಾ ಪ್ರೌಢ ಶಾಲೆಯೊಂದನ್ನು ಪ್ರಾರಂಭಿಸಲು ನೆರವಿತ್ತರು ಶ್ರೀ ಬಸವೇಶ್ವರ ಗ್ರಾಮಾಂತರ ಪ್ರೌಢಶಾಲೆ ಸಿದ್ದಪ್ಪನವರ ಮಹಾತ್ವಾಕಾಂಕ್ಷೆ.

ಗ್ರಾಮದ ಮೊರಡಿಗುಡ್ಡಗಳಲ್ಲಿ ಗರಿಬಿಚ್ಚಿ ನರ್ತಿಸುವ ನವಿಲು ಎಲ್ಲಿದ್ದರೂ ತನ್ನ ಸ್ವಭಾವದಿಂದ ಬೇರಾಗುವುದಿಲ್ಲ. ಗ್ರಾಮಸಂಸ್ಕೃತಿಯ ತಳಿರಿನಲ್ಲಿ ಕೂಜನಗೈವ ಕೋಗಿಲೆ ನಗರದ ಪಂಜರದಲ್ಲಿದ್ದರೂ ಸ್ವರ ಬದಲಾಯಿಸಿ ಕೊಳ್ಳುವುದಿಲ್ಲ.

ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಟಿ. ಸಿದ್ದಲಿಂಗಯ್ಯನವರು ಪ್ರಪಂಚ ಪರ್ಯಟನೆ ಮಾಡಿದ್ದವರು ಕೋಟು-ಸೂಟು-ಬೂಟುಗಳನ್ನು ಧರಿಸುತ್ತಿದ್ದವರು. ಶಿವಪುರ ಧ್ವಜ ಸತ್ಯಾಗ್ರಹದ ತನಕ, ತನ್ನ ಉಡುಪನ್ನು ಬದಲಾಯಿಸಿ ಕೊಂಡವರಲ್ಲ ಅಂದು ಮೆರವಣಿಗೆಗೆ ಗಾಂಧೀ ಟೋಪಿ ಖಾದಿ ವಸ್ತ್ರ ಧರಿಸಿದ್ದರು. ಸೋಲೂರು ಸಿದ್ದಪ್ಪನವರು ಮೈಸೂರು ಪ್ರಜಾಪ್ರತಿನಿಧಿಸಭೆಯ ಸದಸ್ಯರಾಗಿದ್ದಾಗ ಧರಿಸಿದ ದರ್ಬಾರ್‌ಡ್ರೆಸ್‌ನ ಮೈಸೂರು ಪೇಟಾ ಜೀವಿತಾವಧಿ ಪೂರ್ಣ ಶಿರೋಭೂಷಣವಾಗಿತ್ತು. ಆ ನಮೂನೆಯ ರಾಜಗಾಂಭೀರ್ಯದ ಉಡುಪಿನವರನ್ನು ನೋಡಲು ಆಗಿನ ಕಾಲದ ಭಾವಚಿತ್ರಗಳನ್ನೇ ನೋಡಬೇಕಾಗುತ್ತದೆ. ಸೋಲೂರು ಸಿದ್ದಪ್ಪನವರ ಮತ್ತೊಂದು ವಿಶೇಷ ಗುಣವೆಂದರೆ ಬಂಧು-ಮಿತ್ರರ ಮನೆಗಳ ಶುಭಾ-ಶುಭ ಸಮಾರಂಭಗಳಿಗೆ ದಂಪತಿ ಸಮೇತ ಹೋಗಿ ಪಾಲ್ಗೊಳ್ಳುತ್ತಿದ್ದರು. ಬಂಧು ಮಿತ್ರರು ಬಡವರಿರಲಿ, ಶ್ರೀಮಂತರಿರಲಿ, ಸಮರಸ ಭಾವದಿಂದ ಪಾಲ್ಗೊಂಡು ನೂತನ ವಧುವರರಿಗೆ ಶುಭ ಹಾರೈಸುತ್ತಿದ್ದರು ಸಂಬಂಧಿಕರನ್ನು ಆತ್ಮೀಯವಾಗಿ ಮಾತನಾಡಿಸಿ ಮಕ್ಕಳ ವಿದ್ಯಾಭ್ಯಾಸ ನೌಕರಿ ಮುಂತಾದವರನ್ನು ವಿಚಾರಿಸುತ್ತಿದ್ದರು.

ಸಿದ್ದಪ್ಪನವರ ಹಿರಿಯ ಮಗಳು (ಏಕಮಾತ್ರ ಪುತ್ರಿ) ನಾಗರತ್ನಮ್ಮನವರ ಮಗಳು ಕೋಮಲಾ 1971ರಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ರಸಾಯನ ಶಾಸ್ತ್ರದಲ್ಲಿ ಎಂ.ಎಸ್ಸಿ. ಓದುತ್ತಿದ್ದರು. ಸಿದ್ದಪ್ಪನವರು ಮೊಮ್ಮಗಳ ಬಗ್ಗೆ ಅಪಾರ ಪ್ರೀತಿಯಿರಿಸಿ ಕೊಂಡಿದ್ದರು. ಸಂಭಾವಿತ ಮೊಮ್ಮಗಳನ್ನು ತಮ್ಮ ಪುತ್ರ ಶಿವಪ್ರಸಾದರಿಗೆ ತಂದುಕೊಂಡು ಅದ್ದೂರಿ ವಿವಾಹವೇರ್ಪಡಿಸಿದ್ದರು. ನಾಗರತ್ನಮ್ಮ–ನಂದೀಶ್ವರರ ಹಿರಿಯ ಪುತ್ರಿಯಾದ ಕೋಮಲ ಸೋದರ ಮಾವನನ್ನು ಕೈ ಹಿಡಿದು ಸುಖಬಾಳು ನಡೆಸುತ್ತಿದ್ದ ಒಂದೆರಡು ವರ್ಷಗಳಲ್ಲಿ ಹೆಣ್ಣು ಮಗುವಿಗೆ ತಾಯಿಯಾದರು ವಿಧಿ ಸೋಲೂರು ಸಿದ್ದಪ್ಪನವರ ಪಾಲಿಗೆ ಅಳಲನ್ನು ತುಂಬಲು ಕಾದಿದ್ದಂತೆ ಕಂಡಿತು. ಹೆರಿಗೆ ಸಮಯದಲ್ಲಿ ಮುದ್ದಾದ ಹೆಣ್ಣುಮಗುವಿಗೆ ಜನ್ಮನೀಡಿ ಶಿವೈಕ್ಯರಾಗಿ ಬಿಟ್ಟರು 14–3–1975 ಈ ವಿಯೋಗದಿಂದ ಸೋಲೂರರು ಖಿನ್ನರಾಗಿ ಹೋದರು ಎಂದೆಂದೂ ಹೆದರಿಸದಮುಪ್ಪು ಅಣಕಿಸತೊಡಗಿತ್ತು. ಪತ್ನಿ ಶ್ರೀಮತಿ ಚನ್ನಬಸಮ್ಮನವರು ಮೊಮ್ಮಗಳ ಅನಿರೀಕ್ಷಿತ ಮರಣಕ್ಕೆ ಜರ್ಝರಿತರಾಗಿ ಹೋದರು ಪ್ರೀತಿಯ ಮೊಮ್ಮಗಳು, ಏಕಮಾತ್ರ ಸೊಸೆ ಕೋಮಲ ತೊರೆದು ಹೋಗಿದ್ದ ಶಿಶುವನ್ನು ಎರಡು ವರ್ಷ ಜೋಪಾನವಾಗಿ ಸಲಹಿ ಕೊನೆಗೆ ತಾವೂ 25–2–1977ರಂದು ಮುತ್ತೈದೆಯಾಗಿ ಮರಣಕ್ಕೆ ಶರಣಾದರು. ಅಪರ ವಯಸ್ಸಿನ ಸೋಲೂರರಿಗೆ ಧರ್ಮಪತ್ನಿ ಮತ್ತು ಮೊಮ್ಮಗಳ ವಿಯೋಗ ಮುಪ್ಪಿನ ಮನಸ್ಸಿಗೆ ಭಾರವಾಗಿ ಬಿಟ್ಟಿತು. ಪ್ರೀತಿಯ ಮಗಳು ನಾಗರತ್ನಮ್ಮನ ದ್ವಿತೀಯ ಪುತ್ರಿ ಕುಮಾರಿ ಮಂಜುಳಾರನ್ನು ಶಿವಪ್ರಸಾದರಿಗೆ ತಂದುಕೊಂಡು ನಾರಿಯಿಲ್ಲದ ಮನೆವಾರ್ತೆಯ ಉರುಬನ್ನು ನಿವಾರಿಸಿದರು. ಶ್ರೀಮತಿ ಮಂಜುಳಾ ಪ್ರಸಾದ್ ತಾತನ ಸಮಾಜಸೇವೆಯನ್ನು ಮೈಗೂಡಿಸಿಗೊಂಡು ಹಲವು ಸಾಮಾಜಿಕ ಸಂಘ ಸಂಸ್ಥೆಗಳ ಪದಾಧಿಕಾರ ವಹಿಸಿ ಸಮುದಾಯದ ಸೇವೆಗೆ ಕಂಕಣ ಬದ್ಧರಾಗಿದ್ದಾರೆ. ಮನೆತನದ ಕೀರ್ತಿಯನ್ನು ಬೆಳೆಯಿಸುತ್ತಲೇ ಇದ್ದಾರೆ.

ಸೋಲೂರು ಸಿದ್ದಪ್ಪನವರು ಅರ್ದಶತಮಾನದ ತಮ್ಮ ಸಾರ್ವಜನಿಕ ಜೀವನದಲ್ಲಿ ಯಶಸ್ಸು ಕಂಡಿದ್ದರೂ ಏಕ ಮಾತ್ರ ಪುತ್ರ ಶಿವಪ್ರಸಾದರನ್ನು ರಾಜಕೀಯಕ್ಕೆ ತರಲಿಲ್ಲ. ಆಗಾಗ್ಗೆ ಮಗನಿಗೆ ರಾಜಕೀಯ ರಂಗದ ಬಗ್ಗೆ ಜಿಗುಪ್ಸೆ ಹುಟ್ಟಿಸುವ ಮಾತುಗಳನ್ನು ಹೇಳುತ್ತಲೇ ಇದ್ದರು.

"ರಾಜಕೀಯ ರಂಗಕ್ಕೆ ದೂರ್ತರ ಪ್ರವೇಶವಾಗುತ್ತದೆ. ಒಂದಲ್ಲ ಒಂದು ದಿನ ಪವಿತ್ರ ರಾಜಕೀಯ ಕ್ಷೇತ್ರವನ್ನು ಕಲುಷಿತಗೊಳಿಸಿಯೇ ಬಿಡುತ್ತಾರೆ. ದುಷ್ಟ ಕೂಟದಲ್ಲಿ 'ಏಗಲು' ದುಷ್ಟತನವನ್ನೇ ಅವಲಂಬಿಸಬೇಕಾಗುತ್ತದೆ. ಇದು ನನಗೆ

ಸುತರಾಂ ಇಷ್ಟವಿಲ್ಲ ಇಂಜಿನಿಯರಿಂಗ್ ಪದವೀಧರನಾದ ನೀನು ಸ್ವಾವಲಂಬಿಯಾಗಿ ಬದುಕನ್ನು ರೂಢಿಸಿಕೋ, ಪರೋಪಕಾರ ಮಾಡಲು ಎಲ್ಲಿದ್ದರೇನು? ಕೈಲಾದಷ್ಟು ಜನಹಿತ ಕಾರ್ಯಗಳನ್ನು ಮಾಡಲು ರಾಜಕೀಯ ರಂಗವೇ ಬೇಕಾಗಿಲ್ಲ. ಶಾಸಕನ ಮಗ ಶಾಸಕನೇ ಆಗಬೇಕು. ಮಂತ್ರಿಯ ಮಗ ಮಂತ್ರಿಯೋ ಆಗಬೇಕು ಎಂಬ ಧೋರಣೆ ಪ್ರಜಾಪ್ರಭುತ್ವದ ನೀತಿಗೆ ತಕ್ಕುದಲ್ಲ. ಯೋಗ್ಯತೆಯಿದ್ದವರು ಆರಿಸಿ ಬರಬೇಕು ಅಧಿಕಾರ ಲಾಲಸೆಗೆ, ದ್ರವ್ಯ ಸಂಪಾದನೆಗೆ ರಾಜಕಾರಣವನ್ನು ಬಳಸಿಕೊಳ್ಳುವುದರಿಂದ ದೇಶವೇ ನಾಶವಾಗುತ್ತದೆ. ಮತ ಗಳಿಸಲು ಹೆಂಡ ಹಣ, ವಿನಿಮಯವಾಗುತ್ತಿರುವ ಕೆಟ್ಟ ಕಾಲ ಬರುತ್ತಿದೆ. ಯಾರೇನೇ ಹೇಳಿದರೂ ನೀನು ಮಾತ್ರ ರಾಜಕೀಯಕ್ಕೆ ಬರಬೇಡ, ದೊಂಬಿ. ಹೊಡೆದಾಟ ಕೊಲೆ. ವಂಚನೆ, ಸುಳ್ಳು ಮುಂತಾದ್ದು ರಾಜಕಾರಣಿಗಳ ವಿಶೇಷ ಗುಣವೆನ್ನುವಂತೆ ನೋಡಲಾಗುವ ಈ ಕಾಲದಲ್ಲಿ ಅದರಿಂದ ನೀನು ದೂರವಿರುವುದೇ ಒಳ್ಳೆಯದು."

(ನಿರೂಪಣೆ ಶ್ರೀ ಶಿವಪ್ರಸಾದ್)

ತಮ್ಮನಂತರ ಮಾಗಡಿಯ ಸಿ.ಆರ್. ರಂಗೇಗೌಡರನ್ನು ಸೋಲೂರರು ರಾಜಕಾರಣಕ್ಕೆ ತಂದರು ಅವರನ್ನು ಮಾನಸ ಪುತ್ರರಂತೆಯೇ ರಾಜಕೀಯದಲ್ಲಿ ಬೆಳೆಸಿದರು. ತಂದೆಯ ಮುಂದೆಯೇ ಮಗ ಮರಣ ಹೊಂದಬಾರದೆಂಬ ಲೋಕೋಕ್ತಿಯನ್ನು ಮೀರಿ ರಂಗೇಗೌಡರೂ ನಿಧನರಾಗಿ ಬಿಟ್ಟರು. ಕೊಟ್ಟ ಕೊನೆಗೆ ಯಲ್ಲಾಪುರದ ಜಮೀನ್ದಾರ ವಂಶದ (ಸಿಂಗಾರಿ ಗೌಡರ ಸೋದರ ಪುತ್ರ) ಬೆಟ್ಟಸ್ವಾಮಿ ಗೌಡರನ್ನು ಚುನಾವಣೆಗೆ ನಿಲ್ಲಿಸಿ ಅವರ ಪರ ಪ್ರಚಾರ ನಡೆಸಿ ಗೆಲ್ಲಿಸಿದರು. ಅವರೂ ಅಕಾಲ ಮೃತ್ಯುವಿಗೆ ಶರಣಾಗಿಬಿಟ್ಟರು. ಈಗ ಮಾಗಡಿ ತಾಲ್ಲೂಕಿನ ರಾಜಕೀಯ ಇತಿಹಾಸದಲ್ಲಿ ಸೋಲೂರರು ಹೆಸರಿನಲ್ಲಷ್ಟೇ ಸ್ಥಾನ ಗಳಿಸಿದ್ದಾರೆ. ಅವರ ಗರಡಿಯಲ್ಲಿ ಪಳಗಿದವರಾರೂ ಬಹುಕಾಲ ಕ್ಷೇತ್ರದಲ್ಲಿರದೆ ಹೋಗಿಬಿಟ್ಟರು. ಸಮಕಾಲೀನರಾದ ಕೆಂಗಲ್ ಹನುಮಂತಯ್ಯನವರು ದಿನಾಂಕ 1-12-1980 ರಂದು ವಿಧಿ ವಶರಾಗಿಬಿಟ್ಟರು. ಗೆಳೆಯನ ಸಾವು ಸೋಲೂರರಿಗೆ ಇನ್ನಿಲ್ಲದ ದುಃಖ ತಂದಿತ್ತು. ರಾಜಕೀಯ ಕ್ಷೇತ್ರಕ್ಕೆ ತನಗಿಂತ ಮುಂಚಿತವಾಗಿ ಬಂದರು ಮುಂಚಿತವಾಗಿಯೇ M.R.A. ಆದರು ಮರಣದಲ್ಲಿಯೂ ತನಗಿಂಥ ಮುಂಚೆ ಹೋಗಿದ್ದು ಸರಿಗಾಣಲಿಲ್ಲ. ಗೆಳೆಯನಿಗೆ ಅಂತಿಮ ವಿದಾಯ ಹೇಳಲು ಸೋಲೂರರು ಕೆಂಗಲ್ಲಿಗೆ ಹೋಗಿದ್ದರು. ಸಹಸ್ರಾವಧಿ ಅಭಿಮಾನಿಗಳ ಜೊತೆಗೂಡಿ ತಾವು ಕಂಬನಿಮಿಡಿದು ಬಂದರು. ಗೆಳೆಯನ ಅವಸಾನವಾದ ಕೇವಲ ಇಪ್ಪತ್ತೊಂಭತ್ತು ದಿನಗಳು ಮಾತ್ರವೇ ಬದುಕಿ

(31–12–1980) ತಾವೂ ಕೀರ್ತಿ ಶೇಷರಾಗಿಬಿಟ್ಟರು. ತೊಂಭತ್ತು ವರ್ಷಗಳಿಗಿಂತಲೂ ಹೆಚ್ಚು ಕಾಲ ಬದುಕಿ, ಬದುಕಿನ ನಾನಾ ಹಂತಗಳಲ್ಲಿ ಊರು–ಸೋಲೂರಿಗೆ ತಾಲ್ಲೂಕು ಮಾಗಡಿಗೆ, ರಾಜ್ಯ ಕರ್ನಾಟಕಕ್ಕೆ ತನ್ನ ಪಾಲಿನ ಪೂರ್ಣ ಪ್ರಮಾಣದ ಸೇವೆ ಸಲ್ಲಿಸಿ ಕೀರ್ತಿಶೇಷರಾದರು ಅವರ ಸಮಾಧಿ ಸೋಲೂರಿನಲ್ಲಿದೆ. ಅವರ ಸ್ಮರಣೆಗಾಗಿ ಸೋಲೂರು ಸಿದ್ಧಪ್ಪ ಸರ್ಕಲ್ ಎಂಬ ವೃತ್ತ ಸೋಲೂರರ ನೆನಪನ್ನು ಧ್ವನಿಯಿಲ್ಲದ ಧ್ವನಿಯಲ್ಲಿ ಪಿಸುಗುಡುತ್ತಲೇ ಇದೆ.

ಸೋಲೂರು ಸಿದ್ದಪ್ಪನವರು 1952 ರಿಂದ 1957 ರವರೆಗೆ ಮತ್ತು 1967 ರಿಂದ 1971 ರವರೆಗೆ ವಿಧಾನ ಸಭಾ ಸದಸ್ಯರಾಗಿ ಚುನಾಯಿತರಾಗಿದ್ದರು ಎರಡು ಅವಧಿ ಅಥವಾ ಹತ್ತು ವರ್ಷಗಳ ವಿಧಾನ ಸಭಾ ಕಲಾಪಗಳಲ್ಲಿ ಬಹು ಗಂಭೀರವಾದ ಚರ್ಚೆಗಳಲ್ಲಿ ಪಾಲ್ಗೊಂಡು ಉಪಯುಕ್ತ ಸಲಹೆಗಳನ್ನು ನೀಡುತ್ತಿದ್ದರು. ಪ್ರಚಲಿತ ಸಮಸ್ಯೆಗಳ ಬಗ್ಗೆ ಸಭೆಯ ಗಮನ ಸೆಳೆಯುತ್ತಿದ್ದರು. 21–3–1967ರ ಭಾಷಣದಲ್ಲಿ ಅವರೇ ಹೇಳಿರುವಂತೆ "1957ರಲ್ಲಿ ಈ ಸ್ಥಾನ ಬಿಟ್ಟು ಹೋದವನು 1967 ರಲ್ಲಿ ಈ ಸ್ಥಾನಕ್ಕೆ ಮತ್ತೆ ಬಂದಿದ್ದೇನೆ. 1927ರಿಂದ 1957ರವರೆಗೆ ನಾನು ಶಾಸನ ಸಭೆಯಲ್ಲಿ ಕಾಂಗ್ರೆಸ್ ಸಂಸ್ಥೆಯಲ್ಲಿ ಕೆಲಸ ಮಾಡಿದ್ದೇನೆ. ಈ ಹತ್ತು ವರ್ಷಗಳಿಂದ ಕಾರಣಾಂತರಗಳಿಂದ ನನಗೆ ಸೀಟು ಸಿಕ್ಕಲಿಲ್ಲ."

ಚುನಾವಣೆಯಲ್ಲಿ ಸ್ಪರ್ಧಿಸಲು ಅವಕಾಶ ಸಿಕ್ಕದೇ 1957ರಿಂದ 67ರ ತನಕ ಶಾಸಕರಾಗಲಿಲ್ಲ, ಹಾಗೆಂದು ಅವರೇನೂ ರಾಜಕೀಯ ಕ್ಷೇತ್ರದಿಂದ ದೂರವಿರಲಿಲ್ಲ. 1927ರಿಂದ 1971 ರವರೆಗೆ ಸರಿ ಸುಮಾರು ಅರ್ಧಶತಮಾನ ಪರ್ಯಂತ ಸಾರ್ವಜನಿಕ ಜೀವನದಲ್ಲಿ ದುಡಿದಿದ್ದಾರೆ. ಲಭ್ಯ ಮಾಹಿತಿಗಳ ಪ್ರಕಾರ ಸೋಲೂರು ಸಿದ್ದಪ್ಪನವರು '28' ವರ್ಷಗಳ ಕಾಲ ಜಿಲ್ಲಾ ಬೋರ್ಡಿನಲ್ಲಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಹದಿನೈದು ವರ್ಷಗಳ ಕಾಲ ಶಾಲಾ ಮಂಡಳಿಯ ಸದಸ್ಯರಾಗಿದ್ದಾರೆ. ಹತ್ತು ವರ್ಷಗಳ ಕಾಲ ಪಂಚಾಯಿತಿ ಸದಸ್ಯರಾಗಿದ್ದಾರೆ. ಗೃಹಮಂಡಳಿ. ಮತ್ತು ಅಂದಾಜು ಕಮಿಟಿಗಳಲ್ಲಿ ಸದಸ್ಯರಾಗಿದ್ದಾರೆ. ತಾಲ್ಲೂಕು ಬೋರ್ಡ್ ಮೆಂಬರಾಗಿದ್ದಾರೆ, ಸೋಲೂರಿನ ದೊಡ್ಡ ಪ್ರಮಾಣದ ಸೊಸೈಟಿಯ ಅಧ್ಯಕ್ಷರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿದ್ದಾರೆ. ಮಾಗಡಿ ತಾಲ್ಲೂಕು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರಾಗಿ ಇಪ್ಪತ್ತು ನಾಲ್ಕು ವರ್ಷ ಸತತ ದುಡಿದಿದ್ದಾರೆ ಮಾಗಡಿ ತಾಲ್ಲೂಕು ಮಾರ್ಕೆಟಿಂಗ್ ಸೊಸೈಟಿಯ ಅಧ್ಯಕ್ಷರಾಗಿ ಮತ್ತು ನಿಯಂತ್ರಿತ

ಮಾರುಕಟ್ಟೆ ಸಮಿತಿಯ ನಿರ್ದೇಶಕರಾಗಿ ಸೇವೆಸಲ್ಲಿಸಿದ್ದಾರೆ. ಜಿಲ್ಲಾ ಡಿ.ಸಿ. ಸಿ. ಬ್ಯಾಂಕಿನ ನಿರ್ದೇಶಕರಾಗಿ ಹದಿನೈದು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ರಾಜ್ಯ ಅಭಿವೃದ್ಧಿ ಬ್ಯಾಂಕಿನ ನಿರ್ದೇಶಕರಾಗಿ ಹತ್ತು ವರ್ಷ ಸೇವೆ ಸಲ್ಲಿಸಿದ್ದಾರೆ. ಅಪೆಕ್ಸ್ ಬ್ಯಾಂಕಿನ ಹಂಗಾಮಿ ಕೋಶಾಧಿಕಾರಿಯಾಗಿ ಹತ್ತು ವರ್ಷ ಸೇವೆ ಸಲ್ಲಿಸಿದ್ದಾರೆ. ಸೇವಾ ವರ್ಷಗಳ ಪ್ರಕಾರ ಸೋಲೂರು ಸಿದ್ದಪ್ಪನವರು ಒಟ್ಟಾರೆ ನೂರಿಪ್ಪತ್ತೆರಡು ಸೇವಾ ವರ್ಷಗಳ ಅವಧಿ ಪೂರ್ಣ ಸಾರ್ವಜನಿಕ ಕ್ಷೇತ್ರದಲ್ಲಿ ಅಹರ್ನಿಶಿ ದುಡಿದಿದ್ದಾರೆ. ಒಂದೇ ಅವಧಿಯಲ್ಲಿ ನಾಲ್ಕಾರು ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸಲು ಅವರಿಗೆ ಶಕ್ತಿಯಿತ್ತು. ತತ್ಪರತೆಯಿತ್ತು. ಇವೆರಡರಲ್ಲಿ ಯಾವುದೊಂದು ಕೊರತೆಯಿದ್ದರೂ ಇಷ್ಟೊಂದು ಸುದೀರ್ಘ ಕಾಲ ಸಾರ್ವಜನಿಕ ಕ್ಷೇತ್ರದಲ್ಲಿ ಚಟುವಟಿಕೆಯಿಂದಿರಲು ಸಾಧ್ಯವಾಗುತ್ತಿರಲಿಲ್ಲ. ಜನರು ಇವರ ಬೌದ್ಧಿಕ ನಿಲುವುಗಳನ್ನು ಅಪೇಕ್ಷಿಸುತ್ತಿದ್ದರು ಜನಪ್ರಿಯತೆಯೇ ಇವರಿಗೆ ಯೋಗ್ಯತೆಯನ್ನು ತುಂಬಿ ಕೊಡುತ್ತಿದ್ದವು. ಸರ್ಕಾರಿ ಇಲಾಖೆಗಳ ಅಧಿಕಾರಿಗಳಿಂದ ಕೆಲಸ ಮಾಡಿಸಲು ಇವರು ಪ್ರಯೋಗಿಸುತ್ತಿದ್ದ ತಂತ್ರಗಳು ಅವರಿಗಷ್ಟೇ ವಿಶಿಷ್ಟವಾಗಿರುತ್ತಿದ್ದವು. ಸಮಕಾಲೀನ ರಾಜಕೀಯ ಧುರೀಣರೂ ಕೂಡ ಇವರ ತಂತ್ರವನ್ನು ಗುರುತಿಸಿದ್ದರು. (29–1981 ರ ಪ್ರಭಾಕರ ಅವರ ಭಾಷಣ) ಸೋಲೂರರು ಶಾಸನ ಸಭಾ ಕಲಾಪಗಳಲ್ಲಿ ಪಾಲ್ಗೊಳ್ಳುತ್ತಿದ್ದ ಆ ಕಾಲದಲ್ಲಿ ಘಟಾನುಘಟಿ ರಾಜಕಾರಣಿಗಳಿದ್ದರು. ಸಮಾಜವಾದೀ ಪಕ್ಷದ ಧುರೀಣ ಶಾಂತವೇರಿ ಗೋಪಾಲ ಗೌಡರಿದ್ದರು. ಹುಚ್ಚೇಗೌಡರಿದ್ದರು. ಚನ್ನಿಗರಾಮಯ್ಯ ನವರಿದ್ದರು. ಹುಚ್ಚ ಮಾಸ್ತಿಗೌಡರಿದ್ದರು. ಎಸ್. ನಿಜಲಿಂಗಪ್ಪನವರಿದ್ದರು. ವಿ.ವಿ. ಕೃಷ್ಣಪ್ಪ ಜನಾಬ್‌ಇಮಾಂ ಒಬ್ಬೊಬ್ಬರೂ ಒಂದೊಂದು ರಾಜಕಾರಣ ವಿಶ್ವಕೋಶದಂತಹ ಸಂಸದೀಯ ಪಟುಗಳಾಗಿದ್ದರು. ಇವರೆಲ್ಲರ ಮಧ್ಯೆ ಎದ್ದುನಿಂತು ಮಾತಾಡಲು ಸಾಮಾನ್ಯ ಅನುಭವದ ಶಾಸಕರಿಗೆ ಧೈರ್ಯ ಮೂಡುತ್ತಿದ್ದದ್ದು ಅಪರೂಪ. ಹೇಳಿಕೊಳ್ಳುವಂತಹ ವಿದ್ಯಾರ್ಹತೆಯಿಲ್ಲದ ಸೋಲೂರರು ಲೋಕಾನುಭವದ ಭಂಡಾರಿಯಾಗಿದ್ದರು. ಭಾಷಣಕ್ಕೆ ತೊಡಗುವ ಮುನ್ನ ಸಾಧ್ಯವಾದಷ್ಟು ಅಂಕಿಅಂಶಗಳನ್ನಿಟ್ಟು ಕೊಂಡೇ ಮಾತಾಡುತ್ತಿದ್ದರು. ಉದಾ:– ಮೈಸೂರು ಸಂಸ್ಥಾನದಲ್ಲಿ 83 ಲಕ್ಷ ಎಕರೆಗಳಷ್ಟು ಬೇಸಾಯಕ್ಕೊಳಪಟ್ಟ ಜಮೀನಿದೆ. ಹತ್ತು ಲಕ್ಷ ಎಕರೆ ಬಂಜರು ಭೂಮಿಯಿದೆ, ಮಾಗಡಿ ತಾಲ್ಲೂಕಿನಲ್ಲಿ 24 ಮೇಜರ್ ಕೆರೆಗಳಿವೆ. 120 ಮೈನರ್‌ಕೆರೆಗಳಿವೆ ಕರ್ನಾಟಕದಲ್ಲಿ ಎರಡು ಕೋಟಿ ಪ್ರಜೆಗಳಿದ್ದಾರೆ ಇತ್ಯಾದಿ.....

ಬೆಂಗಳೂರಿನ ಕೇಂದ್ರ ಸ್ಥಳದಲ್ಲಿ ವಿಧಾನಸೌಧ, ಸೆಂಟ್ರಲ್ ಕಾಲೇಜು ಎಂಜಿನಿಯರಿಂಗ್ ಕಾಲೇಜು, ಪಾಲಿಟೆಕ್ನಿಕ್, ಮಹಾರಾಣಿ ಕಾಲೇಜು ಮುಂತಾಗಿ ಬಹುಸುಂದರ ಕಟ್ಟಡಗಳಿವೆ. ಇವುಗಳ ಮಧ್ಯೆ ಅಂದಗೆಟ್ಟ ಸೆಂಟ್ರಲ್ ಜೈಲಿರುವುದು ನಗರದ ಶೋಭೆಗೆತಕ್ಕುದಲ್ಲ ಇದನ್ನು ಸ್ಥಳಾಂತರಿಸಿ ಎಂದವರು ಆಗ್ರಹಪಡಿಸುತ್ತಲೇ ಇದ್ದರು. ಈ ವಿಷಯ 1955 ರಲ್ಲೇ ಪ್ರಸ್ತಾಪವಾಗಿತ್ತು. 1967 ಬಂದರೂ ಅದು ಸ್ಥಳಾಂತರಗೊಳ್ಳಲಿಲ್ಲ. ಸೋಲೂರರು ಈ ವಿಳಂಬಕ್ಕೆ ಆಕ್ಷೇಪವೆತ್ತಿದ್ದರು. ಆದರೂ ಅದು ಸ್ಥಳಾಂತರಗೊಂಡದ್ದು 1997ರಲ್ಲಿ ಸೆಂಟ್ರಲ್ ಜೈಲನ್ನು ಸ್ಥಳಾಂತರಿಸಲು ನಲವತ್ತೆರಡು ವರ್ಷ ತೆಗೆದುಕೊಂಡದ್ದು ಆಶ್ಚರ್ಯವೆನಿಸಿದೆ. ಸರೀಕ ರಾಜಕಾರಣಿಗಳು ಸೋಲೂರು ಸಿದ್ದಪ್ಪ ಎಂಬುದಕ್ಕೆ ಸೋಲರಿಯದ ಸಿದ್ದಪ್ಪ ಎಂದೇ ವ್ಯಾಖ್ಯಾನ ಮಾಡುತ್ತಿದ್ದರು. ಶ್ಲಾಘಿಸುತ್ತಿದ್ದರು. ವಿಧಾನಸಭಾ ಕಲಾಪಗಳಲ್ಲಿ ವಿ–ಪಕ್ಷದ ಶಾಸಕರ ಅಭಿಪ್ರಾಯಗಳನ್ನು ಕಟುವಾಗಿ ವಿರೋಧಿಸದೆ, ಅಭಿಪ್ರಾಯಕ್ಕೆ ಶ್ಲಾಘನೆಯ ಮಾತುಗಳನ್ನಾಡಿ ನಂತರ ಅಭಿಪ್ರಾಯ ಸರಿಯಿಲ್ಲವೆಂದು ನಯವಾಗಿ ಹೇಳುತ್ತಿದ್ದರು.

ಕರ್ನಾಟಕ ಏಕೀಕರಣದ ಬಗ್ಗೆ ಚರ್ಚೆ ನಡೆದಾಗ (26–4–1955) ಬೆಂಗಳೂರು ದಕ್ಷಿಣ ಕ್ಷೇತ್ರದ ಶಾಸಕರಾದ ಎ.ವಿ. ನರಸಿಂಹರೆಡ್ಡಿಯವರು ಏಕೀಕರಣ ಈಗಲೇ ಬೇಡ ಎರಡು ವರ್ಷ ಮುಂದೂಡಿ ಎಂಬ ಸಲಹೆ ನೀಡಿದ್ದರು. ಅವರ ಅಭಿಪ್ರಾಯವನ್ನು ಸೋಲೂರರು ಅಲ್ಲಗಡೆದದ್ದು ಹೀಗೆ." ನಮ್ಮ ಜಿಲ್ಲೆಯವರಾಗಿ ಚುನಾಯಿತರಾಗಿ ಬಂದಂಥ ಮಾನ್ಯ ಸದಸ್ಯರಾದ ನರಸಿಂಹ ರೆಡ್ಡಿಯವರು, ಅರುವತ್ತು ಜನ ಶಾಸನ ಸಭಾ ಸದಸ್ಯರು ಇದಕ್ಕೆ ಒಪ್ಪಿಗೆ ಕೊಟ್ಟಿಲ್ಲವೆಂದು ಹೇಳಿದರು. ಅವರಿಗೆ ಈ ಅಭಿಪ್ರಾಯವನ್ನು ಸೂಚಿಸಿದಂಥ ಅರುವತ್ತು ಜನರು ಯಾರೊ ಗೊತ್ತಿಲ್ಲ. ಅರುವತ್ತು ಜನರ ಪರವಾಗಿ ರುಜುಮಾಡಿರುವ ಶಾಸನ ಸಭಾ ಸದಸ್ಯರೂ ಇದ್ದಾರೆ. ಆ ವಿಚಾರದಲ್ಲಿ ನಿಜಾಂಶವೇನೇ ಇರಲಿ, ಅವರಿನ್ನೂ ಚಿಕ್ಕ ವಯಸ್ಸಿನವರು, ಜಾಣರು, ಮತ್ತು ಬುದ್ಧಿವಂತರು, ಒಳ್ಳೆಯ ರೈತ ಮನೆತನದವರು ಅವರ ವಿಷಯದಲ್ಲಿ ನನಗೆ ಬಹಳ ಅಭಿಮಾನವಿದೆ ಅಂಥವರೇಕೆ ಈ ರೀತಿ ಮಾತನಾಡಿದರೋ ನನಗೆ ಗೊತ್ತಿಲ್ಲ".

ಸೋಲೂರರು ಖಂಡಿತವಾದಿಯಂತೆ ಮಾತಾಡಿದರೂ ಲೋಕವಿರೋಧಿಯಾಗುತ್ತಿರಲಿಲ್ಲ. ತಮ್ಮ ಹಿರಿತನದ ಅನುಭವದಿಂದ ತಮಗಿಂತ ಕಿರಿಯರನ್ನು ನಯವಾಗಿ ತಿದ್ದುತ್ತಿದ್ದರು. ವಿಧಾನ ಸಭಾ ಕಲಾಪದಲ್ಲಿ ಚರ್ಚೆ ಯಾವುದೇ ಬರಲಿ, ತಮ್ಮ ಸಲಹೆಗಳನ್ನು ನೀಡಲವಕಾಶ ದೊರೆತರೆ ಅದರೊಟ್ಟಿಗೆ

ತಮ್ಮ ಮತ ಕ್ಷೇತ್ರದ ನೀರಾವರಿ, ನ್ಯಾಯಾಲಯ ಶಾಲೆಗಳು, ಆರಕ್ಷಕ ಠಾಣೆ, ಆಸ್ಪತ್ರೆಗಳು ರಸ್ತೆಗಳು, ಸಹಕಾರ ಸಂಘಗಳು, ವಿದ್ಯುತ್, ಕೈಗಾರಿಕೆ, ಮುಂತಾದ್ದು ಆಗಲೇ ಬೇಕೆಂದು ಆಗ್ರಹಪಡಿಸುತ್ತಿದ್ದರು. ಶಾಸನ ಸಭೆಗಳಲ್ಲಿ ಕನ್ನಡ ಬಳಕೆ ಬಗ್ಗೆ ಅವರು ತಳೆದ ನಿಲುವುಗಳು ಬೆಲೆಯುಳ್ಳವು. ದೇಶಕ್ಕೆ ಸ್ವಾತಂತ್ರ್ಯ ಬಂದ ಒಂದು ದಶಕದೊಳಗೆ ಆರ್ಥಿಕ ಸ್ಥಿತಿ ತುಂಬಾ ಕೆಳಮಟ್ಟದಲ್ಲಿತ್ತು. ಅಂಥ ಸಮಯದಲ್ಲಿಯೇ ರಾಜಕೀಯ ರಂಗದ ಮುತ್ಸದ್ದಿಗಳು–ಶಾಸಕರು ಮಾಡಿಕೊಂಡ ಸಂಕಲ್ಪಗಳು ನವಕರ್ನಾಟಕ ನಿರ್ಮಾಣಕ್ಕೆ ಬುನಾದಿಯಾದವು.

ದೊಡ್ಡ ದೊಡ್ಡ ನೀರಾವರಿ ಯೋಜನೆಗಳ ಬಗ್ಗೆ ಸೋಲೂರರಿಗೆ ಅಷ್ಟೊಂದು ಒಲವು ಇರಲಿಲ್ಲ. ಸಣ್ಣ–ಸಣ್ಣ ಕೆರೆಗಳ ನಿರ್ಮಾಣವಾದರೆ ಪ್ರತಿ ಭಾಗದ ನೆಲವೂ ಹಸಿರಾಗಿ, ಎಲ್ಲರಿಗೂ ಸಮಾನ ಅನುಕೂಲವಾಗುತ್ತದೆಂದು ಪದೇ ಪದೇ ಹೇಳುತ್ತಾ ಬಂದಿದ್ದರು. ಶಿಕ್ಷಣದ ಬಗ್ಗೆ ಸಹಕಾರಿ ಆಂದೋಳನದ ಬಗ್ಗೆ, ಕೈಗಾರಿಕೆಗಳ ಬಗ್ಗೆ ಮುತುವರ್ಜಿ ವಹಿಸಿ ಕೆಲಸ ಮಾಡುತ್ತಿದ್ದರು.

ಸೊಲ್ಲಾನಾರೈದು ನುಡಿವನ ಜಾಣ್ಮೆಯ
ಕಲ್ಲ ಮೇಲಿನ ನೀರು ಮೆಲ್ಲನೆಯೆ ಸರಿದಂತೆ
ಸೊಲ್ಲ ನಾರೈದು ನುಡಿವನ ಜಾಣ್ಮೆಯು ಎಲ್ಲಕ್ಕು ಮಿಗಿಲು

**ಸರ್ವಜ್ಞ**

ಬಂಗಾ ಬಳಿಯಿಟ್ಟು ಬೈಬ್ಯಾಡ ಬಡವರಿಗೆ
ಬಂಗಾರ ನಿನಗೆ ಸ್ಥಿರವಲ್ಲ ಮುದ್ಯಾಣ
ಬಿಸಿಲು ಹೊಳ್ಳುವುದು ತಡವಲ್ಲೆ

– **ಜಾನಪದ ಗೀತೆ**

# ಗ್ರಾಮೀಣಾಭಿವೃದ್ಧಿ'

**ಜುಲೈ 1952**

ಅಧ್ಯಕ್ಷರೇ, ಇದುವರೆಗೂ ಶ್ರೀಮಾನ್ ಹುಚ್ಚೇಗೌಡರು ತಂದಂಥ ಕತ್ತರಿ ನಿರ್ಣಯದ ವಿಚಾರವಾಗಿ ನಮ್ಮ ಸ್ನೇಹಿತರಾದ ಶ್ರೀಮಾನ್ ಗೋಪಾಲಗೌಡರು, ತಮ್ಮ ಕಡೆಯಿಂದ ಬರುವ ಯಾವ ವಾದವನ್ನಾದರೂ ಪುಷ್ಟೀಕರಿಸಬೇಕಾದದ್ದು ತಮ್ಮಕರ್ತವ್ಯವೆಂದು ಮನವುಳ್ಳವರಾಗಿರುವುದರಿಂದ, ಈ ವಿಷಯದಲ್ಲಿಯೂ ಈ ರೂರಲ್ ಡೆವಲಪ್‌ಮೆಂಟ್ ಯೋಜನೆಯ ಉದ್ದೇಶವೇನು ಎಂಬುದನ್ನು ಮನಗಾಣದೆ, ಅದರಿಂದ ಹೆಚ್ಚಿನ ಫಲ ದೊರೆತಿರುವುದನ್ನು ಗಮನದಲ್ಲಿಟ್ಟುಕೊಳ್ಳದೆ ತಮ್ಮ ಉತ್ತರವನ್ನು ಮುಂದುವರಿಸಿದ್ದಾರೆ. ಆದರೂ ತಾಲ್ಲೂಕುಗಳಲ್ಲಿ ರೂರಲ್ ಡೆವಲಪ್‌ಮೆಂಟ್ ಯೋಜನೆಯಿಂದ ಆಗಿರತಕ್ಕ ಪ್ರಯೋಜನಗಳನ್ನು ಅವರು ಚೆನ್ನಾಗಿ ತಿಳಿದುಕೊಳ್ಳದೆ ಇಲ್ಲವೆಂದು ಭಾವಿಸುತ್ತೇನೆ. ನನ್ನ ಮಾನ್ಯ ಸ್ನೇಹಿತರೂ ಮತ್ತು ಹಾಸನ ಜಿಲ್ಲೆಯಲ್ಲಿ ಡೆವಲಪ್‌ಮೆಂಟ್ ಕಮಿಟಿಯ ಅಧ್ಯಕ್ಷರೂ ಆದ ಶ್ರೀಮಾನ್ ಲಕ್ಕಪ್ಪಗೌಡರು ಇದರ ವಿಷಯವನ್ನಾಗಲೇ ಬಹಳ ವಿವರವಾಗಿ ಹೇಳಿದ್ದಾರೆ. ನಾನು ಅವುಗಳನ್ನೇ ಮತ್ತೆ ಹೇಳಲು ಇಷ್ಟ ಪಡುವುದಿಲ್ಲ. ಇಷ್ಟು ಹೇಳಿದರೆ ಸಾಕಾಗಿದೆ. ಮೈಸೂರು ಸಂಸ್ಥಾನದಲ್ಲಿ ಈ ರೂರಲ್ ಡೆವಲಪ್‌ಮೆಂಟ್ ಯೋಜನೆ ಜಾರಿಗೆ ಬಂದ ಮೇಲೆ ಗ್ರಾಮಾಂತರಗಳಿಂದ ಗ್ರಾಮಾಂತರಗಳಿಗೆ ಹೋಗುವ ಎಷ್ಟೋ ರಸ್ತೆಗಳು ಸರ್ಕಾರದ ಹಣ ಒಂದು ಕಾಸು ಖರ್ಚಿಲ್ಲದೆ ಆಗಿವೆ; ಸಾಧಾರಣವಾಗಿ ಈಗಿರತಕ್ಕ ಹೊಸಬಸ್ ಸರ್ವಿಸ್‌ಗಳು ಕೂಡ ಆ ರೈತರು ಮಾಡಿದರಸ್ತೆಗಳಲ್ಲಿಯೇ ಹೋಗುತ್ತಿವೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಎರಡನೆಯದಾಗಿ, ಮೈಸೂರು ಸಂಸ್ಥಾನದಲ್ಲಿ ಈ ರೂರಲ್ ಡೆವಲಪ್‌ಮೆಂಟ್ ಸ್ಕೀಮಿನಿಂದ ಅನೇಕ ವರ್ಷಗಳಿಂದಲೂ ಆಗದೆ ಇದ್ದಂಥ ಬಾವಿಯ ಕೆಲಸಗಳು ನಡೆದಿವೆ. ಕಾರಣವೇನೆಂದರೆ, ಪ್ರತಿ ತಿಂಗಳಲ್ಲಿ ತಾಲ್ಲೂಕು ಡೆವಲಪ್‌ಮೆಂಟ್ ಕಮಿಟಿಯು ಸೇರಿದಾಗ ವೆಟರಿನರಿ, ವ್ಯವಸಾಯ, ಇಂಜಿನಿಯರಿಂಗ್, ರೆವಿನ್ಯೂ, ಫಾರೆಸ್ಟ್ ಮುಂತಾಗಿ ಎಲ್ಲಾ ಇಲಾಖೆಗಳು ಕಲೆತು ಎಲ್ಲರೂ ಒಂದು ಕಡೆ ಸೇರಿ ಆಯಾ ಬಾಬಿನವರು ಆಯಾ ತಾಲ್ಲೂಕಿನಲ್ಲಿ ಏನೇನು ಕೆಲಸ ಕಾರ್ಯಗಳನ್ನು ಮಾಡಿದ್ದಾರೆಂಬ ವರದಿಯನ್ನು ತೆಗೆದುಕೊಂಡು,

ಅದರ ಮೇಲೆ ಕಾರ್ಯಕ್ರಮ ತೆಗೆದುಕೊಳ್ಳುತ್ತಿದ್ದರಿಂದ ತಾಲ್ಲೂಕಾ ಮಳೆ ಎಷ್ಟು ಪ್ರಯೋಜನ ದೊರೆತಿದೆಯೆಂಬುದು ಎಲ್ಲರಿಗೂ ಗೊತ್ತಿರತಕ್ಕ ವಿಷಯ. ಅಂಥದರಲ್ಲಿ ಬಾವಿಗಳ ಕೊರತೆಯ ವಿಚಾರವನ್ನು ಶ್ರೀಮಾನ್ ಹುಚ್ಚೇಗೌಡರು ಹೇಳಿದರು. ಅವರ ಡಿಸ್ಟ್ರಿಕ್ಟಿನಲ್ಲಿ ಅವರೇ ಡಿಸ್ಟ್ರಿಕ್ಟ್ ಬೋರ್ಡ್ ಅಧ್ಯಕ್ಷರಾಗಿದ್ದಾರೆ. ಅವರು ಅನೇಕ ಹಳ್ಳಿಗಳಲ್ಲಿ ಸಂಚಾರ ಮಾಡಿದ್ದಾರೆಂದು ನನಗೆ ಗೊತ್ತಿದೆ. ಅವರ ಆಜುಬಾಜು ತಾಲ್ಲೂಕಾದ ನಮ್ಮ ತಾಲ್ಲೂಕಿನಲ್ಲಿ ರೈತರ ಉದ್ಧಾರಕ್ಕಾಗಿ ಎಷ್ಟೊಂದು ಬಾವಿಗಳನ್ನು ಕೊಟ್ಟಿದೆಯೆಂಬುದು ಅವರಿಗೆ ತಿಳಿಯದೆ ಇಲ್ಲ. ನೂರಾರು ವರ್ಷಗಳಿಂದ ರೈತರಿಗೆ ದೊರೆಯದಿದ್ದ ಸೌಲಭ್ಯ ಈಗ ದೊರೆತಂತಾಗಿದೆಯೆಂದರೆ ಅತಿಶಯೋಕ್ತಿಯಲ್ಲ. ಅದರಲ್ಲು ನಮ್ಮ ಹಿಂದುಳಿದ ಪಂಗಡದವರಿಗೆ ಸರ್ಕಾರದವರು ಮನೆಗಳನ್ನು ಕಟ್ಟಿಕೊಳ್ಳುವುದಕ್ಕೆ ದೊರಕಿಸಿ ಕೊಟ್ಟಿರುವ ಸಹಾಯ ಹಿಂದೆ ಎಂದೂ ದೊರೆತಿಲ್ಲ. ಪ್ರತಿಯೊಂದು ಕಡೆಯಲ್ಲೂ 50–50 ಮನೆಗಳನ್ನು ಕಟ್ಟಿಸುವುದಕ್ಕೆ ಸರಿಯಾಗಿ ಯೋಜನೆಯನ್ನು ಹಾಕಿ ಸರ್ಕಾರದವರು ಕಟ್ಟಿಸಿ ಕೊಟ್ಟಿರುವ ವಿಷಯವನ್ನು ತಿಳಿಸುವುದಕ್ಕೆ ಅಂಕಿ ಅಂಶಗಳನ್ನು ಕೂಡ ಮಾನ್ಯ ಸದಸ್ಯರಿಗೆ ತೋರಿಸಿಕೊಡಬಲ್ಲೆವು. ಇಂಥ ಒಂದು ಸೌಲಭ್ಯವನ್ನು ನಮ್ಮ ರೈತಬಾಂಧವರು ಸರ್ವೇಸಾಧಾರಣವಾಗಿ ನಿರೀಕ್ಷಣೆಮಾಡುತ್ತಿರುವಾಗ, ಈ ಸ್ಕೀಮಿನಿಂದ ಏನೂ ಪ್ರಯೋಜನ ಸಿಕ್ಕಲಿಲ್ಲವೆಂದು ಹೇಳಿದರೆ, ಅದು ಕೇವಲ ಸಾಂಪ್ರದಾಯಿಕವಾಗಿ ಹೇಳಿದ ಮಾತುಗಳೇ ಸರಿ.

ಆಮೇಲೆ ಡೆವಲಪ್‌ಮೆಂಟ್ ಇಲಾಖೆಯ ವ್ಯಾನ್‌ಗಳು ಜಿಲ್ಲಾಧ್ಯಕ್ಷರ ವಶದಲ್ಲಿವೆ, ಅವು ಅನುಪಯೋಗಕರವಾದುವು ಎಂದು ಹೇಳಿದರು. ಅದನ್ನು ನಾನು ಒಪ್ಪಲಾರೆ, ಅವುಗಳಿಂದ ಬಹಳ ಉಪಯೋಗವಾಗಿದೆ. ಲಾವಣಿಕಾರರಿಂದ ಲಾವಣಿ ಹಾಡಿಸಿ, ಉಪಯುಕ್ತವಾದ ಚಿತ್ರಗಳನ್ನು, ರೈತರಿಗೆ ಪ್ರದರ್ಶಿಸಿ ಎಲ್ಲಾ ಹಳ್ಳಿಗಳಲ್ಲೂ ತಾಲ್ಲೂಕು ಡೆವಲಪ್‌ಮೆಂಟ್ ಕಮಿಟಿಯವರು ಗ್ರಾಮಾಂತರಗಳಲ್ಲಿ ಸೇರಿ ಅವರು ಚರ್ಚೆ ಮಾಡುವ ವಿಷಯಗಳನ್ನು ಜನರಿಗೆ ತಿಳಿಯಪಡಿಸಿ, ಹೀಗೆ ಮಾಡಿರುವುದನ್ನೆಲ್ಲ ರೈತ ಜನಾಂಗದವರು ನೋಡಿದ್ದಾರೆ. ಅದರ ಪ್ರಯೋಜನವನ್ನು ಬಿಡಿಸಿ ಹೇಳಬೇಕಾಗಿಲ್ಲ. ಡಿಸ್ಟ್ರಿಕ್ಟ್ ಹೆಡ್‌ಕ್ವಾರ್ಟರುಗಳಲ್ಲಿ ಮೀಟಿಂಗ್ ನಡೆಯುವ ಕಾಲದಲ್ಲಿ ಲಾವಣಿಕಾರರು ಅದರ ಅನುಕೂಲವನ್ನು ಜನರಿಗೆ ತಿಳಿಯಪಡಿಸಿರುವುದಲ್ಲದೆ ದೇಶಾಭ್ಯುದಯ ಮಾಡುವ ವ್ಯವಸ್ಥೆಯನ್ನು ಕೂಡ ತಿಳಿಸಿದ್ದಾರೆ. ಆದ್ದರಿಂದ ಸರ್ಕಾರಿ ಅಧಿಕಾರಿಗಳು ಈ ವ್ಯಾನ್‌ಗಳನ್ನು ಅನುಪಯೋಗ ಮಾಡಿದ್ದಾರೆಂದು ಹೇಳುವುದು ಸರಿಯಲ್ಲ.

ಆದ್ದರಿಂದ ಮೈಸೂರು ಸಂಸ್ಥಾನದಲ್ಲಿ ರೂರಲ್‌ಡೆವಲಪ್‌ಮೆಂಟ್ ಸ್ಕೀಮಿನಿಂದ ಹೆಚ್ಚಿನ ಪ್ರಯೋಜನ ಲಭಿಸಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ಅದಕ್ಕೆ ಹೆಚ್ಚಾಗಿ ಗ್ರಾಂಟನ್ನು ಕೊಡುವುದರ ಮೂಲಕ ದೇಶದ ಉನ್ನತಿಗೆ ನಾವು (ಸಹ) ತಳಹದಿ ಹಾಕುತ್ತಿದ್ದೇನೆಂದರೆ ತಪ್ಪಾಗಲಾರದು. ಇನ್ನು ಮೇಲೆ ಹೊಸದಾಗಿ ರಚಿತವಾದ ಬೋರ್ಡುಗಳು ಈ ಡೆವಲಪ್‌ಮೆಂಟ್ ಕಮಿಟಿಗಳ ಕರ್ತವ್ಯಗಳನ್ನು ಅಳವಡಿಸಿಕೊಂಡು ವ್ಯವಸ್ಥಿತವಾಗುವ ಸಂದರ್ಭ ಒದಗಿದೆ, ಅಲ್ಲಿಯವರೆಗೂ ಈ ರೂರಲ್ ಡೆವಲಪ್‌ಮೆಂಟ್ ಬೋರ್ಡ್‌ಗಳು ಸರಿಯಾಗಿ ನಡೆಯುವುದಕ್ಕೆ ದ್ರವ್ಯ ಸಹಾಯವನ್ನು ಹೆಚ್ಚಾಗಿ ಕೊಡಬೇಕೆಂದು ಹೇಳುತ್ತಾ, ಇದರಿಂದ ಮಹಾಜನರಿಗೆ ಹೆಚ್ಚಿನ ಪ್ರಯೋಜನ ಲಭಿಸುತ್ತದೆಯೆಂದೂ ಯಾವ ತಪ್ಪು ನಡೆದಿಲ್ಲವೆಂದೂ ಈ ಸಭೆಯಲ್ಲಿ ತಿಳಿಸಿ, ನನಗೆ ಈ ಸಂದರ್ಭದಲ್ಲಿ ಈ ನಾಲ್ಕಾರು ವಿಷಯಗಳನ್ನು ತಿಳಿಸಲು ಅವಕಾಶವನ್ನು ಕೊಟ್ಟ ಅಧ್ಯಕ್ಷರಿಗೂ, ಮಾನ್ಯ ಸದಸ್ಯರಿಗೂ ವಂದನೆಗಳನ್ನರ್ಪಿಸುತ್ತೇನೆ.

**ಬಂಜರುಭೂಮಿಯನ್ನು ವ್ಯವಸಾಯಕ್ಕೆ ಬಳಸಿದರೆ ಆಹಾರದ ಸಮಸ್ಯೆ ಬಗೆಹರಿಯುತ್ತದೆ. ಕೆರೆಗಳ ರಿಪೇರಿ ಮಾಡಿಸಿದರೆ ಆಹಾರದ ಉತ್ಪಾದನೆ ಇಮ್ಮಡಿಸುತ್ತದೆ.**

**7ನೇ ಜುಲೈ 1952**

ಸ್ವಾಮಿ, ಆಹಾರದ ನಿಯಂತ್ರಣ ಹೋಗಬೇಕೆಂದು ಹೇಳುವ ಸಂದರ್ಭದಲ್ಲಿ ಕೆಲವು ವಿಷಯಗಳನ್ನು ಸಭೆಯ ಗಮನಕ್ಕೆ ತರಲಿಚ್ಛಿಸುತ್ತೇನೆ. ಮೈಸೂರು ಸಂಸ್ಥಾನದಲ್ಲಿ ಸುಮಾರು 83 ಲಕ್ಷ ಎಕರೆಗಳಷ್ಟು ತರಿ ಮತ್ತು ಖುಷ್ಕಿ ಜಮೀನು ರೈತರಿಗೆ ಇದೆಯೆಂದು ಅಂಕಿ ಅಂಶಗಳಿಂದ ತಿಳಿದುಕೊಂಡಿದ್ದೇನೆ. ಅದರಲ್ಲಿ ಸುಮಾರು ಹತ್ತು ಲಕ್ಷಕ್ಕೆ ಮೇಲ್ಪಟ್ಟು ಬಂಜರಿದೆ. ಬಂಜರಿರುವುದಕ್ಕೆ ಕಾರಣ, ಕೆಲವು ಬಡಬಗ್ಗರಿಗೆ ಅನುಕೂಲವಿಲ್ಲದೆ ಆ ರೀತಿ ರೇಖೆ ಮಾಡಲು ಅನಾನುಕೂಲವಾಗಿರುವುದು. ಅದಕ್ಕೆ ಸರ್ಕಾರದವರು ಹೆಚ್ಚಾಗಿ ಸಹಾಯ ಒದಗಿಸುವುದರ ಮೂಲಕ ಆ ಹತ್ತು ಸಾವಿರ ಎಕರೆಗಳನ್ನು ಉತ್ತಮ ಸ್ಥಿತಿಗೆ ತರಲು ಅನುಕೂಲ ಕಲ್ಪಿಸಿಕೊಡಬೇಕು ಎಂದು ಈ ಸಂದರ್ಭದಲ್ಲಿ ಸರ್ಕಾರದಲ್ಲಿ ಪ್ರಾರ್ಥಿಸುತ್ತೇನೆ.

ಆಹಾರವನ್ನು ಹೆಚ್ಚಾಗಿ ಬೆಳೆಯಬೇಕೆಂಬ ಯೋಜನೆಯನ್ನು ಸುಮಾರು 3-4 ವರ್ಷಗಳಿಂದ ದೇಶದಲ್ಲಿ ಜಾರಿಗೆ ತಂದಿದ್ದರೂ ಅದಕ್ಕೆ ವೆಚ್ಚ ಮಾಡಿದ ಮೊಬಲಗಿನಿಂದ ಮಹಾಜನರಿಗೆ ಹೆಚ್ಚು ಸಹಾಯವೇನೂ ಆಗಿಲ್ಲ. ಕಾರಣವೇನೆಂದರೆ, ಈ ಯೋಜನೆಯನ್ನು ಬಹಳ ಸಂದರ್ಭಗಳಲ್ಲಿ ಕಾರ್ಯರೂಪಕ್ಕೆ ತಂದಿರುವುದು

ಆಹಾರವನ್ನು ಬೆಳೆಯುವ ಕಾಲ ಮುಗಿದ ಮೇಲೆ ಆಗಿದೆ; ಆದ್ದರಿಂದ ಸಂಸ್ಥಾನದಲ್ಲಿ ಇದಕ್ಕಾಗಿ ಖರ್ಚುಮಾಡಿದ ಹಣದಿಂದ ರೈತರಿಗೆ ಸಹಾಯವಾಗದೆ ಅನ್ಯಾಯವಾಯಿತು ಎಂಬುದನ್ನು ಈ ಸಂದರ್ಭದಲ್ಲಿ ನಾನು ಹೇಳಲಿಷ್ಟಪಡುತ್ತೇನೆ ಸಂಸ್ಥಾನಾಮಳೆ ಇರತಕ್ಕಂಥ ಕೆರೆಗಳನ್ನು ಉತ್ತಮ ಪಡಿಸಿದರೆ ಆಹಾರವನ್ನು ಹೆಚ್ಚಾಗಿ ಬೆಳೆಯುವುದಕ್ಕೆ ಅವಕಾಶವಾಗುತ್ತಿದೆ ಸಂಸ್ಥಾನದಲ್ಲಿ ಸುಮಾರು 12 ಲಕ್ಷಕ್ಕೆ ಮೇಲ್ಪಟ್ಟಿರುವ ರೈತಾಪಿ ಜನರು ಎಕರೆಗೆ ಒಂದು ಪಲ್ಲಾದಂತೆ ಹೆಚ್ಚಾಗಿ ಬೆಳೆದಿದ್ದರೂ ಸರ್ಕಾರದಲ್ಲಿ ಈಗಿರುವ ಆಹಾರದ ಅಭಾವ ತಪ್ಪುತ್ತಿತ್ತು ಎಂದು ಮಾತ್ರ ಈ ಸಂದರ್ಭದಲ್ಲಿ ತಿಳಿಸಲು ಇಷ್ಟಪಡುತ್ತೇನೆ. ಸಂಸ್ಥಾನಾಮಳೆ ಕೆರೆಗಳಿಗಾಗಿ ಮೊಸಲಾಗಿ ಪ್ರತಿಸಾಲಿನ ಬಡ್ಜೆಟ್ ಮೊಬಲಗು ಪೂರ್ತಿ ಖರ್ಚಾಗದೆ ಅನೇಕ ಸಂದರ್ಭಗಳಲ್ಲಿ ಕೆರೆಗಳು ಉತ್ತಮವಾಗದೆ ಕಾಲಹರಣವಾಗಿದೆ. ಇದಕ್ಕೆ ಉದಾಹರಣೆ ಕೊಡಬಹುದು ಮಾಗಡಿ ತಾಲ್ಲೂಕಿನಲ್ಲಿ 24 ಮೇಜರ್ ಕೆರೆಗಳೂ ಮತ್ತು 120 ಮೈನರ್ ಕೆರೆಗಳು ಇವೆ. ಅವುಗಳ ಪೈಕಿ 40 ಮೈನರ್ ಕೆರೆಗಳು ಜೀರ್ಣೋದ್ಧಾರವಾಗಿ ಇನ್ನು 80 ಕೆರೆಗಳು ಹಾಗೆಯೇ ಉಳಿದಿವೆ. ಸಂಕೀಘಟ್ಟ, ತಿಪ್ಪಸಂದ್ರ ಮುಂತಾದ ಕಡೆಯಲ್ಲಿರುವ ಈ ದೊಡ್ಡ ದೊಡ್ಡ ಕೆರೆಗಳು ರಿಪೇರಿಯಾಗದೆ ಹಾಗೆಯೇ ಇವೆ. ಆ ಪ್ರಾಂತದಲ್ಲಿ ಒಂದು ದೊಡ್ಡ ಜಲಾಶಯವನ್ನು ಕಟ್ಟಬೇಕೆಂದು ರೈತಾಪಿ ಜನರು ಹೇಳುತ್ತಿದ್ದರೂ, ಒಂದು ಹೆಚ್ಚಿನ ಸೌಕರ್ಯ ನೀಡಬೇಕೆಂದು ಈ ಸಂದರ್ಭದಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದ್ದರೂ ಸರ್ಕಾರ ಅದನ್ನು ಗಮನಿಸಿಲ್ಲ. ಕೆಲವು ದಿವಸಗಳಿಂದೀಚೆಗೆ ಆಹಾರವನ್ನು ಹೆಚ್ಚಾಗಿ ಬೆಳೆಯಬೇಕೆಂದು ಹೇಳುತ್ತಿದ್ದರೂ, ರೈತರಿಗೆ ಮಾಗಡಿ ತಾಲ್ಲೂಕಿನಲ್ಲಿ ಬೇಕಾದ ಅನುಕೂಲತೆಗಳನ್ನು ಕಲ್ಪಿಸದಿರುವುದು ಅವರ ಮನಸ್ಸಿಗೆ ನೋವನ್ನುಂಟುಮಾಡಿದೆ ಎಂದು ಈ ಸಂದರ್ಭದಲ್ಲಿ ಹೇಳಿದರೆ ತಪ್ಪಾಗಲಾರದು.

## ದವಸ ಧಾನ್ಯಗಳಿಗೆ ಬೆಲೆ ನಿಗದಿಪಡಿಸಿ

ಏಕೆಂದರೆ, ಸುಮಾರು 1942ನೇ ಇಸವಿಯಿಂದ 1952ನೇ ಇಸವಿಯವರೆಗೂ ಆಹಾರವನ್ನು ಬೆಳೆಯತಕ್ಕ ರೈತರಿಗೆ ಒಂದು ದೊಡ್ಡ ಕಿರುಕುಳವಾಗಿದೆ. ಈ ಕಿರುಕುಳವನ್ನು ಈಗ ತಾನೆ ಹೊಸದಾಗಿ ನೇಮಕವಾದ ಸರ್ಕಾರದವರು ಬಹಳ ದೂರ ದೃಷ್ಟಿಯಿಂದ ಆಲೋಚಿಸಿ ನಿರ್ಬಂಧವನ್ನು ತೆಗೆದಿದ್ದರ ಫಲವಾಗಿ ರೈತರೂ, ಪಟ್ಟಣಗಳವರೂ ಸುಖವಾಗಿ ಶಾಂತಿಯಿಂದ ಆಹಾರವನ್ನು ತಂದು ಉಪಯೋಗಿಸಿಕೊಳ್ಳುವುದಕ್ಕೆ ಅನುಕೂಲವಾಗಿದೆ. ಪಟ್ಟಣಗಳಿಗೆ ಬರತಕ್ಕ ಅನೇಕ

ಪ್ರಜೆಗಳಿಗೆ ಮತ್ತು ಕೋರ್ಟು ಕಚೇರಿಗಳಿಗೆ ಬರತಕ್ಕ ಅನೇಕ ಜನರಿಗೆ 5 ಸೇರನ್ನಾದರೂ ಜೊತೆಯಲ್ಲಿ ತರುವುದಕ್ಕೆ ಒಂದು ಅವಕಾಶವನ್ನು ಕಲ್ಪಿಸಿಕೊಡಬೇಕೆಂಬ ವಿಷಯವನ್ನು ಈ ಸಂದರ್ಭದಲ್ಲಿ ಹೇಳಲು ಬಯಸುತ್ತೇನೆ. ಈಗಾಗಲೇ ಮೈಸೂರು ಸಂಸ್ಥಾನದಲ್ಲಿ ಮಳೆ ಇಲ್ಲದೆ ನೀರು ಕಡಿಮೆಯಾಗಿ ಶೇಕಡ 25 ಭಾಗದಷ್ಟು ಬೆಳೆಯತಕ್ಕ ಅವಕಾಶ ರೈತರಿಗೆ ಕಡಿಮೆಯಾಗಿದೆ. ಆದಕಾರಣ ನಮ್ಮ ಮಾನ್ಯ ಸ್ನೇಹಿತರು ಈಗಾಗಲೇ ತಿಳಿಸಿದ ರೀತಿಯಲ್ಲಿ ಡಿಸೆಂಬರ್‌ರವರೆಗೂ ಈಗಿರತಕ್ಕ ರೀತಿಯಲ್ಲೇ ಹತೋಟಿಯನ್ನು ಜಾರಿಯಲ್ಲಿಟ್ಟುಕೊಂಡಿದ್ದು ಸಂಸ್ಥಾನಾ ಮಳೆ ಬಂದ ಮೇಲೆ ಎಲ್ಲ ಕಡೆಗಳಿಂದಲೂ ಲೆಕ್ಕಾಚಾರವನ್ನು ತರಿಸಿಕೊಂಡು ಹೆಚ್ಚು ಹೆಚ್ಚು ಬೆಳೆಯತಕ್ಕ ರೈತರಿಂದ ಕಂದಾಯಕ್ಕೆ ತಕ್ಕಂತೆ ಒಂದು ವಸೂಲಿಕ್ರಮವನ್ನು ಏರ್ಪಡಿಸಿ ದವಸ ವಸೂಲುಮಾಡಿ, ಆ ದವಸವನ್ನು ಪರದೇಶದಿಂದ ತರಿಸತಕ್ಕ ದವಸವನ್ನು ಎರಡನ್ನು ಸೇರಿಸಿ ಸಂಸ್ಥಾನಾಮಳೆ ಎಲ್ಲೆಲ್ಲಿ ಅಭಾವ ಇದೆಯೋ ಅಂಥಾ ಪ್ರಾಂತಗಳಿಗೆ ಒದಗಿಸುವುದರ ಮೂಲಕ ದೇಶದಲ್ಲಿ ಶಾಂತಿಯನ್ನು ಕಾಪಾಡಬೇಕೆಂದು ಈ ಸಂದರ್ಭದಲ್ಲಿ ನಾನು ತಿಳಿಸುತ್ತೇನೆ. ಆಹಾರಕ್ಕೆ ಕೊಡತಕ್ಕ ಬೆಲೆ ತೀರಾ ಕಡಿಮೆ ಏಕೆಂದರೆ ರೈತನಿಗೆ ಇರತಕ್ಕ ಕಷ್ಟ ಬೆಳೆಯುವವರ ಜೊತೆಯಲ್ಲಿರುವವರಿಗೆ ಮಾತ್ರ ಗೊತ್ತಾಗುತ್ತದೆ. 1921 ರಿಂದ 1939ನೇ ಇಸವಿಯವರೆಗೂ ರೈತ ಬಹಳ ಕಷ್ಟದಲ್ಲಿ ಸಿಕ್ಕಿಕೊಂಡಿದ್ದ. ಏಕೆಂದರೆ ಬೆಲೆ ಬಹಳ ಕಡಿಮೆಯಾಗಿತ್ತು; ಯಾವ ಸರ್ಕಾರವೂ ಕೂಡ ರೈತನಿಗೆ ಅನುಕೂಲವನ್ನು ಕಲ್ಪಿಸಿ ರೈತರ ಸಂಖ್ಯೆಯನ್ನು ಜಾಸ್ತಿಮಾಡಲಿಕ್ಕೆ ಅವಕಾಶಮಾಡಲಿಲ್ಲ. ಅಲ್ಲಿಂದೀಚೆಗೆ ಹತೋಟಿ ಪದ್ಧತಿ ಜಾರಿಗೆ ಬಂದಿದ್ದರಿಂದ ದುಡ್ಡು ಬರತಕ್ಕ ಫಸಲನ್ನು ಬೆಳೆಯಲು ಪ್ರಾರಂಭಿಸಿದ್ದಾರೆ. ಆದ್ದರಿಂದ ಈಗ ತಾವುಗಳೆಲ್ಲ ಈ ಸಭೆಯಲ್ಲಿ ಯೋಚನೆ ಮಾಡಿ, ಆಹಾರಕ್ಕೆ ಕನಿಷ್ಠ ಪಕ್ಷ ಬತ್ತಕ್ಕೆ 22 ರೂಪಾಯಿಗಳಂತೆಯೂ ರಾಗಿಗೆ 22 ರೂಪಾಯಿಗಳಂತೆಯೂ ಮುಂದಿನ ಬೆಲೆಯನ್ನು ನಿಷ್ಕರ್ಷೆಮಾಡಿ, ಸಂಸ್ಥಾನದಲ್ಲಿ ಬರತಕ್ಕ ರೆವಿನ್ಯೂ ಕಂದಾಯವನ್ನು ದವಸದ ಮೂಲಕ ವಸೂಲು ಮಾಡುವಂತೆ ವ್ಯವಸ್ಥೆಗೊಳಿಸಿದರೆ ರೈತಾಪಿ ಜನಗಳಿಗೆ ಕಷ್ಟವಾಗುವುದಿಲ್ಲ. ಸರ್ಕಾರದವರಿಗೂ ಕಷ್ಟವಾಗುವುದಿಲ್ಲ. ಲಂಚ ರುಷುವತ್ತುಗಳಿಗೆ ಅವಕಾಶ ತಪ್ಪುತ್ತದೆ. ಹತ್ತು ವರ್ಷಗಳಿಂದ ರೈತಾಪಿ ಜನರು ವಸೂಲಿ ಕ್ರಮದಲ್ಲಿ ಪಟ್ಟ ಕಷ್ಟ ನಷ್ಟಗಳನ್ನು ವಿವರಿಸಬೇಕಾದ ಅವಶ್ಯಕತೆ ಇಲ್ಲ. ಏಕೆಂದರೆ ಈಗ ಮಂತ್ರಿಮಂಡಲದಲ್ಲಿರ ತಕ್ಕ ಮುಖ್ಯ ಮಂತ್ರಿಗಳು ಮತ್ತು ಅವರ ಸಹೋದ್ಯೋಗಿಗಳು ರೈತರು ಆದ್ದರಿಂದ ಅವರಿಗೆ ಚೆನ್ನಾಗಿ ರೈತರ ಕಷ್ಟಸುಖ ಗೊತ್ತಿದೆ. ರೈತರ ಕಷ್ಟ ಸುಖ ಗೊತ್ತಿರುವುದರಿಂದಲೇ ಸಂಸ್ಥಾನದ ಅಧಿಕಾರವನ್ನು ವಹಿಸಿಕೊಂಡವರು ಕ್ಷಣದಲ್ಲೇ

ರೈತರಿಗೆ ಇರತಕ್ಕ ಕಷ್ಟ, ಕಿರುಕುಳವನ್ನು ತಪ್ಪಿಸಿದುದರ ಫಲವಾಗಿ ರೈತರು ಬಹಳ ಸಂತೋಷದಿಂದ ತಮ್ಮ ಕಾರ್ಯಕಲಾಪಗಳನ್ನು ಮಾಡಿಕೊಂಡು ಬಹಳ ವ್ಯವಸ್ಥಿತವಾದ ರೀತಿಯಲ್ಲಿ ಜಮೀನನ್ನು ಉಪಯೋಗ ಮಾಡುತ್ತಾ ಇದ್ದಾರೆ. ಆದರೆ ಇನ್ನೂ ಅನೇಕ ರೈತರಿಗೆ ಜಮೀನು ಇಲ್ಲ. ರೈತರಿಗೆ ಜಮೀನು ಒದಗಿಸುವುದು ಸರ್ಕಾರದವರ ಕರ್ತವ್ಯ. ಎಲ್ಲಿ ಫಾರೆಸ್ಟ್ ನಾಶವಾಗಿ ಮಳೆ ಬೀಳುವುದಿಲ್ಲವೋ ಅಂಥ ಕಡೆ ಇರತಕ್ಕ ಜಮೀನುಗಳನ್ನು ಮತ್ತು ಮಾರ್ಕೋನಹಳ್ಳಿ, ನುಗು ಜಲಾಶಯಗಳು ಇವುಗಳ ಹತ್ತಿರ ಇರತಕ್ಕ ಜಮೀನುಗಳನ್ನು ಬಡರೈತರಿಗೆ ಕೊಟ್ಟು ಸಹಾಯ ಮಾಡಿದರೆ ದೇಶದಲ್ಲಿ ಆಹಾರ ಅಭಾವ ಇಲ್ಲ ಎಂದು ಖಂಡಿತವಾಗಿ ಹೇಳುವುದಕ್ಕೆ ಅವಕಾಶವಾಗುತ್ತದೆ. ಈಗ 60 ಲಕ್ಷದಿಂದ 90 ಲಕ್ಷಕ್ಕೆ ನಮ್ಮ ಪ್ರಜಾ ಸಂಖ್ಯೆ ಏರಿದೆ. ಇದರಲ್ಲಿ ಸುಮಾರು, ಶ್ರೀಮಾನ್ ಶಂಕರಲಿಂಗೇಗೌಡರು ಹೇಳಿದ ಹಾಗೆ ಹೊರಗಡೆಯಿಂದ 8–10 ಲಕ್ಷ ಪ್ರಜೆಗಳು ನಾನಾಕಾರಣದಿಂದ ಪಟ್ಟಣಗಳಿಗೆ ಬಂದು ಇಲ್ಲಿ ಕೇಂದ್ರೀಕೃತವಾಗಿದ್ದಾರೆ. ಆದ್ದರಿಂದ ಅವರಿಗೂ ಕೂಡ ಆಹಾರವನ್ನು ಒದಗಿಸಬೇಕಾದ ಪರಿಸ್ಥಿತಿಯಲ್ಲಿದ್ದೇವೆ ಆದಕಾರಣ ಸರ್ಕಾರದವರು ಇದನ್ನು ಆಲೋಚನೆಮಾಡಿ ಈಗಿರತಕ್ಕ ಹತೋಟಿಯನ್ನು ಇನ್ನೂ ಕೆಲವು ಕಾಲ ಅನುಸರಿಸಿ ಸಂಸ್ಥಾನದಲ್ಲಿ ಎಲ್ಲಾ ಕಡೆ ಆಹಾರ ಉತ್ಪತ್ತಿ ಯಾವ ರೀತಿ ಆಗುತ್ತದೆ ಎಂಬ ಒಂದು ನಿರೀಕ್ಷಣೆಯನ್ನು ಗಮನಿಸಿ ತದನಂತರ ಹತೋಟಿಯನ್ನು ಪೂರ್ತಿಯಾಗಿ ತೆಗೆಯುವುದರ ಮೂಲಕ ಪ್ರಜೆಗಳಿಗೆ, ಅದರಲ್ಲಿಯೂ ರೈತಾಪಿ ಜನಗಳಿಗೆ, ಹೆಚ್ಚು ಸೌಕರ್ಯವನ್ನು ಕಲ್ಪಿಸಿಕೊಡುತ್ತೀರಿ ಎಂದು ನಂಬುತ್ತೇನೆ. ಈ ಸಭೆಯ ಕಾಲವನ್ನು ಹೆಚ್ಚು ತೆಗೆದುಕೊಳ್ಳುವುದಕ್ಕೆ ಅವಕಾಶವಿಲ್ಲದೇ ಇರುವುದರಿಂದ ನಾನು ನನ್ನ ಈ ನಾಲ್ಕಾರು ಮಾತುಗಳನ್ನು ಸರ್ಕಾರದ ಮುಂದಿಟ್ಟು ಇವುಗಳನ್ನು ಆಲೋಚನೆಮಾಡಬೇಕೆಂದು ಹೇಳಿ ಮುಗಿಸುತ್ತೇನೆ.

## ಅರಣ್ಯ ಭೂಮಿ ಅಕ್ರಮ ಒತ್ತುವರಿ ತಪ್ಪಿಸಿ

**1 ಜುಲೈ 1952.**

ಸ್ವಾಮಿ, ನಾನು ಈಗ ನಮ್ಮ ಮಾನ್ಯ ಮಿತ್ರರಾದ ಪುಟ್ಟಸ್ವಾಮಿಯವರು ಮಂಡಿಸಿರತಕ್ಕ ಖೋತಾ ನಿರ್ಣಯದ ವಿಷಯದಲ್ಲಿ ಸಭೆಯ ಹೆಚ್ಚು ಕಾಲವನ್ನು ತೆಗೆದುಕೊಳ್ಳುವುದಿಲ್ಲ. ಏಕೆಂದರೆ ಈಗಾಗಲೇ ಮಾನ್ಯ ಮಿತ್ರರು ವಿವರವನ್ನು ತಿಳಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಅರಣ್ಯ ಸಂಪತ್ತಿನ ವಿಷಯದಲ್ಲಿ ಬಹಳ ಕಾಲದಿಂದಲೂ ಹಿಂದಿನ ಅಸೆಂಬ್ಲಿಗಳಲ್ಲೂ ಸಹ ಹೇಳಿದ್ದೇವೆ. ಫಾರೆಸ್ಟ್ ಜಂಗಲುಗಳಲ್ಲಿಸಾವಿರಾರು ಎಕರೆ ಜಮೀನುಗಳನ್ನು ರೈತರು ಸರ್ಕಾರದವರ ಅಪ್ಪಣೆ ಇಲ್ಲದೆ ಉಳುಮೆಮಾಡತಕ್ಕ ವಿಷಯವನ್ನು ಅನೇಕಸಾರಿ ಸಭೆಯಲ್ಲಿ ತಂದಿದ್ದೇವೆ. ಒಂದು ಎಕರೆಯನ್ನಾದರೂ ಕೂಡ ವಾಪಸು ತೆಗೆದುಕೊಂಡಿಲ್ಲ. ಅರಣ್ಯ ಸಂಪತ್ತು ದಿನೇ ದಿನೇ ಕಡಿಮೆ ಆಗುವುದಕ್ಕೆ ಇದು ಬಲವಾದ ಕಾರಣ ಎನ್ನುವುದನ್ನು ಈ ಸಭೆಯಲ್ಲಿ ನಾನು ಖಂಡಿತವಾಗಿ ಹೇಳಬೇಕಾಗಿದೆ. ಸಂಸ್ಥಾನದಲ್ಲಿ ಈ ಅರಣ್ಯ ಸಂಪತ್ತು ನಾಶವಾಗಿರುವುದರಿಂದಲೇ ಸಂಸ್ಥಾನದ ಅನೇಕ ಕಡೆಗಳಲ್ಲಿ ಕ್ಷಾಮ ಮತ್ತು ಕ್ಷೋಭೆ ಬಂದಿರುವುದು ಎಂದು ಹೇಳಿದರೆ ಏನೂ ತಪ್ಪಾಗುವುದಿಲ್ಲ. ಹಿರಿಯರು ಪೂರ್ವಕಾಲದಿಂದಲೂ ಹಿಡುವಳಿ ಜಮೀನಿನಲ್ಲೂ ಸಹ ಮರಗಳನ್ನು ಹಾಕುವುದರ ಮೂಲಕ ಮಳೆಯ ಒಂದು ಶಕ್ತಿಯನ್ನು ಸೆಳೆಯುತ್ತಾ ಇದ್ದರು. ಹಾಗೆಯೇ ಸರ್ಕಾರದವರಿಗೂ ಕೂಡ ಇಂಥಾ ಫಾರೆಸ್ಟ್ ಜಂಗಲುಗಳ ವಿಚಾರದಲ್ಲಿ ಹೆಚ್ಚಿನ ಅಭಿಮಾನ ಇದ್ದೇ ಇತ್ತು. ಈಗಲೂ ಕೂಡ ಮೈಸೂರು ಸಂಸ್ಥಾನದಲ್ಲಿ ಅರಣ್ಯ ಸಂಪತ್ತನ್ನು ಹೆಚ್ಚಿಸಲು ಬಡ್ಜೆಟ್ಟಿನಲ್ಲಿ ಒದಗಿಸಿರತಕ್ಕ ಮೊಬಲಗು ತೀರಾ ಕಡಮೆ, ಅಲ್ಲದೆ ಈಗಾಗಲೇ ಖರ್ಚು ಮಾಡಿರತಕ್ಕ ಹಣವನ್ನು ಕೂಡ ಇಲಾಖೆಯವರು ಸರಿಯಾಗಿ ಉಪಯೋಗಿಸಿಲ್ಲವೆಂದು ನಾನು ಖಚಿತವಾಗಿ ಹೇಳಬಲ್ಲೆ. ನಮ್ಮ ಮಾಗಡಿ ತಾಲ್ಲೂಕಿನ ವಿಷಯವನ್ನೇ ತೆಗೆದುಕೊಳ್ಳುವುದಾದರೆ ಅಲ್ಲಿ ಕಳೆದ ಎರಡು ವರ್ಷಗಳಿಂದಲೂ ಎಷ್ಟೋ ಹಣವನ್ನು ವಿನಿಯೋಗ ಮಾಡಿದ್ದರೂ ಅಲ್ಲಿನ ಅರಣ್ಯ ಸಂಪತ್ತು ಏನೇನು ಹೆಚ್ಚಿಲ್ಲ. ಆದ್ದರಿಂದ ಸರ್ಕಾರದವರು ಇತ್ತಕಡೆ ತೀವ್ರವಾಗಿ ಗಮನಕೊಟ್ಟು ಅರಣ್ಯ ಸಂಪತ್ತನ್ನು ಹೆಚ್ಚು ಮಾಡುವುದಕ್ಕೆ ಮೊದಲು ಮನಸ್ಸು ಮಾಡಿದರೆ ದೇಶದ ಪೂರ್ಣ ಅಭ್ಯುದಯಕ್ಕೆ ಅವಕಾಶವಾಗುತ್ತದೆ. ಈಗ ಯಾವ ಕಾಡಿನಲ್ಲಿ ನೋಡಲಿ ಅಲ್ಲಿನ ಅರಣ್ಯ ಸಂಪತ್ತು ಕ್ಷೀಣವಾಗುತ್ತಾ ದಿನೇ ದಿನೇ ನಾಶವಾಗುತ್ತಿದೆ. ಈ ನಾಶಕ್ಕೆ ಮೊದಲನೆಯ ಕಾರಣ ಅಲ್ಲೆಲ್ಲಾ ಇದ್ದಲು

ಸುಡುವುದಕ್ಕೂ ಸೌದೆಗೆ ಮರಗಳನ್ನು ಕಡಿಯುವುದಕ್ಕೂ ಅವಕಾಶ ಕೊಟ್ಟಿರುವುದೇ ಆಗಿದೆ. ಸರ್ಕಾರದವರು ಇದನ್ನು ಮನಗಂಡು ಈಗಾಗಲೇ ಮರಗಳನ್ನು ಕಡಿಯುವುದನ್ನು ಕಡಿಮೆ ಮಾಡಿದ್ದಾರೆ; ಮಾಡುತ್ತಲೂ ಇದ್ದಾರೆ. ಆದರೂ ಇದು ಇನ್ನೂ ಯಶಸ್ವಿಯಾದ ರೀತಿಯಲ್ಲಿ ತಡೆಗಟ್ಟಲ್ಪಡಬೇಕಾದರೆ ಈಗ ಮಾಡಿರತಕ್ಕ ಕೂಪ್ ಸಿಸ್ಟಂ ಸರಿಮಾಡದ ಹೊರತು ಗತ್ಯಂತರವಿಲ್ಲ. ಏಕೆಂದರೆ, ಕೂಪುಗಳನ್ನು ತೆಗೆದುಕೊಂಡವರು ತಮ್ಮ ಕೂಪಿಗೆ ಸೇರಿದ ಮರಗಳ ಜೊತೆಗೆ ತೇಗ, ಹೊನ್ನೆ ಮೊದಲಾದ ದೊಡ್ಡ ದೊಡ್ಡ ಬೆಲೆಬಾಳುವ ಮರಗಳನ್ನು ಕಡಿದುಕೊಂಡು ಹೋಗುವುದರಿಂದ ಸರ್ಕಾರದ ವರಮಾನ ಕಡಿಮೆಯಾಗುವುದಕ್ಕೆ ಅವಕಾಶವಾಗಿದೆ. ಆದ್ದರಿಂದ ಸರ್ಕಾರದವರು ಹೆಚ್ಚಿನ ಮೊಬಲಗನ್ನು ವೆಚ್ಚಮಾಡಿ ಈ ಇಲಾಖೆಯ ಏಳಿಗೆಗಾಗಿ ಹೆಚ್ಚಿನ ನಿಗಾ ಕೊಡಬೇಕೆಂದು ಹೇಳುತ್ತೇನೆ. ಸರ್ಕಾರಿ ಫಾರೆಸ್ಟ್ ಇಲಾಖೆಯಲ್ಲಿ ಕೆಲಸಮಾಡುವ ನೌಕರರ ವಿಷಯದಲ್ಲಿ ಈಗ ತಾವು ಅಷ್ಟಾಗಿ ಗಮನ ಕೊಟ್ಟಿಲ್ಲವೆಂದು ಕಾಣುತ್ತದೆ. ಈ ಕಡೆಗೂ ಗಮನ ಕೊಡಬೇಕಾದದ್ದು ಅವಶ್ಯಕವೆಂದು ಹೇಳಿ, ಈ ಸಂದರ್ಭದಲ್ಲಿ ಎರಡು ಮಾತುಗಳನ್ನು ಹೇಳಲು ನನಗೆ ಅವಕಾಶ ಕೊಟ್ಟದ್ದಕ್ಕಾಗಿ ಅಧ್ಯಕ್ಷರನ್ನೂ ಮತ್ತು ಸಭಾಸದಸ್ಯರನ್ನು ವಂದಿಸುತ್ತಾ ನನ್ನ ಭಾಷಣವನ್ನು ಮುಗಿಸುತ್ತೇನೆ.

**6ನೇ ಏಪ್ರಿಲ್ 1953.**

ಅಧ್ಯಕ್ಷರೆ, ಈ ಇನಾಂರದ್ದತಿಯಾತಿ ಬಿಲ್ಲಿನ ವಿಚಾರವಾಗಿ ಮಾತನಾಡುತ್ತಾ ಕೆಲವು ವಿಷಯಗಳನ್ನು ಸರ್ಕಾರದ ಗಮನಕ್ಕೆ ತರಬೇಕೆಂದು ನಾನು ತಮ್ಮ ಮುಂದೆನಿಂತಿದ್ದೇನೆ. ಈ ಬಿಲ್ಲನ್ನು ತಯಾರುಮಾಡಿ ಸರಕಾರದವರು ಇದನ್ನು ಇಂಗ್ಲೀಷ್‌ನಲ್ಲಿ ಮಾತ್ರ ಮುದ್ರಣ ಮಾಡಿದ್ದಾರೆ. ಕನ್ನಡದಲ್ಲಿಯೂ ಪ್ರತಿಗಳನ್ನು ಮುದ್ರಣ ಮಾಡಿಸಿದ್ದರೆ. ಕನ್ನಡ ತಿಳಿದವರು ಓದಿಕೊಂಡು ಸಲಹೆ ಕೊಡುವುದಕ್ಕೆ ಅನುಕೂಲವಾಗುತ್ತಿತ್ತು.....

ಈ ಬಿಲ್ಲಿನ ವಿಷಯ ಮಾತನಾಡಬೇಕಾದರೆ ನನಗೆ ತಿಳಿದಿರುವ ಕೆಲವು ವಿಷಯಗಳನ್ನು ಅನುಸರಿಸಿಕೊಂಡು; ಈ ಸಂದರ್ಭದಲ್ಲಿ ಒಂದೆರಡು ಮಾತು ಹೇಳುವುದಕ್ಕೆ ಇಚ್ಛೆಸುತ್ತೇನೆ.

## ಹೊಸ ಚಿಗುರಿಗೆ ಹಳೆಬೇರು ನೆರವೀಯಲಿ

ಈ ಬಿಲ್ಲನ್ನು ತಂದಿರುವುದಕ್ಕಾಗಿ ಸರ್ಕಾರದವರನ್ನು ಮನಸಾರೆ ವಂದಿಸುತ್ತೇನೆ. ಹಿಂದೆ ಮಾಡಿದ್ದ ಸಮಿತಿಯವರು ಬಹಳ ಕಷ್ಟಪಟ್ಟು ವರದಿ ಮಾಡಿದ ಮೇಲೆ ಈ ಮಸೂದೆಯನ್ನು ನಮ್ಮ ಮುಂದೆ ತಂದಿದ್ದಾರೆ. ಅನೇಕ ಸದಸ್ಯರು ಈ ಬಿಲ್ಲಿನ ವಿಷಯದಲ್ಲಿ ವಿರೋಧವಾಗಿ ಮಾತನಾಡಿದ್ದಾರೆ. ಆದರೆ ಸರ್ಕಾರದವರು ಯಾವ ಬಿಲ್ಲನ್ನು ಮಂಡಿಸಿದರೂ ದೇವರೊಬ್ಬನಿದ್ದಾನೆ ಎಂಬುದನ್ನು ಗಮನದಲ್ಲಿಟ್ಟುಕೊಳ್ಳುವುದು ಒಳ್ಳೆಯದೆಂದು ತಿಳಿದಿದ್ದೇನೆ. ಇದುವರೆಗೆ ದೇವಸ್ಥಾನಗಳಿಗೆ ಮಠಗಳಿಗೆ ದೊಡ್ಡ ದೊಡ್ಡ ಸಂಸ್ಥೆಗಳಿಗೆ ಇನಾಂಗಳನ್ನು ಹಿಂದಿನ ಪ್ರಭುತ್ವಗಳವರು ಕೊಟ್ಟಿದ್ದಾರೆ. ಹಾಗೆ ಕೊಡುವಾಗ, ವಿಶೇಷ ಸನ್ನಿವೇಶಗಳನ್ನು ಗಮನದಲ್ಲಿಟ್ಟುಕೊಂಡು ಕೊಟ್ಟಿದ್ದಾರೆ. ಈಗ ನಾವು ಈ ಬಿಲ್ಲನ್ನು ಕಾರ್ಯರೂಪಕ್ಕೆ ತರುವಾಗ ಹಿಂದಿನ ಸಂಪ್ರದಾಯವನ್ನು ಜ್ಞಾಪಕದಲ್ಲಿಟ್ಟುಕೊಂಡು ಹಿಂದಿನವರ ಉದ್ದೇಶಕ್ಕೂ, ದೇವಸ್ಥಾನ ಮಠಗಳ ಪುರೋಭಿವೃದ್ಧಿಗೂ ಕಳಂಕ ಬರದೇಯಿರುವ ಹಾಗೆ ಮಾಡುವುದು ಅತ್ಯಾವಶ್ಯಕ. ಹೀಗೆ ಮಾಡಿದರೆ ದೇವರೂ ಒಪ್ಪುತ್ತಾನೆಂದು ಸಭೆಯ ಮುಂದೆ ಹೇಳಲು ಸಂತೋಷಿಸುತ್ತೇನೆ ಇನಾಂದಾರರಿಗೆ ಹಣವನ್ನು ಪಾವತಿಮಾಡುವ ವಿಷಯದಲ್ಲಿ ನನ್ನ ಮಾನ್ಯ ಸ್ನೇಹಿತರಾದ ರಾಜಶೇಖರಮೂರ್ತಿಯವರು ಮತ್ತು ರಾಮರಾಯರು ಅಪ್ಪಣೆಕೊಡಿಸಿದ ಹಾಗೆ ಒಟ್ಟಿಗೆ ಕೊಡಬೇಕೆಂದು ಅಭಿಪ್ರಾಯಪಡುತ್ತೇನೆ.

### ಶಾಸನ ಸಭೆಯಲ್ಲಿ ಸದಸ್ಯರು ಕನ್ನಡದಲ್ಲಿಯೇ ಮಾತಾಡಲಿ

ಸಂಪ್ರದಾಯದಂತೆ ಅವರು ಕನ್ನಡದಲ್ಲಿ ಮಾತನಾಡಿದ್ದಿದ್ದರೆ ಚೆನ್ನಾಗಿತ್ತೆಂದು ಇದಕ್ಕೇ ನಾನು ಹೇಳಿದ್ದು. ಇನಾಂದಾರಿ ಹಕ್ಕನ್ನು ಕಳೆದುಕೊಳ್ಳುವ ಜನರಿಗೆ ಮುಂದೆ ಅವರ ಜೀವನಕ್ಕೆ ಒಂದು ಮಾರ್ಗವನ್ನು ಕಲ್ಪಿಸಬೇಕಾಗುತ್ತದೆ ಅದಕ್ಕಾಗಿ ಅವರಿಗೆ ಕೊಡತಕ್ಕದ್ದನ್ನು ಒಂದೇ ಸಾರಿ ಕೊಟ್ಟರೆ ಒಳ್ಳೆಯದು. ಹಾಗಿಲ್ಲದೆ ಬಾಂಡುಗಳನ್ನು ಕೊಡುವುದರಿಂದ ಅವರ ಪುರೋಭಿವೃದ್ಧಿಗೆ ಕಳಂಕ ಬರುತ್ತದೆ. ಇನಾಂದಾರರ ನೇಕರು ಈಗಾಗಲೇ ಬಿಕರಿ ಮಾಡಿಕೊಂಡಿದ್ದಾರೆ. ಅನೇಕರು ತಮ್ಮ ಗ್ರಾಮಕ್ಕೆ ಹೋಗುತ್ತಿಲ್ಲ. ಈ ಒಂದು ತೀರ್ಮಾನಕ್ಕೆ ಬರುವಾಗ ಎಲ್ಲಾ ಸರ್ಕಾರದವರಿಗೂ ಗೊತ್ತಿದೆ. ಇಂಥಾ ಸಂದರ್ಭದಲ್ಲಿ ವಿಷಯಗಳನ್ನು ಕೂಲಂಕುಷವಾಗಿ ಪರ್ಯಾ ಲೋಚನೆ ಮಾಡಬೇಕಾದದ್ದು ನಮ್ಮ ಕರ್ತವ್ಯ.

ತೋಟಿ, ತಳವಾರ, ಬಡಗಿ, ನೀರಗಂಟಿ, ಬಾರಾ, ಬಲೂತಿ ಮುಂತಾದವು ಬಹಳ ಕಾಲದಿಂದ ಇವೆ. ಮುಂದೆ ಈ ಕಾನೂನನ್ನು ಅನುಷ್ಠಾನಕ್ಕೆ ತರುವಾಗ ಆಯಾ ಸಂದರ್ಭಗಳಿಗನುಸಾರವಾಗಿ ಉಳಿಸತಕ್ಕದ್ದಾಗಿವೆ. ಅನಾದಿಕಾಲದಿಂದ ಇವರುಗಳು ಅವರಿಗೆ ಕೊಟ್ಟಿರುವ ಭೂಮಿಯನ್ನು ಅನುಭವಿಸುತ್ತಿದ್ದಾರೆ. ಕಂದಾಯವನ್ನು ಪೂರ್ತಿ ಕೊಡಬೇಕೆಂದು ತೀರ್ಮಾನ ಮಾಡಿದ್ದಾರೆ. ಅವರು ಇದಕ್ಕೆ ಒಪ್ಪಿದ್ದಾರೆ ಹೀಗಿರುವಾಗ ಈ ಇನಾಮುಗಳನ್ನು ಪೂರ್ತಿಯಾಗಿ ತೆಗೆದು ಹಾಕುವುದು ಒಳ್ಳೆಯದಲ್ಲವೆಂದು ಹೇಳಬೇಕಾಗಿದೆ.

## ದೇವರ ಇನಾಮತಿಗಳು ಹಾಗೇ ಇರಲಿ

ದೇವಸ್ಥಾನ ಮಠ ಮಾನ್ಯ ಇತ್ಯಾದಿಗಳಿಗೆ ಐದು ಹತ್ತು ಎಕರೆ ಜಮೀನುಗಳನ್ನು ಇನಾಂತಿ ಹಾಕಿಕೊಟ್ಟಿರತಕ್ಕ ವಿಚಾರದಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ. ಈ ಇನಾಂತಿಯುನ್ನು ಅವುಗಳಿಗೆ ಹಾಕಿಕೊಟ್ಟಿರತಕ್ಕ ಕಾರಣವೇನೆಂದರೆ, ಆ ದೇವಸ್ಥಾನಗಳಲ್ಲಿರುವ ದೇವರ ಪೂಜೆ ಮಾಡತಕ್ಕ ಅರ್ಚಕರ ಜೀವನೋಪಾಯಕ್ಕೂ ಮತ್ತು ದೇವರ ಪೂಜಾದಿ ಕಾರ್ಯಗಳನ್ನು ನಡೆಸುವುದಕ್ಕೂ ಮತ್ತು ಆ ದೇವಸ್ಥಾನಗಳಿಗೆ ದೇವರ ಸೇವೆಗಾಗಿ ಬರತಕ್ಕ ಭಕ್ತಾದಿಗಳ ಅನುಕೂಲಕ್ಕೆ ಹಾಕಿಕೊಡಲಾಗಿದೆ. ಈ ಇನಾಂ ಜಮೀನುಗಳಿಂದ ಬರತಕ್ಕ ಆದಾಯದಲ್ಲಿ ಈಗ ನಾನುಹೇಳಿರತಕ್ಕ ಕೆಲಸಗಳೆಲ್ಲಾ ನಡೆಯಬೇಕಾಗಿರುವುದರಿಂದ ಇವು ಅವುಗಳಿಗೆ ಅವಶ್ಯಕವಾಗಬೇಕೆಬೇಕಾಗಿವೆ. ಹೀಗಿರುವಾಗ ನಾವು ಈ ದಿವಸ ಅಂಥ ಇನಾಂ ಭೂಮಿಗಳನ್ನೆಲ್ಲಾ ಸರ್ಕಾರಕ್ಕೆ ತೆಗೆದುಕೊಂಡು ಬಿಟ್ಟರೆ, ಆ ದೇವಾಲಯಗಳಲ್ಲಿ ನಡೆಯಬೇಕಾಗಿರತಕ್ಕ ದೇವರ ಪೂಜೆ ಮತ್ತು ಅಲ್ಲಿಗೆ ಸೇವೆಗಾಗಿ ಬರುತ್ತಿದ್ದ ಜನರಿಗೆ ದೊರೆಯುತ್ತಿದ್ದ ಅನುಕೂಲ ತಪ್ಪಿಹೋಗುತ್ತವೆ. ಯಾವ ದೇವರ ದಯೆಯಿಂದ ಈ ದಿವಸ ಮಳೆ ಬೆಳೆಗಳು ಆಗುತ್ತಿವೆಯೋ, ಯಾವ ಒಂದು ದೇವರ ಅನುಗ್ರಹದಿಂದಲೇ ಈ ದಿವಸ ಈ ಸರ್ಕಾರ ಸ್ಥಾಪಿತವಾಗಿದೆಯೋ, ಯಾವ ದೇವರ ಅನುಗ್ರಹದಿಂದಲೇ ಈ ದಿವಸ ಇಂಥ ಆಡಳಿತಗಳೆಲ್ಲಾ ಒಂದು ಸುವ್ಯವಸ್ಥೆಯಿಂದ ನಡೆಯಲು ಅವಕಾಶವಾಗಿದೆಯೋ ಇಂಥ ದೇವರ ಪೂಜೆಯ ವಿಚಾರಕ್ಕೆ ಸಂಬಂಧಿಸಿದ ಒಂದು ಕಾನೂನನ್ನು ಮಾಡುವಾಗ ಸರ್ಕಾರ ಬಹಳ ದೂರದೃಷ್ಟಿಯಿಟ್ಟುಕೊಂಡು ಕಾನೂನು ಮಾಡುವುದು ಅವಶ್ಯಕವೆಂದು ಈ ಸಂದರ್ಭದಲ್ಲಿ ನಾನು ಈ ಒಂದು ವಿಷಯವನ್ನು ಹೇಳಲಿಚ್ಛಿಸುತ್ತೇನೆ.

ಇನ್ನು ಅನೇಕ ಗ್ರಾಮಗಳಲ್ಲಿ ಜೋಡಿದಾದರೂ ಮತ್ತು ಇನಾಂದಾರರೂ ಅನೇಕರು ದೊಡ್ಡ ದೊಡ್ಡ ಕೆರೆಗಳನ್ನು ರಸ್ತೆ ಬಾವಿ ಇತ್ಯಾದಿ ಅನೇಕ ಅನುಕೂಲಗಳನ್ನು ರೈತರಿಗೆ ಕಲ್ಪಿಸಿಕೊಟ್ಟಿದ್ದಾರೆ. ನಮ್ಮ ಮಾಗಡಿ ತಾಲ್ಲೂಕಿನಲ್ಲೇ ಅನೇಕ ಇನಾಂಗ್ರಾಮಗಳಿವೆ. ನಾನು ಖುದ್ದಾಗಿ ನೋಡಿದ್ದೇನೆ. ಆ ಗ್ರಾಮಗಳಲ್ಲಿ ಹಣ ಖರ್ಚುಮಾಡಿ ಅನೇಕ ಅನುಕೂಲಗಳನ್ನು ರೈತರಿಗೆ ಕಲ್ಪಿಸಿಕೊಟ್ಟಿದ್ದಾರೆ. ಇದೇ ವಿಚಾರವನ್ನು ಶ್ರೀಮಾನ್ ವಿ. ವೆಂಕಟಪ್ಪನವರೂ ಹೇಳಿದ್ದಾರೆ. ಆದರೆ ಇನ್ನು ಕೆಲವು ಇನಾಂಗ್ರಾಮಗಳಲ್ಲಿ ಇಂಥಾ ಅನುಕೂಲಗಳನ್ನೇನೂ ಕಲ್ಪಿಸಿರುವುದಿಲ್ಲ. ಆದುದರಿಂದ ಈ ಜೋಡಿ ಮತ್ತು ಇನಾಂದಾರರುಗಳಿಗೆ ಪರಿಹಾರ ನೀಡತಕ್ಕ ಸಂದರ್ಭದಲ್ಲಿ ಅವರು ರೈತರಿಗೆ ಏನೇನು ಅನುಕೂಲಗಳನ್ನು ಯಾರು ಯಾರು ಕಲ್ಪಿಸಿಕೊಟ್ಟಿರುತ್ತಾರೆಂಬುದನ್ನು ಪರಿಶೀಲನೆ ಮಾಡಿ ಅನುಕೂಲ ಕಲ್ಪಿಸಿಕೊಟ್ಟಿರುವಂಥ ಜೋಡಿದಾರರಿಗೂ ಮತ್ತು ಇನಾಂದಾರರಿಗೂ ಕಾಂಪನ್‌ಸೇಷನ್ ಕೊಡತಕ್ಕದ್ದು ಅವಶ್ಯಕವೆಂದು ನಾನು ಹೇಳಬಯಸುತ್ತೇನೆ. ಕೆಲವು ಜೋಡೀದಾರರು ತಮ್ಮ ಜೋಡೀ ಗ್ರಾಮಗಳನ್ನು ಮಾರಾಟ ಮಾಡಿಕೊಂಡಿರುತ್ತಾರೆ. ಅವರಲ್ಲದೆ ಯಾರು ಕೆಲವರು ಮೊದಲಿನಿಂದಲೂ ಏನೋ ಜಮೀನುಗಳನ್ನು 5–10 ಎಕರೆಗಳನ್ನು ಅನುಭವಿಸಿಕೊಂಡಿರುತ್ತಿದ್ದಾರೋ ಅಂಥಾ ಜಮೀನುಗಳನ್ನು ಅವರಿಗೇ ಬಿಟ್ಟುಕೊಡತಕ್ಕದ್ದು ಯುಕ್ತವೆಂದು ನಾನು ಈ ಸಂದರ್ಭದಲ್ಲಿ ಹೇಳಬೇಕಾಗುತ್ತವೆ.

ಇನ್ನು ನಮ್ಮ ಸಂಸ್ಥಾನದಲ್ಲಿ ಅನೇಕ ದೊಡ್ಡ ದೊಡ್ಡ ಇನಾಂದಾರರುಗಳೂ ಇದ್ದಾರೆ. ಇವರು ಅನೇಕ ರೀತಿಯಲ್ಲಿ ದೇಶಕ್ಕೆ ಸೇವೆ ಸಲ್ಲಿಸಿರುತ್ತಾರೆಂದು ಈಗಾಗಲೆ ಅನೇಕರು ಅಪ್ಪಣೆ ಕೊಡಿಸಿದ್ದಾರೆ. ಇವರ ವಿಚಾರದಲ್ಲಿ ಸರ್ಕಾರದವರೂ ದೂರದೃಷ್ಟಿಯಿಟ್ಟುಕೊಂಡು, ಅವರ ಹಕ್ಕುಬಾಧ್ಯತೆಗಳನ್ನು ಕಿತ್ತುಕೊಳ್ಳುವಾಗ ಯಾರಿಗೂ ಅನಾನುಕೂಲವಾಗದ ರೀತಿಯಲ್ಲಿ ಕಾರ್ಯಗಳನ್ನು ಮಾಡಬೇಕಾಗಿದೆ. ಉದಾಹರಣೆಗೆ ಹೇಳುವುದಾದರೆ ನಮ್ಮ ರಾಜಪ್ರಮುಖರಿಗೂ ಕೂಡ ಅವರಿಗೆ ಇಷ್ಟೇ ಆಸ್ತಿ ಇರಬೇಕು ಅವರಿಗೆ ವರ್ಷಕ್ಕೆ ಇಷ್ಟೇ ಮೊಬಲಗನ್ನು ಕೊಡಬೇಕು ಎಂಬುದಾಗಿ ತೀರ್ಮಾನ ಮಾಡಿದ್ದಾರೆ. ಇದೇ ರೀತಿ ಈ ಇನಾಂದಾರಿಗೂ ಕೂಡ ತಾವು ಈ ದಿವಸ ಅವರಿಂದ ಒಂದು ಹಕ್ಕನ್ನು ಸರ್ಕಾರಕ್ಕೆ ತೆಗೆದುಕೊಳ್ಳುವಾಗ ತಾವು ಅವರಿಗೆ ಏನು ಒಂದು ಅನುಕೂಲ ಪ್ರತ್ಯುಪಕಾರವಾಗಿ ತೋರಿಸುತ್ತೀರೆಂಬುದನ್ನು ನಿರ್ಧಾರಮಾಡುವುದು ಒಳ್ಳೆಯದು. ತಾವು ಹೀಗೆ ಮಾಡುವುದರಿಂದ ಯಾರೊಬ್ಬರಿಗೂ ಅನುಕೂಲವಾಗುವುದಿಲ್ಲ. ಈ ದಿವಸ ಅನೇಕ

ಜೋಡಿದಾರರು "ಈ ಇನಾಂಯಾತಿ ಬಿಲ್ಲನ್ನು ಯಾವಾಗ ತರುತ್ತೀರಿ, ತಾವು ಈ ಬಿಲ್ಲನ್ನು ಎಷ್ಟು ಜಾಗ್ರತೆಯಾಗಿ ತಂದರೆ ನಮಗೆ ಅಷ್ಟು ಒಳ್ಳೆಯದಾಗುತ್ತದೆ. ಎಂದು ಕೇಳುತ್ತಿದ್ದಾರೆ. ಈ ಮಸೂದೆಯನ್ನು ತಾವು ತರತಕ್ಕ ವಿಷಯದಲ್ಲಿ ಅವರೂ ಕೂಡ ಬಹಳ ಸಂತೋಷ ಭರಿತರಾಗಿದ್ದಾರೆ. ಆದುದರಿಂದ ತಾವು ಈಗ ಈ ಬಿಲ್ಲನ್ನು ಸೆಲೆಕ್ಟ್ ಸಮಿತಿಯ ಮುಂದೆ ಕಳುಹಿಸತಕ್ಕವರಾಗಿರುವುದರಿಂದ, ಅಲ್ಲಿಗೆ ಈ ಬಿಲ್ಲು ಹೋದಾಗ ಅವರು ಇದನ್ನು ಬಹಳ ಗಮನಾರ್ಹವಾದ ರೀತಿಯಲ್ಲಿ ತಿದ್ದುಪಡಿಮಾಡಿ ಇದು ಪ್ರತಿಯೊಬ್ಬರಿಗೂ ಆಕರ್ಷಣೀಯವಾಗಿರತಕ್ಕ ರೀತಿಯಲ್ಲಿ ಪುನಃ ಈ ಸಭೆಯ ಮುಂದೆ ಬರುವಂತೆ ಮಾಡಬೇಕೆಂದು ಈ ಸಂದರ್ಭದಲ್ಲಿ ನಾನು ತಮ್ಮನ್ನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಜನರಿಗೆ ಉಪಯುಕ್ತ ಕೆಲಸಗಳನ್ನು ಮಾಡಬೇಕೆಂಬ ಧ್ಯೇಯುವೇ ಈ ನಮ್ಮ ಕಾಂಗ್ರೆಸ್ ಸರ್ಕಾರದ ಧ್ಯೇಯವಾಗಿರುವುದರಿಂದ, ತಾವು ಯಾರೊಬ್ಬರಿಗೂ ತೊಂದರೆಯಾಗದ ರೀತಿಯಲ್ಲಿ ಈ ಕಾನೂನು ಇರುವ ಹಾಗೆ ಮಾಡಬೇಕಾಗಿದೆ. ಏನಪ್ಪಾ ಈ ಕಾಂಗ್ರೆಸ್ಸಿನವರು ಬಂದು ನಮ್ಮ ಹಕ್ಕುಗಳನ್ನೆಲ್ಲಾ ಕಿತ್ತುಕೊಂಡರು, ಎಂಬುದಾಗಿ ಯಾರೊಬ್ಬರೂ ದೂಷಣೆ ಮಾಡಲು ಅವಕಾಶವಿಲ್ಲದ ರೀತಿಯಲ್ಲಿ ತಾವು ಇದನ್ನು ಮಾಡಬೇಕೆಂದು ಸಲಹೆ ನೀಡುತ್ತೇನೆ. ತಾವು ಹೀಗೆ ಮಾಡುವಾಗ ಯಾರು ಯಾರಿಗೆ ಏನೇನು ಹಕ್ಕುಗಳನ್ನು ಕೊಡಬೇಕು, ಯಾರು ಯಾರಿಗೆ ಏನೇನು ಪ್ರತಿಫಲವನ್ನು ನೀಡಬೇಕು, ಯಾವ ಯಾವ ಇನಾಂದಾರರು ಮತ್ತು ಜೋಡೀದಾರರು ಉಪಯುಕ್ತ ಕೆಲಸಗಳನ್ನು ಮಾಡಿದ್ದಾರೆ, ಸಂಘ ಅಥವಾ ಸಂಸ್ಥೆ ಯಾವ ಮಠಮಾನ್ಯಗಳು ಸರಿಯಾಗಿ ನ್ಯಾಯಬದ್ಧವಾಗಿ ಏನೇನು ಕೆಲಸಕಾರ್ಯಗಳನ್ನು ಮಾಡಬೇಕಾಗಿರುತ್ತದೆಯೇ ಅವುಗಳನ್ನು ಮಾಡುತ್ತಿವೆಯೇ ಅಥವಾ ಇಲ್ಲವೇ ಎಂಬ ಪ್ರತಿಯೊಂದು ಅಂಶಗಳನ್ನು ನಾವು ಗಮನದಲ್ಲಿಟ್ಟುಕೊಂಡು, ಇವುಗಳನ್ನೆಲ್ಲಾ ಚೆನ್ನಾಗಿ ಮತ್ತೊಮ್ಮೆ ಪರಿಶೀಲನೆ ಮಾಡಿ ಯಾರು ಯಾರಿಗೆ ಏನೇನು ಬಿಡಬೇಕೋ ಅವುಗಳನ್ನೆಲ್ಲಾ ಬಿಟ್ಟುಬಿಡಲು ಅವಕಾಶವಿರುವಂತೆ ತಾವು ಈ ಮಸೂದೆಯನ್ನು ತಯಾರಿಸಬೇಕಾಗಿರುತ್ತದೆಂದು ನಾನು ಈ ಸಂದರ್ಭದಲ್ಲಿ ತಮಗೆ ಸೂಚನೆ ಕೊಡುತ್ತೇನೆ. ನಮ್ಮ ಮೈಸೂರು ಸಂಸ್ಥಾನದಲ್ಲಿ ಅನೇಕ ವರ್ಷಗಳಿಂದ ಈ ಮಠ ಮಾನ್ಯಗಳು ನಡೆದುಕೊಂಡು ಬರುತ್ತಿವೆ. ಪ್ರತಿಯೊಂದು ವಿಚಾರದಲ್ಲೂ ಈ ಸಂಸ್ಥಾನ ಮಾದರಿ ಸಂಸ್ಥಾನವೆಂಬ ಹೆಸರನ್ನು ಪಡೆದುಕೊಂಡು ಬಂದಿದೆ. ನಮ್ಮ ಸಂಸ್ಥಾನಕ್ಕೆ ಈ ಮಾದರಿ ಎಂಬ ಹೆಸರು ಇನ್ನು ಮುಂದೆಯೂ ಮುಂದುವರಿದುಕೊಂಡು ಬರುವಂತೆ ತಾವು ಈ

ಬಿಲ್ಲನ್ನು ತಯಾರಿಸಬೇಕೆಂದು ತಮ್ಮಲ್ಲಿ ನಾನು ಈ ಸಂದರ್ಭದಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಇಲ್ಲಿಯ ತನಕ ಈ ಜೋಡಿ ಮತ್ತು ಇನಾಂದಾರಗಳ ಬಗ್ಗೆ ಮತ್ತು ಗುರುಹಿರಿಯರು ಈ ಹಿಂದಿನಿಂದಲೂ ನಡೆಸಿಕೊಂಡು ಬಂದಿರುವಂಥಾ ಮಠ ಮಾನ್ಯ ಮತ್ತು ಧರ್ಮ ಸಂಸ್ಥೆಗಳ ಬಗ್ಗೆ ಅವರ ಮನೋಸಂಕಲ್ಪಕ್ಕೆ ವಿರೋಧವಾಗದ ರೀತಿಯಲ್ಲಿ ಮತ್ತು ಅವರ ಮನಸ್ಸಿಗೊಂದು ನೋವಾಗದ ರೀತಿಯಲ್ಲಿ ಈ ಮಸೂದೆಯನ್ನು ತಯಾರಿಸಬೇಕೆಂದು ಹೇಳಿ ನನ್ನ ಅಭಿಪ್ರಾಯಗಳನ್ನು ಸಭೆಯಲ್ಲಿ ಸೂಚಿಸುವುದಕ್ಕೆ ಒಂದು ಅವಕಾಶವನ್ನು ಕಲ್ಪಿಸಿಕೊಟ್ಟ ಮಾನ್ಯ ಸಭಾಧ್ಯಕ್ಷರಿಗೂ, ಸರ್ಕಾರದ ಹಾಗೂ ಈ ಮಾನ್ಯ ಸಭೆಯ ಸದಸ್ಯರಿಗೂ ನನ್ನ ವಂದನೆಗಳನ್ನರ್ಪಿಸಿ ನಾನು ನನ್ನ ಭಾಷಣವನ್ನು ಮುಗಿಸುತ್ತೇನೆ.

## ನಮ್ಮ ಕ್ಷೇತ್ರಕ್ಕೆ ವಿದ್ಯುತ್ ಕೊಡಿ.

**28ನೇ ಮಾರ್ಚ್ 1953.**

ಸ್ವಾಮಿ, ಮೈಸೂರು ಸಂಸ್ಥಾನದಲ್ಲಿ ವಿದ್ಯುಚ್ಛಕ್ತಿಯನ್ನು ಬಹಳ ಕಡೆ ಒದಗಿಸಿರೋಣವಾಗಿದೆ. ಆದರೆ ಮಾಗಡಿ ತಾಲ್ಲೂಕಿನಲ್ಲಿ ಮಾಗಡಿ ಟೌನ್‌ಬಿಟ್ಟು ಇನ್ನು ಆರು ಹೋಬಳಿಗಳಲ್ಲಿ ಈ ಸೌಲಭ್ಯ ಒದಗಿಸಿಲ್ಲ. ಅನೇಕ ಸಾರಿ ಈ ಪ್ರಶ್ನೆ ಬಂದು ಅದಕ್ಕೆ ಅಂದಾಜು ಕೂಡ ಮಂಜೂರಾಗಿ ಇನ್ನೂ ಕಾರ್ಯರೂಪಕ್ಕೆ ಬಂದಿಲ್ಲ. ಹರ್ತಿ; ಗುಡೇಮಾರನಹಳ್ಳಿ, ಸೋಲೂರು ಮುಂತಾದ ಹಳ್ಳಿಗಳಿಂದ ಅನೇಕ ಅರ್ಜಿಗಳು ವಿದ್ಯುಚ್ಛಕ್ತಿಯ ಸೌಲಭ್ಯವನ್ನು ಕೊಡಬೇಕೆಂದು ಬಂದಿವೆ. ಇನ್ನೂ ಒದಗಿಸಿಲ್ಲ. 1940ನೆಯ ಇಸವಿಯಿಂದ ಸುಮಾರು ಹನ್ನೆರಡು ವರ್ಷಗಳಿಂದಲೂ ಈ ಹೋಬಳಿಗಳಿಗೆ ವಿದ್ಯಚ್ಛಕ್ತಿಯನ್ನು ಕೊಡಬೇಕೆಂಬ ಬೇಡಿಕೆಗಳನ್ನು ಸರ್ಕಾರದ ಮುಂದೆ ಇಡುತ್ತಲೇ ಇದ್ದಾರೆ. ಸ್ವಾಮಿ, ಮೈಸೂರು ಸಂಸ್ಥಾನದಲ್ಲಿ ಈ ವಿದ್ಯುಚ್ಛಕ್ತಿಯ ಯೋಜನೆ ಪಟ್ಟಣಗಳ ಅಕ್ಕಪಕ್ಕದಲ್ಲಿ ಹೆಚ್ಚಾಗುತ್ತಿದೆಯೆಂದು ಈ ಸಂದರ್ಭದಲ್ಲಿ ಹೇಳಬೇಕಾಗಿದೆ. ಪಟ್ಟಣಗಳಿಗೆ ದೂರವಾಗಿರುವ ಗ್ರಾಮಾಂತರಗಳಲ್ಲಿ ವಾಸಮಾಡುವ ಜನರಿಗೆ ಈ ಸಹಾಯವನ್ನೊದಗಿಸುವುದು ನಮ್ಮ ಕರ್ತವ್ಯ ಗ್ರಾಮಾಂತರದ ಜನರು ಹೆಚ್ಚು ಬೆಳೆ ಬೆಳೆದರೆ ಆಹಾರ ಸಮಸ್ಯೆ ಕಡಿಮೆಯಾಗುವುದೆಂಬುದನ್ನು ಎಲ್ಲರೂ ಮನಗಂಡಿದ್ದಾರೆ. ಆದುದರಿಂದ ಯಾವ ಯಾವ ಸಂದರ್ಭದಲ್ಲಿ ಯಾರಿಗೆ ಸಹಾಯವಾಗಬೇಕೋ ಅದನ್ನು ತಿಳಿದು ಈ ಯೋಜನೆಯನ್ನು ಕಾರ್ಯಗತ

ಮಾಡಬೇಕು. ಸ್ವಾಮಿ, ನಾನು ಇನ್ನು ಹೆಚ್ಚು ಕಾಲವನ್ನು ತೆಗೆದುಕೊಳ್ಳುವುದಿಲ್ಲ. ಮಾಗಡಿ ತಾಲ್ಲೂಕು ಹರ್ತಿ, ಸೋಲೂರು, ಗುಡೇಮಾರನಹಳ್ಳಿ, ತಿಪ್ಪಸಂದ್ರ ಈ ಗ್ರಾಮಗಳಿಗೆ ವಿದ್ಯುತ್ ಕೊಡಲು ಯೋಜನೆ ಸಿದ್ಧವಾಗಿದೆ; ಅವರಿಗೆ ಒದಗಿಸಬೇಕು. ನಾಲ್ಕೈದು ತಿಂಗಳ ಹಿಂದೆ ನಾನು ಕೇಳಿದಾಗ ಸಾಮಾನುಗಳು ಬಂದಿಲ್ಲವೆಂದು ಆ ಇಲಾಖೆಯವರು ಹೇಳಿದರು. ಈಗಲಾದರೂ ಸಿದ್ಧವಾಗಿರುವ ಯೋಜನೆಯನ್ನು ಕಾರ್ಯರೂಪಕ್ಕೆ ತಂದು ಆ ಗ್ರಾಮಗಳ ಜನರಿಗೆ ಹೆಚ್ಚು ಸೌಲಭ್ಯವನ್ನು ಕೊಡಬೇಕೆಂದು ಹೇಳಿ ಸರ್ಕಾರದವರನ್ನು ಪ್ರಾರ್ಥಿಸುತ್ತೇನೆ.

## ಮಾಗಡಿ ತಾಲ್ಲೂಕಿಗೆ ಆಗಬೇಕಾದ ನೀರಾವರಿ

**28ನೇ ಮಾರ್ಚ್ 1953.**

ಅಧ್ಯಕ್ಷರೇ, ಮೈಸೂರು ಸಂಸ್ಥಾನದಲ್ಲಿ ನೀರಾವರಿ ಕಾಮಗಾರಿಗಳಿಗಾಗಿ ಪಬ್ಲಿಕ್ ವರ್ಕ್ಸ್ ಇಲಾಖೆಯಲ್ಲಿ ಎರಡೆರಡು ತಾಲ್ಲೂಕಿಗೆ ಒಬ್ಬೊಬ್ಬ ಅಸಿಸ್ಟೆಂಟ್ ಇಂಜಿನಿಯರನ್ನು ಇಡುವುದರ ಮೂಲಕ ನೀರಾವರಿಗಾಗಿ ಬಹಳ ದಿವಸಗಳಿಂದ ಇದ್ದ ತೊಂದರೆಯನ್ನು ತಪ್ಪಿಸಿ ತುಂಬ ಸೌಕರ್ಯವನ್ನು ಮಾಡಿಕೊಡುತ್ತಾ ಬಂದಿರುವುದು ತುಂಬ ಶ್ಲಾಘನೀಯವಾಗಿದೆ. ಈ ಸಂದರ್ಭದಲ್ಲಿ ತಿಪ್ಪಗೊಂಡನಹಳ್ಳಿಯಿಂದ ರಾಮನಗರದವರೆಗೂ ಹೋಗುವ Waste water ಗೆ ತುಪ್ಪನಹಳ್ಳಿ ಬಳಿ ಒಂದು ಅಣೆಕಟ್ಟು ಹಾಕಿ ಅನುಕೂಲ ಮಾಡಿಕೊಡಬೇಕೆಂದು ಆ ಪ್ರಾಂತ್ಯದ ಜನರ ಬೇಡಿಕೆ ಸರ್ಕಾರದವರ ಮುಂದಿದೆ. ಈ ಬಗ್ಗೆ ಎಸ್ಟಿಮೇಟ್ ತಯಾರಾಗಿ ಸರ್ಕಾರದ ಮಂಜೂರಾತಿಗೆ ಬಂದು ಸರ್ಕಾರದಲ್ಲಿ ಸಾವಧಾನವಾಗಿದೆ. ಈ ಭಾಗದಲ್ಲಿನ ಜನರಿಗೆ ಸಧ್ಯಕ್ಕೆ ಖುಷ್ಕಿಯಿಂದಲೇ ಜೀವನ ಮಾಡಬೇಕಾದ ಗತಿಯಿದ್ದು ಬಹಳ ಕಷ್ಟದೆಶೆಯಲ್ಲಿದ್ದಾರೆ. ಆದ್ದರಿಂದ ಈ ಕಷ್ಟ ನಿವಾರಣೆಯ ಬಗ್ಗೆ ಸರ್ಕಾರದವರು ಕಾರ್ಯಕ್ರಮ ಕೈಕೊಳ್ಳುವುದಲ್ಲದೆ, ಮಾಗಡಿ ತಾಲ್ಲೂಕು ಏಳಿಗೆಹಳ್ಳಿಯ ಹತ್ತಿರ ಒಂದು ಅಣೆಕಟ್ಟು ಹಾಕುವುದರಿಂದ ಮಾಡಬಾಳ ಪೂರ್ತ ಇರುವ ಸುಮಾರು 20–30 ಗ್ರಾಮಗಳ ಬರೀ ಖುಷ್ಕಿ ಜಮೀನುಗಳನ್ನಿಟ್ಟುಕೊಂಡು ಕಷ್ಟ ಜೀವನ ನಡೆಸುತ್ತಿರುವವರಿಗೆ ಅನುಕೂಲಮಾಡಿ ಕೊಟ್ಟಂತಾಗುತ್ತದೆಂದು ಹೇಳುತ್ತೇನೆ.

ಮೊದಲಿನಿಂದಲೂ ತಾಲ್ಲೂಕ್ ಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ಒಂದೊಂದು ಕಮಿಟಿಯಿದ್ದು ಕೆರೆಗಳ ವ್ಯವಸ್ಥೆ ಬಗ್ಗೆ ಏರ್ಪಾಡಿತ್ತು. ತಾಲ್ಲೂಕಿನಲ್ಲಿ ಅಮಲ್ದಾರರ ಅಧ್ಯಕ್ಷತೆಯಲ್ಲಿ, ಡಿಸ್ಟ್ರಿಕ್ಟಿನಲ್ಲಿ ಡೆಪ್ಯುಟಿ ಕಮಿಷನರ ಅಧ್ಯಕ್ಷತೆಯಲ್ಲಿ

ಈ ಕಮಿಟಿಗಳು ಆಗಾಗ್ಗೆ ಸಭೆ ಸೇರಿ ಸರ್ಕಾರಕ್ಕೆ ವರದಿ ಕಳುಹಿಸಿಕೊಟ್ಟು ತನ್ಮೂಲಕ ಸಣ್ಣ ಕೆಲಸವಾಗಲಿ, ದೊಡ್ಡ ಕೆಲಸವಾಗಲಿ ಬೇಗ ಬೇಗ ಮಾಡಿಸಿಕೊಟ್ಟು ನೀರಾವರಿ ಅನುಕೂಲಮಾಡಿಕೊಡುತ್ತಿದ್ದರು. ಈಗ ಒಂದು ತೂಬು ಹೋದರೂ ಅದನ್ನು ಸರಿಮಾಡಿಸುವುದಕ್ಕೆ ನಿಧಾನವಾಗಿ ಹಳ್ಳಿಯಜನರಿಗೆ ಫಸಲು ಸಿಕ್ಕುವುದೇ ಕಷ್ಟವಾಗಿದೆ. ಆದ್ದರಿಂದ ಸರ್ಕಾರದವರು ನೀರಾವರಿ ಯೋಜನೆಯ ಸಂದರ್ಭದಲ್ಲಿ ಮಾನ್ಯ ಸಿದ್ಧಪ್ಪನವರು ಹೇಳಿದ ಹಾಗೆ ಒಂದು ವ್ಯವಸ್ಥಿತವಾದ ಕಮಿಟಿ ಮಾಡಿ ನೀರಾವರಿ ಸೌಕರ್ಯಗಳನ್ನು ಬೇಗ ಬೇಗ ಮಾಸಿಕೊಟ್ಟರೆ, ಸರ್ಕಾರದವರು ಈಗ 8–10 ವರ್ಷಗಳಿಂದಲೂ ಆಹಾರ ಧಾನ್ಯಗಳಿಗಾಗಿ ಖರ್ಚುಮಾಡುತ್ತಿರುವ ಒಂದು ಕೋಟಿ ರೂಪಾಯಿಗಳು ಉಳಿದು ದೇಶದಲ್ಲಿ ಸುಭಿಕ್ಷವುಂಟಾಗಿ ಹತೋಟಿಯು ತೊಂದರೆಯಿಂದ ಜನರನ್ನು ಪಾರುಗೊಳಿಸಲಿಕ್ಕೆ ಸಾಧ್ಯವಾಗುತ್ತದೆ. ದೇಶದಲ್ಲಿ ಬಹಳ ಪ್ರಾಮುಖ್ಯವಾದ ವ್ಯವಸ್ಥೆಯೆಂದರೆ ನೀರಾವರಿ ಸೌಕರ್ಯವೆಂಬುದನ್ನು ತಾವು ತಿಳಿಯಬೇಕು. ಇದನ್ನು ಮಾಡಿಕೊಟ್ಟರೆ ಈಗ ಸದಸ್ಯರು ಕೇಳುತ್ತಿರತಕ್ಕ ಅನೇಕ ಬೇಡಿಕೆಗಳೇ ಉದ್ಭವಿಸುವುದಿಲ್ಲ. ಸರ್ಕಾರದವರಿಗೆ ವರ್ಷೇ ವರ್ಷೇ ಆಗುತ್ತಿರುವ ಆಹಾರದ ಹತೋಟಿ ಖರ್ಚು ನಿಲ್ಲುತ್ತದೆ. ಸರ್ಕಾರದವರಿಗೆ ನೀರಾವರಿ ಯೋಜನೆಗಳೇ ಒಂದು ಆಸ್ತಿಯಾಗಿ ಪರಿಣಮಿಸುತ್ತದೆ. ಈ ಆಸ್ತಿಯನ್ನು ರೂಢಿಸುವುದು ಪ್ರಭುತ್ವದವರ ಕರ್ತವ್ಯವೆಂಬುದನ್ನು ನಾನು ಹೇಳಬೇಕಾಗಿಲ್ಲ. ಹೀಗಿರುವಲ್ಲಿ ನಮ್ಮ ಮಾಗಡಿ ತಾಲ್ಲೂಕಿನಲ್ಲಿರುವ 220 ಕೆರೆಗಳನ್ನೇ ನೋಡುವುದಾದರೆ, ಅವುಗಳಲ್ಲಿ 120 ಕೆರೆಗಳು ದುರಸ್ತಾಗಿ ಇನ್ನು 100 ಕೆರೆಗಳು ತೂಬು, ಕೋಡಿ ಮುಂತಾದವು ಕೆಟ್ಟು ನಿಂತಿವೆ. ನಮ್ಮ ಮಾಗಡಿ ತಾಲ್ಲೂಕಿನಲ್ಲಿ ಶ್ರೀಮಾನ್ ಮರಿಯಪ್ಪನವರು ಮಂತ್ರಿಗಳಾಗಿದ್ದಾಗ ಮೆಷಿನರಿಗಳ ಸಹಾಯದಿಂದ ಮೂರೇ ತಿಂಗಳಲ್ಲಿ ದುರಸ್ತುಮಾಡಿಸಿಕೊಟ್ಟ ಕೆರೆ ಈಗ ಎಷ್ಟು ಫಲದಾಯಕವಾಗಿದೆಯೆಂಬುದನ್ನು ನೀವೇ ನೋಡಿ. ಅಲ್ಲಿ ಒಂದು ಕಾಳು ಬತ್ತವೂ ಆಗದಿದ್ದಂಥ ಸಂದರ್ಭದಲ್ಲಿ 280 ಎಕರೆಗಳಿಗೆ ನೀರಿನ ಆಸರೆ ಸಿಕ್ಕಿ ಆ ಸುತ್ತ ಮುತ್ತಲ ಪ್ರದೇಶ ಇಂದು ಸುಭಿಕ್ಷದಿಂದಿದೆ. ಹೀಗೆ ಮೆಷಿನರಿಗಳ ಸಹಾಯದಿಂದ, ಎರಡು ಮೂರು ವರ್ಷಗಳಲ್ಲೂ ಆಗದಂಥ ಕೆಲಸಗಳು ಕೇವಲ 6–7 ತಿಂಗಳುಗಳಲ್ಲಾಗಿ ತನ್ಮೂಲಕ ರೈತರಿಗೆ ಸುಖ ಸಂಪತ್ತು ದೊರಕುವಂತಾಗಿದೆ. ದೇಶದಲ್ಲಿ ಇಂಥ ಅನುಕೂಲತೆಗಳನ್ನು ಹೆಚ್ಚು ಹೆಚ್ಚಾಗಿ ಮಾಡಿಕೊಡಬೇಕಾದದ್ದು ಅವಶ್ಯಕ.

1753-5

## ಕೆರೆಗಳ ಹೂಳು ತೆಗೆದರೆ.....

ಎಕ್ಕಲುಮಣ್ಣನ್ನು ತೆಗೆಯುವ ಕಡೆಗೂ ತಾವು ಹೆಚ್ಚು ಗಮನ ಕೊಡಬೇಕು. ಏರಿಗಳನ್ನು ಎತ್ತರಿಸಿದ ಮಾತ್ರಕ್ಕೇ ಕೆರೆಗಳನ್ನು ದುರಸ್ತುಮಾಡಿಸಿದಂತಾಗುವುದಿಲ್ಲ. ಮತ್ತೆ 6–8 ತಿಂಗಳಲ್ಲೇ ಎಕ್ಕಲು ತುಂಬಿಕೊಂಡು ಏರಿ ಕೊಚ್ಚಿ ಹೋಗುತ್ತದೆ. ಇದುವರೆಗೂ ಒಂದು ಕೋಟಿ ರೂಪಾಯಿಗಳನ್ನು ಬುಲ್‌ಡೋಸರುಗಳಿಗೂ, ಟ್ರಾಕ್ಟರುಗಳಿಗೂ ಹಾಕಿ ಎಕ್ಕಲನ್ನು ತೆಗೆಯಿಸಿ ದೇಶಕ್ಕೆ ಸೌಲಭ್ಯ ಇನ್ನೂ ದೊರಕಿಸಿಕೊಡಲಾಗಿಲ್ಲ. ಇನ್ನಾದರೂ ಬುಲ್‌ಡೋಸರುಗಳ ಸಹಾಯದಿಂದ ಬೇಗ ಬೇಗ ಎಕ್ಕಲು ತೆಗೆಯಿಸಲಿಕ್ಕೆ ಏರ್ಪಾಡು ಮಾಡಬೇಕೆಂದು ಹೇಳುತ್ತೇನೆ. ಇಷ್ಟನ್ನು ಮಾತ್ರ ಅರಿಕೆಮಾಡಿಕೊಂಡು, ಸರ್ಕಾರದವರು ನೀರಾವರಿ ಯೋಜನೆಗಳಿಗೆ ಹೆಚ್ಚು ಪ್ರೋತ್ಸಾಹ ಕೊಡಬೇಕೆಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

### ಕರ್ನಾಟಕ ಏಕೀಕರಣವಾಗಬೇಕು!

26ನೇ ಏಪ್ರಿಲ್ 1955.

ಅಧ್ಯಕ್ಷರೇ, ಈಗ ಮೂರು ನಾಲ್ಕು ದಿವಸಗಳಿಂದಲೂ ಶೇಷಾದ್ರಿ ಸಮಿತಿಯವರ ವರದಿಯ ವಿಚಾರವಾಗಿ ವಾದವಿವಾದಗಳು ಈ ಸಭೆಯಲ್ಲಿ ನಡೆದಿವೆ. ನಾನು ಈ ಸಂದರ್ಭದಲ್ಲಿ ಅರಿಕೆ ಮಾಡಿಕೊಳ್ಳತಕ್ಕದ್ದಿಷ್ಟೆ ಪ್ರಾಂತಪುನರ್ವಿಂಗಡಣೆಯ ವಿಚಾರದಲ್ಲಿ ಅನೇಕ ಜನರು ಪರವಾಗಿಯೂ ಮತ್ತು ವಿರೋಧವಾಗಿಯೂ ತಮ್ಮ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ. ನಾನಾದರೋ ಕರ್ನಾಟಕ ಎರಡು ಕೋಟಿ ಪ್ರಜಾಸಂಖ್ಯೆಯುಳ್ಳಂಥ ಒಂದು ಪ್ರಾಂತ್ಯವಾಗಬೇಕು, ಅದರಿಂದ ದೇಶಕ್ಕೆ ಇರತಕ್ಕ ಅನೇಕ ರೀತಿಯ ಕೊರತೆಗಳು ಪರಿಹಾರವಾಗುತ್ತವೆ. ಸಮುದ್ರ, ರೇವುಪಟ್ಟಣಗಳು, ಖನಿಜ ಸಂಪತ್ತು ನಮ್ಮ ದೇಶಕ್ಕೆ ಒದಗಿ ಈಗಿರತಕ್ಕ ನಿರುದ್ಯೋಗ ಸಮಸ್ಯೆ ಪರಿಹಾರವಾಗಿ, ವರ್ತಕರು ಹೆಚ್ಚಿನ ಮಟ್ಟದಲ್ಲಿ ವ್ಯಾಪಾರ ವ್ಯವಹಾರಗಳನ್ನು ನಡೆಸುವುದಕ್ಕೆ ಅವಕಾಶವಾಗುತ್ತೆಂದು ಹೇಳುತ್ತೇನೆ. ಇವೊತ್ತಿನ ದಿವಸ ಕರ್ನಾಟಕದ ಹೊರಗಡೆ, ಇರತಕ್ಕ ಜನಗಳು ಮೈಸೂರು ಸಂಸ್ಥಾನಕ್ಕೆ ಸೇರಿ ಸುಖಸಂಪತ್ತಿನಿಂದ ಬಾಳೋಣವೆಂಬ ಬಯಕೆಗೆ ಉತ್ತೇಜನ ಕೊಟ್ಟಂತಾಗುತ್ತದೆ. ಆಂಗ್ಲೇಯರು ಅಧಿಕಾರದಲ್ಲಿದ್ದಾಗ ತಮ್ಮ ಆಡಳಿತಕ್ಕೆ ಅನುಕೂಲವಾಗುವಂತೆ ಛಿದ್ರಛಿದ್ರವಾಗಿ ಮಾಡಿರತಕ್ಕದ್ದು ಮಾನ್ಯ ಸದಸ್ಯರೆಲ್ಲರಿಗೂ ಗೊತ್ತಿರತಕ್ಕ ವಿಚಾರವೇ.

ಅಂಥದರಲ್ಲಿ ಮತ್ತೊಮ್ಮೆ ಎಲ್ಲರೂ ಒಂದುಗೂಡಿ ಹಿಂದಿನಂತೆ ಸುಖ ವೈಭವದಿಂದ ಬಾಳಬೇಕೆಂಬ ಸಹಜವಾದ ಆಕಾಂಕ್ಷಿಗೆ ಸಫಲತೆಯನ್ನು ಉಂಟುಮಾಡಿಕೊಡುವುದು ನ್ಯಾಯವಾಗಿದೆ.

ಅಲ್ಲದೆ ಮೈಸೂರು ಕಾಂಗ್ರೆಸ್ ಸಂಸ್ಥೆಯವರೂ ಸಹ ಈಗ್ಗೆ ಸುಮಾರು 40 ವರ್ಷಗಳಿಂದಲೂ ಮೈಸೂರು ಸಂಸ್ಥಾನ ವಿಸ್ತಾರವಾಗಬೇಕು. ಅದರಿಂದ ದೇಶಕ್ಕೆ ಅನುಕೂಲವಾಗುತ್ತವೆಂದು ಹೇಳುತ್ತಲೇ ಬಂದಿದ್ದಾರೆ. ಕಾಂಗ್ರೆಸ್ ಸರ್ಕಾರ ಬಂದಮೇಲೆ ಈ ವಾದ ಬಂದಿದ್ದಲ್ಲಿ. ಆಂಧ್ರಪ್ರಾಂತ ರಚನೆಯಾದ ಮೇಲೆ ಈ ಸಮಸ್ಯೆ ಉಲ್ಬಣಿಸಿ ನಾಲ್ಕು ಕೋಟಿ ಪ್ರಜಾಸಂಖ್ಯೆಯಿರತಕ್ಕ ಬೊಂಬಾಯಿಪ್ರಾಂತ್ಯ, 3 ಕೋಟಿ ಪ್ರಜಾಸಂಖ್ಯೆಯಿರತಕ್ಕ ಮದ್ರಾಸ್ ಪ್ರಾಂತ್ಯ, 4 ಕೋಟಿ ಪ್ರಜಾಸಂಖ್ಯೆ ಇರತಕ್ಕ ಹೈದರಾಬಾದ್ ಪ್ರಾಂತ್ಯಗಳು ದೊಡ್ಡ ದೊಡ್ಡದಾಗಿರುವುದರಿಂದ ದೇಶದ ಆಡಳಿತಕ್ಕೆ ಅನಾನುಕೂಲಗಳಾಗಿರುವುದನ್ನು ಗಮನಿಸಿ ಎರಡೆರಡು ಕೋಟಿಗೆ ಒಂದು ಸರ್ಕಾರ ರಚಿಸಬೇಕೆಂದು ಹೇಳಿ ಫಜಲಾಲಿ ಕಮಿಷನ್ನನ್ನು ದೇಶದ ನಾಯಕರು ಸ್ಥಾಪನೆ ಮಾಡಿದ್ದಾರೆ. ನೆಹರೂರವರನ್ನು ಸ್ಥಾಪನೆ ಮಾಡಬೇಕೆಂದು ಯಾರೂ ಕೇಳಿಕೊಂಡಿರಲಿಲ್ಲ. ಅವರೇ ಆಡಳಿತ ದೃಷ್ಟಿಯಿಂದ ಜನರಿಗೆ ಒಳ್ಳೆಯದಾಗಬೇಕೆಂದು ಈ ಕಮಿಟಿಯನ್ನು ಮಾಡಿದರು. ಆ ಕಮಿಟಿಯವರು ಆಗಲೇ ಮೈಸೂರಿನಲ್ಲಿ ಪ್ರವಾಸಮಾಡಿ ಜನರ ಅಭಿಪ್ರಾಯವೇನೆಂಬುದನ್ನು ಮನಗಂಡಿದ್ದಾರೆ. ಮತ್ತು ಆ ಕಮಿಟಿಯ ವರದಿಯೂ ಕೂಡ ಸಧ್ಯದಲ್ಲೇ ಸಭೆಯ ಮುಂದೆ ಬರತಕ್ಕ ಸನ್ನಿವೇಶವಿದೆಯೆಂಬುದನ್ನು ಮಾನ್ಯ ಸದಸ್ಯರನೇಕರು ಅರಿತವರಾಗಿದ್ದಾರೆ. ಈ ಸಭೆಯೆಲ್ಲಾ ಎಲ್ಲರಿಗಿಂತ ಬಹಳ ಹೆಚ್ಚಿಗೆ ಕಾಂಗ್ರೆಸ್ಸಿಗೆ ತ್ಯಾಗ ಮಾಡಿರತಕ್ಕ ಶ್ರೀಮಾನ್ ಪಟ್ಟಾಭಿರಾಮನ್‌ರವರು ಕೂಲಂಕುಷವಾಗಿ ಅಕ್ಷರಶಃ ಈ ಸೇರುವಿಕೆಯಿಂದ ದೇಶಕ್ಕೆ ಆಗತಕ್ಕ ಅನುಕೂಲ, ಇದುವರೆಗೂ ಉಂಟಾಗಿರತಕ್ಕ ಕಷ್ಟ ಪರಂಪರೆಗಳನ್ನು ವಿವರಿಸಿದ್ದಾರೆ. ಅಂತೆಯೇ ವಿರೋಧಪಕ್ಷದ ನಾಯಕರಾದ ಮತ್ತು ಜಿಲ್ಲಾ ಬೋರ್ಡಿನ ಸದಸ್ಯರಾಗಿದ್ದ ಮತ್ತು ಪ್ರಜಾಸೇವೆಯೇ ದೇಶಸೇವೆಯೆಂಬ ಮನಸ್ಸಿನಿಂದ ದುಡಿಯತಕ್ಕ ಶ್ರೀಮಾನ್ ಇಮಾಂರವರೂ ಇದರ ವಿಷಯದಲ್ಲಿ ಬಹಳ ಚೆನ್ನಾಗಿ ಹೇಳಿದ್ದಾರೆ. ಅವರು ಮೈಸೂರು ಸಂಸ್ಥಾನದ ಮಂತ್ರಿವರ್ಯರಾಗಿಯೂ ಇದ್ದವರು. ಹಾಗೆಯೇ ಅನುಭವಿಗಳಾದ ಶ್ರೀಮಾನ್ ಸಿದ್ದಪ್ಪನವರು, ಹುಚ್ಚೇಗೌಡರು ಪುನರ್ವಿಂಗಡಣೆಯ ವಿಚಾರದಲ್ಲಿ ತಮ್ಮ ಒಮ್ಮತವನ್ನು ಸೂಚಿಸಿ ದೇಶಕ್ಕೆ ಇದರಿಂದ ಒಳ್ಳೆಯದಾಗುತ್ತದೆಂದು ಹೇಳಿದ್ದಾರೆ. ಕೆಲವರು ಮಾತ್ರ ಇದನ್ನು ವಿರೋಧಿಸಿದ್ದಾರೆ. ಶ್ರೀಮಾನ್ ಬೈರೇಗೌಡರು

ತಮ್ಮ ಕ್ಷೇತ್ರದವರಿಗೆ ಇದು ಒಪ್ಪಿಗೆಯಿಲ್ಲವೆಂದು ಹೇಳಿದರು. ನನ್ನ ಕ್ಷೇತ್ರದಲ್ಲಿ ನೋಡಿದ್ದರಲ್ಲಿ ಕೆಲವರು ಏಕೀಕರಣವಾಗಬೇಕೆಂದೂ ಕೆಲವರು ಆಗಕೂಡದೆಂದೂ ಹೇಳಿದ್ದಾರೆ. ಇಂಥವರು ಮೈಸೂರು ಸಂಸ್ಥಾನದ ಹತ್ತು ಜಿಲ್ಲೆಗಳಲ್ಲೂ ಇದ್ದಾರೆ. ಆದರೆ, ಹೆಚ್ಚಿನದು ಯಾವುದೆಂದು ನೋಡುವುದಾದರೆ ಕರ್ಣಾಟಕ ಏಕೀಕರಣವಾಗಬೇಕೆನ್ನುವವರೇ ಎಂದು ನಾನು ತಿಳಿದವನಾಗಿದ್ದೇನೆ. ಆದರೂ ಈ ವಿಷಯಗಳಲ್ಲೆಲ್ಲಾ ಒಂದು ಸೂತ್ರವನ್ನು ಹಿಡಿದು ಅಂಕಿಅಂಶಗಳ ಮೇಲೆ ನಿರ್ಧರಿಸುವುದ್ಕಕೆ ಸಾಧ್ಯವಿಲ್ಲ. ದೇಶದ ವಾತಾವರಣವನ್ನು ನಾನು ತಿಳಿದಿರುವ ಮಟ್ಟಿಗೆ ಮತ್ತು ಸಂಚಾರ ಮಾಡುವಾಗ ಜನಾಭಿಪ್ರಾಯವನ್ನು ನಾನು ಶೇಖರಿಸಿರುವಮಟ್ಟಿಗೆ ಹೇಳುವುದಾದರೆ, ಕೈಗಾರಿಕೋದ್ಯಮಗಳಿಗೆ ಹೆಚ್ಚಿನ ಪ್ರೋತ್ಸಾಹ, ಸಮುದ್ರದ ಅನಕೂಲತೆ, ನಿರುದ್ಯೋಗದ ಸಮಸ್ಯೆ ಪರಿಹಾರಗಳು ದೊರೆತು ದೇಶವು ಸುಖಸಂಪತ್ತಿನಿಂದ ಬಾಳುವುದಕ್ಕೆ, ಸರ್ಕಾರದ ಅಧಿಕಾರಿಗಳಿಗೆ ಹೆಚ್ಚಿನ ರೀತಿಯಲ್ಲಿ ಅಧಿಕಾರ, ಸಂಬಳಸಿಕ್ಕಿ ಅವರ ಕಷ್ಟಗಳು ಪರಿಹಾರವಾಗಿ ದೇಶದ ಜನರ ಉನ್ನತಿಗೆ ಅನುಕೂಲವಾಗುತ್ತದೆಂದು ಹೇಳಬೇಕಾಗಿದೆ. ಅಲ್ಲದೆ ಕರ್ಣಾಟಕ ಸಂಘವೆಂಬುದು ಸುಮಾರು 40 ವರ್ಷಗಳಿಂದಲೂ ಬೆಂಗಳೂರಿನಲ್ಲಿದ್ದು ಕೊಂಡು ಸರ್ಕಾರದಿಂದ ಹಣವನ್ನು ಪಡೆದು ಸಂಸ್ಥಾನದ ಎಲ್ಲಾ ಭಾಗದಲ್ಲೂ ಈ ಬಗ್ಗೆ ಕಾರ್ಯವನ್ನು ಜರುಗಿಸುತ್ತಿದೆ. ಇಂಥ ಸಂದರ್ಭವಿರುವಾಗ ನಾನು ಇನ್ನು ಹೆಚ್ಚು ಒತ್ತಿಹೇಳಬೇಕಾದ ಅವಶ್ಯಕತೆಯಿಲ್ಲ. ಅಧ್ಯಕ್ಷರೂ ನಾನು ಮಾತು ಬೇಗ ಮುಗಿಸಲೆಂದು ಆತುರವಾಗಿದ್ದಾರೆ. ಅವರು ನನ್ನ ಮೇಲಿನ ವಿಶ್ವಾಸದಿಂದ, ಹಾಗೂ ಜನರ ಅಭಿಪ್ರಾಯವನ್ನು ಕೂಲಂಕುಷವಾಗಿ ಪಡೆಯಬೇಕು, ಯಾವ ಮಾನ್ಯ ಸದಸ್ಯರ ಮನಸ್ಸಿಗೂ ನೋವಾಗಬಾರದು. ಯಾರೂ ತಮಗೆ ಮಾತನಾಡಲು ಅವಕಾಶ ಕೊಡಲಿಲ್ಲವೆನ್ನಬಾರದು ಎಂಬ ಮನೋಭಾವನೆಯಿಂದ ಮಧ್ಯಾಹ್ನ ಮತ್ತು ಸಾಯಂಕಾಲವೆಲ್ಲಾ ಸಭೆ ನಡೆಸಿ ಹೆಚ್ಚಿನ ಕಾಲಾವಕಾಶವಿಲ್ಲದಿದ್ದರೂ ಇಚ್ಛೆಪಟ್ಟವರಿಗೆಲ್ಲರಿಗೂ ಅವಕಾಶ ಕೊಟ್ಟು ಈ ಸಭೆಯ ಸಂದೇಶ ಈ ರೀತಿಯ ಭಾಷಣಗಳ ಮೂಲಕ ಫಜಲಾಲಿ ಕಮಿಷನ್‌ನವರಿಗೆ ಮುಟ್ಟುವಂತೆ ವ್ಯವಸ್ಥೆ ಮಾಡಿದ್ದಾರೆ. ಇದಕ್ಕಾಗಿ ನಾನು ಅವರನ್ನು ವಂದಿಸಬೇಕಾಗಿದೆ.

ಇನ್ನು ಈ ವರದಿಯ ಸಂಬಂಧದಲ್ಲಿ ನಮ್ಮ ಹಾಸನದ ಮಾನ್ಯ ಸ್ನೇಹಿತರಾದ ತಿಮ್ಮಪ್ಪಗೌಡರು ತಮ್ಮ ಭಾಷಣದಲ್ಲಿ ಒಂದೆರಡಾವರ್ತಿ ಹೇಳಿದ ಕೆಲವು ವಿಷಯಗಳನ್ನು ಸ್ವಲ್ಪ ಪ್ರಸ್ತಾಪಿಸಬೇಕಾಗಿದೆ. ಅವರು ಪಾರ್ಲಿಮೆಂಟಿನ ಮೆಂಬರೂ ಆಗಿದ್ದವರು. ತಿಳಿವಳಿಕಸ್ಥರು ಮತ್ತು ಮುಂದುವರಿದ ವರ್ಗಕ್ಕೆ ಸೇರಿದವರು. ಅವರು ಕೂಡ ಕೊನೆಯಲ್ಲಿ ಏಕೀಕರಣವಾಗುವುದು ಬೇಡ ಎಂದೇನೂ ಹೇಳಲಿಲ್ಲ. ಎರಡು ವರುಷ ತಾಳಿ ಎಂದು ಮಾತ್ರ ಹೇಳಿದರು. ಸಾಲ ಕೊಡುವುದನ್ನು ಕೇಳಿದರೆ ಎರಡು ವರ್ಷ ನಿಲ್ಲಿ ಎಂದು ಹೇಳುವಂತೆ ಅವರು ಈ ಸಮಸ್ಯೆಯನ್ನು ಮುಂದಕ್ಕೆ ಹಾಕಲೆಂಬ ಅಭಿಪ್ರಾಯವನ್ನು ತಮ್ಮದೇ ಒಂದು ಮಾದರಿಯಾದ ಶೈಲಿಯಲ್ಲಿ ಸಭೆಗೆ ಅರಿಕೆ ಮಾಡಿದ್ದಾರೆ. ಇನ್ನೂ ಕೆಲವರು ಎರಡು ಕರ್ಣಾಟಕವಾಗಬೇಕೆಂಬ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಹಾಗೆ ಹೇಳುವುದರಲ್ಲೂ ಮೈಸೂರಿಗೆ ಕೆಲವು ಇತರ ಭಾಗಗಳು ಸೇರಬೇಕೆಂದು ಅವರೂ ಹೇಳಿದ್ದಾರೆ. ಒಟ್ಟಿನಲ್ಲಿ ವಿಸ್ತೃತ ಕರ್ಣಾಟಕವಾಗುವ ವಿಷಯದಲ್ಲಿ ಬಹುಮತ ಅಭಿಪ್ರಾಯವಿದೆಯೆನ್ನಬಹುದು. ನಾನಾದರೋ ಸುಮಾರು ಒಂದು ಕೋಟಿ ಪ್ರಜಾಸಂಖ್ಯೆಯಿರತಕ್ಕ ಈ ಸಂಸ್ಥಾನದ 10 ಜಿಲ್ಲೆಗಳಲ್ಲೂ ಪ್ರಜಾ ಸೇವಕನಾಗಿದ್ದು ಕಳೆದ 20 ವರ್ಷಗಳಿಂದಲೂ ಜನರು ಮನಸ್ಸನ್ನು ತಕ್ಕ ಮಟ್ಟಿಗೆ ತಿಳಿದುಕೊಂಡವನಾಗಿದ್ದೇನೆ. ಮುಖ್ಯಮಂತ್ರಿಗಳ ಜೊತೆಯಲ್ಲೂ ಅನೇಕ ಸಾರಿ ಪ್ರವಾಸ ಮಾಡಿದ್ದೇನೆ. ಮುಖ್ಯಮಂತ್ರಿಗಳು ಅಲ್ಲಲ್ಲಿ ಕೊಟ್ಟಿರತಕ್ಕ ಹೇಳಿಕೆಗಳನ್ನೂ, ಈ ಸಭೆಗೆ ಆಗಾಗ್ಗೆ ಕೊಟ್ಟಿರತಕ್ಕ ಭರವಸೆಗಳನ್ನು ಅರಿತವನಾಗಿದ್ದೇನೆ. ಮುಖ್ಯಮಂತ್ರಿಗಳೂ ಕೂಡ ವಿಶಾಲ ಕರ್ನಾಟಕವಾಗತಕ್ಕ ವಿಚಾರಕ್ಕೆ ವಿಶಾಲ ಮೈಸೂರಿನೊಳಗೆ ಹೆಚ್ಚು ಜನ ನಮ್ಮ ಬಾಂಧವರು ಸೇರಿ ತನ್ಮೂಲಕ ಮೈಸೂರಿನ ಭವಿಷ್ಯವನ್ನು ರೂಪಿಸತಕ್ಕ ವಿಚಾರದಲ್ಲಿ ಬಹಳ ದಿನಗಳಿಂದಲೂ ರಕ್ಷಣೆ ಕೊಟ್ಟು ಕೊಂಡು ಬಂದಿದ್ದಾರೆ. ನಮ್ಮದು ಕಾಂಗ್ರೆಸ್ ಸರ್ಕಾರ, ಕಾಂಗ್ರೆಸ್ ಸರ್ಕಾರದಿಂದಲೇ ಇದು ಪರಿಪೋಷಿತವಾಗಿದೆ. ಫಜಲಾಲಿ ಸಮಿತಿಯವರು ಎಲ್ಲಾ ಕಡೆಯಲ್ಲೂ ಪ್ರವಾಸ ಮಾಡಿ ಇಲ್ಲಿರತಕ್ಕ ಮಾನ್ಯ ಮುಖಂಡರುಗಳ ಅಭಿಪ್ರಾಯವನ್ನು ಪಡೆದಿದ್ದಾರೆ. ಈ ಸಭೆಯಲ್ಲಿಯೂ ಭಾಷಣ ಮಾಡಿದವರಲ್ಲಿ ಬಹು ಮಂದಿ ಜನರು ವಿಶಾಲ ಕರ್ನಾಟಕವಾಗುವುದರಲ್ಲಿ ಭಿನ್ನಾಭಿಪ್ರಾಯ ವ್ಯಕ್ತಪಡಿಸಿದಂತೆ ತೋರಲಿಲ್ಲ. ನಮ್ಮ ಜಿಲ್ಲೆಯುವರಾಗಿ ಚುನಾಯಿತರಾಗಿ ಬಂದಂಥ ಮಾನ್ಯ ಸದಸ್ಯರಾದ ನರಸಿಂಹರೆಡ್ಡಿಯವರು, 60 ಜನ ಶಾಸನಸಭಾ ಸದಸ್ಯರು ಇದಕ್ಕೆ ಒಪ್ಪಿಗೆ ಕೊಟ್ಟಿಲ್ಲವೆಂದು

ಹೇಳಿದರು. ಅವರಿಗೆ ಈ ಅಭಿಪ್ರಾಯವನ್ನು ಸೂಚಿಸಿದಂಥ 60 ಜನರು ಯಾರೋ ಗೊತ್ತಿಲ್ಲ. 60 ಜನರ ಪರವಾಗಿ ರುಜುಮಾಡಿರುವ ಶಾಸನಸಭಾಸದಸ್ಯರೂ ಇದ್ದಾರೆ. ಆ ವಿಚಾರದಲ್ಲಿ ನಿಜಾಂಶವೇನೇ ಇರಲಿ, ಅವರಿನ್ನೂ ಚಿಕ್ಕ ವಯಸ್ಸಿನವರು; ಜಾಣರು ಮತ್ತು ಬುದ್ಧಿವಂತರು ನಮ್ಮ ಜಿಲ್ಲೆಯವರಾಗಿ ಒಳ್ಳೆಯ ರೈತ ಮನೆತನದವರು. ಅವರ ವಿಷಯದಲ್ಲಿ ನನಗೆ ಬಹಳ ಅಭಿಮಾನವಿದೆ. ಅಂಥವರೇಕೆ ಈ ರೀತಿ ಮಾತನಾಡಿದರೋ ನನಗೆ ಗೊತ್ತಿಲ್ಲ. ಅಂತೂ ಅವರೂ ಈ ವಿಷಯವನ್ನು ಪುಷ್ಟೀಕರಿಸುವಂತಾಗಿ ಅವರ ಮನಸ್ಸು ವಿಶಾಲವಾಗಿ ರಾಷ್ಟ್ರಾಭಿಮಾನದಿಂದ ಕೂಡಿ ರಾಷ್ಟ್ರವನ್ನು ಕಟ್ಟುವುದಕ್ಕೆ ಅನುವಾಗಲಿ ಎಂದು ಹಾರೈಸುತ್ತೇನೆ.

**ಶ್ರೀ ಎ.ವಿ. ನರಸಿಂಹರೆಡ್ಡಿ (ಬೆಂಗಳೂರು ದಕ್ಷಿಣ)** : ಮಾನ್ಯ ಮಿತ್ರರು ಹೇಳಿದಹಾಗೆ 60 ಜನ ಈ ಶಾಸನ ಸಭಾ ಸದಸ್ಯರ ಪರವಾಗಿ ರುಜುಮಾಡಿದ್ದಾರೆಂಬುದು ಸುಳ್ಳು. ಕೆಲವು ಜನ ಲೆಜಿಸ್ಲೆಟಿವ್ ಅಸೆಂಬ್ಲಿ ಸದಸ್ಯರು ಮತ್ತು ಕೆಲವು ಜನ ಲೆಜಿಸ್ಲೆಟಿವ್ ಕೌನ್ಸಿಲ್ ಸದಸ್ಯರು ಆ ರೀತಿಯಾಗಿ ಮೆಮೊರಂಡಂ ಕೊಟ್ಟಿದ್ದಾರೆಂದು ನಾನು ಹೇಳುತ್ತೇನೆ.

**ಶ್ರೀ ಎಸ್. ಸಿದ್ದಪ್ಪ** : ಪಶ್ಚಾತ್ ನಾನು ಹೇಳಿದಂತೆಯೂ ಇನ್ನೊಂದು ಮೆಮೊರಾಂಡಂ ಹೋಗಿದೆಯೆಂದು ತಿಳಿಸುತ್ತಾ, ಆ ವಿಷಯವನ್ನು ಅಲ್ಲಿಗೇ ಬಿಟ್ಟು ಸಭೆಯವರಿಗೆ ಇಷ್ಟು ಮಾತ್ರ ಹೇಳಿ ನಾನು ಮುಕ್ತಾಯಗೊಳಿಸುತ್ತೇನೆ.

ನಮ್ಮ ಮೈಸೂರು ದೇಶ ಎರಡು ಕೋಟಿ ಪ್ರಜಾಸಂಖ್ಯೆಯುಳ್ಳಂಥ ವಿಶಾಲ ಮೈಸೂರಾಗಿ ನಮ್ಮ ದೇಶದ ಜನರಿಗೆ ಸುಖ ಸಂತೋಷವುಂಟಾಗಲಿ ಮತ್ತು ನಮ್ಮಗಳನ್ನು ನಂಬಿರತಕ್ಕ ನೆರೆ ಪ್ರಾಂತ್ಯಗಳವರು ನಮ್ಮೊಡನೆ ಸೇರಿ ಅವರ ಆಶೋತ್ತರಗಳು ಈಡೇರಲಿ ಮತ್ತು ನಮ್ಮ ಮಾನ್ಯ ಮುಖಂಡರುಗಳಿಗೆ ಒಳ್ಳೆಯ ಯಶಸ್ಸು ಬರಲಿ ಎಂದು ಹಾರೈಸುತ್ತಾ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಕೃಷಿ–ಆದಾಯ ತೆರಿಗೆ ಬೇಡವೇ ಬೇಡ

**14ನೇ ಏಪ್ರಿಲ್ 1955.**

ಸ್ವಾಮಿ ಅಧ್ಯಕ್ಷರೇ, ನಮ್ಮ ನಾಯಕರು ಈ ಬಿಲ್ಲನ್ನು ತರುವುದಕ್ಕೆ ಮುಂಚೆ ಇದರಲ್ಲಿರತಕ್ಕಂಥ ಅಂಶಗಳ ಬಗ್ಗೆ ಪೂರ್ಣಪರಿಶೀಲನೆಗಳನ್ನು ಮಾಡಿದ ನಂತರವೇ ಈಗ ಈ ಬಿಲ್ಲನ್ನು ನಮ್ಮ ಮುಂದೆ ತಂದಿದ್ದಾರೆ. ಆದರೆ ಇದರಲ್ಲಿ ಸರ್ಕಾರಕ್ಕೂ ಅಷ್ಟು ಆದಾಯಕರವಾದ ಮಾರ್ಗವಿದ್ದಂತೆ ಕಂಡು ಬರುತ್ತಿಲ್ಲ. ಅದೇ ರೀತಿ ಪ್ರಜೆಗಳಿಗೂ ಕೂಡ ಈ ಮಸೂದೆಯ ರೂಪರೇಖೆಗಳು ಸರಿಯಾಗಿದ್ದಂತೆ ಕಾಣಬರುತ್ತಿಲ್ಲ. ಈಗ ಈ ಮಸೂದೆ ಇರತಕ್ಕಂಥ ಪರಿಸ್ಥಿತಿಯಲ್ಲಿ ರೈತರಿಗೆ ತುಂಬ ಕಿರುಕುಳ ಮತ್ತು ತೊಂದರೆಗಳಾಗುತ್ತವೆ. ಆದ ಕಾರಣ ತಾವು ಇದನ್ನು ಸ್ವಲ್ಪ ಬದಲಾವಣೆ ಮಾಡಬೇಕಾಗಿದೆ. ಸ್ವಾಮಿ, ಮೈಸೂರು ದೇಶಕ್ಕೆ ಸರ್ಕಾರ ಬರುವುದಕ್ಕೆ ಮುಂಚೆ ನಮ್ಮ ನಾಯಕರುಗಳೆಲ್ಲಾ ದೇಶಕ್ಕೆ ಸ್ವಾತಂತ್ರ ಬಂದಮೇಲೆ ರೈತರಿಗೆಲ್ಲಾ ಕುಂಭಾಭಿಷೇಕ ಮಾಡಿಸುತ್ತೇವೆಂದು ಭರವಸೆ ಕೊಟ್ಟಿದ್ದರು. ದೇಶಾದ್ಯಂತವೂ ರಸ್ತೆಗಳನ್ನು ಮಾಡಿಸುತ್ತೇವೆ, ದೇಶದಲ್ಲಿರತಕ್ಕಂಥ ಕೆರೆಗಳನ್ನೆಲ್ಲಾ ಜೀರ್ಣೋದ್ಧಾರ ಮಾಡಿಸುತ್ತೇವೆ, ವಿದ್ಯಾಭ್ಯಾಸದಲ್ಲಿ ನೂತನ ಪದ್ಧತಿಗಳನ್ನು ಜಾರಿಗೆ ತರುತ್ತೇವೆ, ಸಂಸ್ಕೃತಿ ಪ್ರಚಾರಮಾಡಿ ರೈತರ ಏಳಿಗೆಯನ್ನು ಸಾಧಿಸುತ್ತೇವೆ, ನಮ್ಮ ಇಡೀ ಜನಾಂಗವನ್ನೆಲ್ಲಾ ತಿಳಿವಳಿಕೆಯುಳ್ಳ ಜನಾಂಗವನ್ನಾಗಿ ಮಾಡುತ್ತೇವೆಂದು ಹೀಗೆಲ್ಲಾ ನೂರಾರು ಭರವಸೆಗಳನ್ನು ಕೊಟ್ಟಿದ್ದರು. ಎಲ್ಲಕ್ಕಿಂತಲೂ ಮಿಗಿಲಾಗಿ ಹರಿಜನೋದ್ಧಾರ ಮಾಡುತ್ತೇವೆಂದು ಬೇರೆ ಹೇಳಲಾಗಿತ್ತು. ಆದರೆ ಈ ಮಹತ್ಕಾರ್ಯಗಳನ್ನೆಲ್ಲಾ ಮಾಡಬೇಕಾದರೆ ದುಡ್ಡು ಬೇಕು ಎಂದು ಹೇಳಿದರೆ ಮಾನ್ಯ ಸದಸ್ಯರೆಲ್ಲರೂ ಇದನ್ನು ಒಪ್ಪಿಕೊಳ್ಳಲೇ ಬೇಕು. ಆದರೆ ಈ ದಿವಸ ಈ ಮಸೂದೆಯ ಬಗ್ಗೆ ವಿರೋಧ ಪಕ್ಷದ ಮಾನ್ಯ ಸದಸ್ಯರು ರೈತರಿಗೆ ಏನು ಹೇಳಿದ್ದಾರೋ ಅದು ಸರಿಯೇ ಅಥವಾ ತಪ್ಪೇ ಎನ್ನತಕ್ಕ ಪ್ರಶ್ನೆಯ ಗೋಜಿಗೇ ನಾನೀಗ ಹೋಗುವುದಿಲ್ಲ ಅವರು ಆ ರೀತಿ ಟೀಕೆಮಾಡುವುದಕ್ಕೆ ಅವರ ಉದ್ದೇಶವೇನಿದೆ ಎಂಬುದನ್ನು ನಾನೀಗ ಚರ್ಚೆಮಾಡಲು ಇಷ್ಟಪಡುವುದಿಲ್ಲ. ಆದರೆ, ಎಂದೂ ಬಾರದಿರುವಂಥ ಒಂದು ಪ್ರಸಂಗ ಈ ದಿವಸ ನಮ್ಮ ಮುಂದೆ ಬಂದಿದೆ ಎಂದು ಮಾತ್ರ ನಾನು ಮಹಾಜನರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ನಮಗೆ ದುಡ್ಡೊಂದೇ ಪ್ರಾಮುಖ್ಯವಲ್ಲ. ಆದರೆ ಈಗ ಈ ಮಸೂದೆಯಲ್ಲಿರತಕ್ಕಂಥ ಲೋಪದೋಷಗಳೇನು, ನ್ಯೂನತೆಗಳೇನು, ಇದರಿಂದ ರೈತರಿಗಾಗತಕ್ಕ ತೊಂದರೆಗಳೇನೆಂಬುದನ್ನು ಕಂಡು ಹಿಡಿದು ಇವುಗಳನ್ನು ಸರಿಪಡಿಸತಕ್ಕದ್ದು ಬಹಳ ಪ್ರಾಮುಖ್ಯವಾದುದೆಂದು ನಾನು ತಮ್ಮಲ್ಲಿ ವಿನಂತಿ

ಮಾಡಿಕೊಳ್ಳುತ್ತೇನೆ. ಆದರೆ ಈ ದಿವಸ ನಮ್ಮ ದೇಶದಲ್ಲಿರತಕ್ಕಂಥ ರೈತರು ಈ ಇನ್‌ಕಂಟ್ಯಾಕ್ಸ್ ಬಗ್ಗೆ ಲೆಕ್ಕಗಳನ್ನಿಡಬೇಕೆಂದರೆ ನಿಜವಾಗಿಯೂ ಅವರಿಗೆ ಬಹಳಕಷ್ಟವಾಗುತ್ತದೆ. ಈ ವಿಚಾರವನ್ನು ನಮ್ಮ ನಾಯಕರು ಅರಿತಿದ್ದಾರೆ. ಈಗ ಈ ಬಿಲ್ಲಿನಲ್ಲಿ ತಿಳಿಸಿರುವ ಪ್ರಕಾರ 3,500 ರೂಪಾಯಿಗಳಿಗೆ ಮತ್ತು ಕೆಲವು ಕಮರ್ಷಿಯಲ್ ಕ್ರಾಪುಗಳಿಗೂ ಒಂದು ವಿನಾಯಿತಿಯನ್ನು ಕೊಡಲಾಗುವುದೆಂದು ಹೇಳಲಾಗಿದೆ. ಆದರೆ ಈ ತೊಂದರೆಗಳನ್ನೆಲ್ಲಾ ನಿವಾರಣೆ ಮಾಡಲು ನಾನೀಗ ಹೊಸರೂಪದ ಸಲಹೆಗಳನ್ನು ಕೊಡಲಿಚ್ಚಿಸುತ್ತೇನೆ. ಇದನ್ನು ಬೇರೆ ರೀತಿಯಲ್ಲಿ ಪರಿಶೀಲನೆ ಮಾಡಿದ್ದೇ ಆದರೆ ಇದು ತುಂಬ ಆಶಾದಾಯಕವಾದಂಥ ಮಾರ್ಗವೆಂದು ಕಂಡುಬರುತ್ತದೆ. ಇದರಿಂದ ಸರ್ಕಾರಕ್ಕೇನೋ 25 ಲಕ್ಷ ಚಿಲ್ಲರೆ ವರಮಾನ ಬರಬಹುದು. ಆದರೆ ಈ ದಿವಸ ಸರ್ಕಾರದಲ್ಲಿ ಖರ್ಚುವೆಚ್ಚಗಳು ದಿನೇ ದಿನೇಏರುತ್ತಿದೆ. ಜನರು ತೆರಿಗೆ ಕೊಡುವುದಿಲ್ಲ ಎಂದು ಯಾರು ಹೇಳುತ್ತಿಲ್ಲ. ಆದರೆ ಅಲ್ಲಿ 'ಇನ್‌ಕಂಟ್ಯಾಕ್ಸ್' ಎನ್ನುವ ಪದ ಮಾತ್ರ ಇರಕೂಡದೆಂದು ಹೇಳುತ್ತಿದ್ದಾರೆ. ರೈತನು ಈ ಬಗ್ಗೆ ಲೆಕ್ಕ ಇಡಬೇಕೆಂದರೆ ಆತನಿಗೆ ತುಂಬ ತೊಂದರೆಯಾಗುತ್ತದೆ. ಈ ಲೆಕ್ಕಗಳ ಬಗ್ಗೆ ಸಮಜಾಯಿಷಿ ಕೊಡತಕ್ಕ ಕೆಲಸ ಪೂರಾ ಕಷ್ಟ ತರವಾದದ್ದು. ಇದರಿಂದ ಅವರಿಗೆ ತುಂಬ ಅನ್ಯಾಯಗಳಾಗುತ್ತವೆ. ಈ ವಿಚಾರಗಳನ್ನೆಲ್ಲಾ ನಮ್ಮ ನಾಯಕರು ಅರಿತಿದ್ದಾರೆ. ಆದರೆ ಈಗ ಈ ಬಿಲ್ಲು ಬಂದಿರುವ ರೀತಿ ಸರಿಯಾಗಿಲ್ಲವಾದ್ದರಿಂದ ಜನಗಳು ಇದನ್ನು ವಿರೋಧಿಸುತ್ತಿದ್ದಾರೆ. ಆದರೆ ದೇಶದಲ್ಲಿ ಪ್ರಜೆಗಳಿಗೋಸ್ಕರವಾಗಿ ಸರ್ಕಾರದವರು ಇನ್ನೂ ಅನೇಕವಾಗಿ ಕೆರೆ, ಬಾವಿ, ಆಸ್ಪತ್ರೆ, ಸ್ಕೂಲು ಮತ್ತು ಹಾಸ್ಟಲು ಇತ್ಯಾದಿಗಳನ್ನೆಲ್ಲಾ ಒದಗಿಸಬೇಕಾಗಿದೆ. ಆದಕಾರಣ ಅವರಿಗೆ ದುಡ್ಡಿನ ವರಮಾನ ತೀರ ಅಗತ್ಯ. ಅದಕ್ಕಾಗಿ ನಾವು ಹೀಗೆ ಟ್ಯಾಕ್ಸ್ ಹಾಕತಕ್ಕದ್ದನ್ನು ಒಪ್ಪಿಕೊಳ್ಳಲೇಬೇಕು. ಆದರೆ ಇದರಿಂದ ರೈತರುಗಳಿಗೆ ಕಿರುಕುಳ ಆಗಬಾರದು. ಈಗಾಗಲೇ ಅನೇಕ ರೈತರು ಸಾಲಸೋಲಗಳನ್ನು ಮಾಡಿಕೊಂಡು, ಅನೇಕರು ತಮ್ಮ ಆಸ್ತಿಗಳನ್ನು ಸಹ ಮಾರಾಟಮಾಡಿಕೊಂಡು ಬಹಳ ಹೀನಾವಸ್ಥೆಯಲ್ಲಿದ್ದಾರೆ. ಜೂಟ ಲೆಕ್ಕಗಳನ್ನು ಜೂಟ ಎಂದು ಹೇಳುವುದರಲ್ಲಿ; ಸಾಚಾ ಲೆಕ್ಕಗಳನ್ನು ಕೂಡ ಜೂಟಲೆಕ್ಕ ಎಂದು ಹೇಳಿಬಿಡುತ್ತಾರೆ. ತೆಂಗಿನಕಾಯಿ ಬೆಲೆ ಮೊದಲು 300 ರೂಪಾಯಿಗಳಿದ್ದು ಈಗ 200 ರೂಪಾಯಿಗಳಿಗೆ ಇಳಿದಿದೆ.

ಸರ್ಕಾರದವರು ಯಾವುದಾದರೂ ಒಂದು ಹೊಸ ತೆರಿಗೆಯನ್ನು ಹಾಕುವುದರ ಮೂಲಕ ತಮಗಿರತಕ್ಕ ಕಷ್ಟವನ್ನು ಪರಿಹಾರ ಮಾಡಿಕೊಳ್ಳುವುದಕ್ಕೋಸ್ಕರ

ಈ ಬಿಲ್ಲನ್ನು ತಂದಿದ್ದಾರೆ. ಇದು ಬಹಳ ಸಂತೋಷಕರವಾದದ್ದು. ಅನೇಕ ಸದಸ್ಯರು ಇದುವರೆಗೂ ಈ ಮಸೂದೆಯ ವಿಷಯವಾಗಿ ಪ್ರಸ್ತಾಪಮಾಡಿದ್ದಾರೆ, ಈಗ ತಂದಿರುವ Agricultural Income Tax ಎಂಬ ಪದಗಳನ್ನು ಬಿಟ್ಟು ಇನ್ನು ಯಾವುದಾದರೂ ಅವರಿಗೆ ಅಪಾಯವಾಗದ ರೀತಿಯಲ್ಲಿ ಇದನ್ನು ತರಬೇಕು ಎಂದು ಈ ಸಭೆಯ ಮೂಲಕ ನಮ್ಮ ನಾಯಕರಲ್ಲಿ ನಾನು ವಿನಂತಿ ಮಾಡಿಕೊಳ್ಳುತ್ತೇನೆ. ಪದಸರಣಿಯನ್ನು ಮಾರ್ಪಾಡು ಮಾಡುವುದಕ್ಕೆ ನಮ್ಮ ನಾಯಕರಿಗೆ ಅವಕಾಶವಿದೆ. ಅದು ಒಂದು ದೊಡ್ಡ ಕಾರ್ಯವಲ್ಲ. ಸರ್ಕಾರದವರು ಅಭಿವೃದ್ಧಿ ಕಾರ್ಯಗಳಿಗೆ ಖರ್ಚುಮಾಡುವುದಕ್ಕಾಗಿ ಈ ರೀತಿ ತೆರಿಗೆಗಳನ್ನು ವಿಧಿಸುತ್ತಿದ್ದಾರೆಯೇ ಹೊರತು ತಮ್ಮ ಮನೆ ತುಂಬಿಕೊಳ್ಳುವುದಕ್ಕಲ್ಲವೆಂಬುದು ಎಲ್ಲರಿಗೂ ತಿಳಿದಿರುವ ವಿಚಾರ. ಆದ್ದರಿಂದ ನಾನು ಇಷ್ಟು ಮಾತ್ರ ಹೇಳಬಯಸುತ್ತೇನೆ. ಅದೇನೆಂದರೆ ಈ ಪದಗಳ ಸರಣಿಯನ್ನು ಅಂದರೆ Income Tax ಎಂಬ ಹೆಸರನ್ನು ತಪ್ಪಿಸಿ ಬೇರೆ ರೂಪಾಂತರಗೊಳಿಸಿ ಇಂಥಿಂಥವರು ಇಷ್ಟಿಷ್ಟು ಮೊಬಲಗನ್ನು ಕೊಡಬೇಕೆಂದು ಒಂದು ತೆರಿಗೆಯನ್ನು ಹಾಕಿದರೆ ಸರ್ಕಾರಕ್ಕೆ ಸಲೀಸಾಗಿ ದುಡ್ಡು ಬರುತ್ತದೆ. ಇಷ್ಟು ಮಾತ್ರ ಹೇಳಿ ನಮ್ಮ ಸ್ಪೀಕರ್ ಸಾಹೇಬರು ನಾಲ್ಕೈದು ಸಲ ಅವಕಾಶ ಕೊಡದೆ ಇದ್ದರೂ ಕೂಡ ಮುಖ್ಯವಾಗಿ ಈಗ ಅವಕಾಶ ಕೊಟ್ಟಿದ್ದಕ್ಕೆ ಅವರನ್ನು ವಂದಿಸಿ, ನಮ್ಮ ನಾಯಕರಲ್ಲಿ ಮಾತ್ರ ಈ ಪದ ಸರಣಿ ಬದಲಾಯಿಸಿ ಎಂದು ವಿನಯದಿಂದ ಕೇಳಿಕೊಂಡು ನನ್ನ ಭಾಷಣವನ್ನು ಮುಗಿಸುತ್ತೇನೆ.

## ಆಹಾರಧಾನ್ಯಗಳ ಸಂಗ್ರಹ-ವಿತರಣೆ
### 21ನೇ ಆಕ್ಟೋಬರ್ 1952

ಅಧ್ಯಕ್ಷರೇ, ಈಗ ಆಹಾರ ಧಾನ್ಯ ವಸೂಲಿಯ ವಿಚಾರದಲ್ಲಿ ದೇಶದಲ್ಲಿ ಯಾವ ರೀತಿ ವಸೂಲಿ ಕ್ರಮವನ್ನು ಕೈಕೊಳ್ಳಬೇಕೆಂಬ ವಿಚಾರವನ್ನು ಸರ್ಕಾರದವರು ವಿಮರ್ಶೆ ಮಾಡಿ ಸಭೆಯ ಮುಂದಿಟ್ಟಿದ್ದರೆ ಈ ಸಭೆಯ ಸದಸ್ಯರು ಅದನ್ನು ವಿಮರ್ಶೆ ಮಾಡಿ ಒಂದು ಅಭಿಪ್ರಾಯ ಕೊಡುವುದಕ್ಕೆ ಅವಕಾಶವಾಗುತ್ತಿತ್ತು. ಆದರೆ ಅವರು ಮೊಗುಂ ಆಗಿ ಸಭೆಯ ಅಭಿಪ್ರಾಯವನ್ನು ಪಡೆದು ಅನಂತರ ತಮ್ಮ ಅಭಿಪ್ರಾಯವನ್ನು ಕೊಡುವುದಕ್ಕೆ ಮನಸ್ಸು ಮಾಡಿರುವ ಹಾಗೆ ಭಾಸವಾಗುತ್ತದೆ.

ಆಹಾರ ಧಾನ್ಯ ವಸೂಲಿಯ ಸಂಬಂಧದಲ್ಲಿ ರೈತಾಪಿ ಜನರಿಗೆ ಅನುಕೂಲವನ್ನು ಹೆಚ್ಚು ಮಾಡಬೇಕೆಂಬ ಉದ್ದೇಶವಿದೆ ಎಂದು

ಜವಾಬ್ದಾರಿಯುತರಾದ ಮಾನ್ಯ ಸದಸ್ಯರು ಎಲ್ಲಾ ಸಂದರ್ಭಗಳಲ್ಲಿಯೂ ರೈತಾಪಿ ಜನರ ಮುಂದೆ ಹೇಳಿದ್ದಾರೆ. ಆ ಒಂದು ಮಾತನ್ನು ಗಮನದಲ್ಲಿಟ್ಟುಕೊಂಡು ಈಗ ವಸೂಲಿ ಕ್ರಮವನ್ನು ಮುಂದುವರಿಸುವುದಕ್ಕೆ ಪ್ರಯತ್ನಮಾಡಬೇಕಾಗಿದೆ. ಏಕೆಂದರೆ, ಸುಮಾರು 1942ನೆಯ ಇಸವಿಯಿಂದ ಇಂದಿನವರೆಗೆ ಹತ್ತು ವರ್ಷ ಕಾಲ ಆಹಾರ ವಸೂಲಿ ಕ್ರಮದಿಂದ ಅನೇಕ ರೈತರು ತೊಂದರೆಗೊಳಗಾಗಿ ಅನೇಕರ ಮೇಲೆ, ಅನೇಕ ಗ್ರಾಮಗಳಲ್ಲಿ ಕೇಸುಗಳನ್ನು ಹಾಕಿ ಇದರಲ್ಲಿ ಕೆಲವರಿಗೆ ಬಹಳ ತೊಂದರೆ ಕೂಡ ಆಗಿದೆ, ನಮ್ಮ ಮಾಗಡಿ ತಾಲ್ಲೂಕಿನಲ್ಲೇ ಸುಮಾರು ನಾನೂರು ಆಹಾರ ಕೇಸುಗಳನ್ನು ಹಾಕಿದ್ದರು. ಸರ್ಕಾರದವರು ಪ್ರವೇಶಿಸಿದ್ದರಿಂದ ವಾಪಸು ತೆಗೆದುಕೊಳ್ಳಬೇಕಾಗಿ ಬಂತು. ಈ ಸಂಬಂಧವಾಗಿ ಹತ್ತು ಇಪ್ಪತ್ತು ಸಾರಿ ರೈತರು ಕೋರ್ಟುಗಳಿಗೆ ಹೋಗಬೇಕಾಗಿ ಬಂದಿದ್ದರಿಂದ ಅವರಿಗೆ ತೊಂದರೆಯಾಗಿದೆ. ಇಂಥಾ ತೊಂದರೆಗಳಾಗುತ್ತಿವೆ. ಈ ವಸೂಲಿ ಕ್ರಮದಲ್ಲಿ ಹಿಂದೆ ಇದೇ ಸಭೆಯಲ್ಲಿ ಮಾನ್ಯ ಸಚಿವರಾಗಿದ್ದ ಶ್ರೀ. ಮರಿಯಪ್ಪನವರು ಕೂಡ ಕೆಲವು ಸಲಹೆಗಳನ್ನು ಕೊಟ್ಟಿದ್ದಾರೆ. ಅವರು ಹೇಳಿದ ಕೆಲವು ಸಲಹೆಗಳು ಸಾಧುವಾಗಿದ್ದರೂ ಐದು ವರ್ಷದ ಸರಾಸರಿ ತೆಗೆದುಕೊಳ್ಳಬೇಕೆಂದು ಹೇಳಿದ್ದಾರೆ. ಹೀಗೆ ಸರಾಸರಿಯನ್ನು ಹಾಕಿದರೆ, ಈ ವರ್ಷ ಸುಮಾರು ನಾಲ್ಕು, ಐದು ಜಿಲ್ಲೆಗಳಲ್ಲಿ ಆಹಾರ ಧಾನ್ಯಗಳನ್ನು ಬೆಳೆದೇ ಇಲ್ಲ. ಇಂಥ ಸಂದರ್ಭದಲ್ಲಿ ವಸೂಲಿ ಕ್ರಮವನ್ನು ಕೈಕೊಳ್ಳುವಾಗ ಎಷ್ಟು ಕಷ್ಟ ಎಂಬುದನ್ನು ಸರ್ಕಾರದವರು ಪರ್ಯಾಲೋಚನೆ ಮಾಡಬೇಕಾಗಿದೆ. ಅಲ್ಲದೆ ಆಹಾರ ಧಾನ್ಯವನ್ನು ಕೊಂಡುಕೊಳ್ಳುವ ವಿಚಾರದಲ್ಲಿ ಯಾವ ಬೆಲೆಗೆ ಕೊಂಡುಕೊಳ್ಳುತ್ತಾರೆಂಬುದನ್ನು ಹೇಳಿಲ್ಲ. ರಾಗಿಯನ್ನು ಪಲ್ಲಕ್ಕೆ 30 ರೂಪಾಯಿಗಳಂತೆಯೂ ಭತ್ತವನ್ನು ಪಲ್ಲಕ್ಕೆ 25 ರೂಪಾಯಿಗಳಂತೆಯೂ ತೆಗೆದುಕೊಳ್ಳಲು ಸರ್ಕಾರದವರು ಮನಸ್ಸು ಮಾಡಬೇಕೆಂದು ನನ್ನ ಸೂಚನೆಯನ್ನು ಈ ಸಂದರ್ಭದಲ್ಲಿ ಸರ್ಕಾರದವರಿಗೆ ಕೊಡುತ್ತೇನೆ. ಏಕೆಂದರೆ ರೈತ ಬಹಳ ಕಷ್ಟಪಟ್ಟು ಆಹಾರ ಧಾನ್ಯ ಬೆಳೆದು ಸರ್ಕಾರಕ್ಕೆ ಕೊಡಬೇಕಾಗಿದೆ. ಅಲ್ಲದೆ, ಕೆಲವು ಕಡೆ ಗೋಧಿ, ಕೆಲವು ಕಡೆ ಹತ್ತಿ, ಕೆಲವು ಕಡೆ ಕಬ್ಬು, ಆಲೂಗಡ್ಡೆ, ತೆಂಗು ಮುಂತಾದ ಬೆಳೆಗಳನ್ನು ಬೆಳೆದು ಜನರು ಹೆಚ್ಚು ಹಣ ಸಂಪಾದನೆ ಮಾಡಿಕೊಳ್ಳುತ್ತಾರೆ. ರಾಗಿ ಬತ್ತ ಬೆಳೆಯುವವರಿಗೆ ಹೆಚ್ಚು ಹಣ ಬರುವುದಿಲ್ಲ. ಆದಕಾರಣ ರಾಗಿ. ಬತ್ತ. ಬೆಳೆಯುವ ರೈತರಿಗೆ ಹೆಚ್ಚು ಹಣ ಕೊಟ್ಟರೆ ಅವರ ಮನಸ್ಸಿಗೆ ನೋವಾಗದೆ ಆಹಾರ ದವಸವನ್ನು ರೈತರು ಕೊಡುವುದಕ್ಕೆ ಮನಸ್ಸು ಮಾಡುತ್ತಾರೆಂದು ಈ ಸಂದರ್ಭದಲ್ಲಿ ನಾನು ಸೂಚನೆ ಕೊಡಬೇಕಾಗಿದೆ. ಏನೇ ಆಗಲಿ ಸಂಸ್ಥಾನಾದ್ಯಂತವೂ

ಅನೇಕ ಕಡೆಗಳಲ್ಲಿ ಕ್ಷಾಮ ಪರಿಸ್ಥಿತಿಯುಂಟಾಗಿರುವ ಈ ಸಂದರ್ಭದಲ್ಲಿ ಮೂರು ಪಟ್ಟಣಗಳಲ್ಲಿರುವ ಜನರಿಗೆ ಮಾತ್ರ ಸರ್ಕಾರದವರು ಆಹಾರ ಒದಗಿಸುತ್ತೇವೆಂದು ಹೇಳಿದ್ದಾರೆ. ಆದರೆ ಇನ್ನು ಮಿಕ್ಕ ಕಡೆ ಏನು ಮಾಡುತ್ತಾರೆಂಬುದನ್ನು ತಿಳಿಸಿಲ್ಲ.

ಆಹಾರ ವಸೂಲಿಯಲ್ಲಿ ದೊಡ್ಡ ದೊಡ್ಡ ರೈತರು ಮತ್ತು ಸರ್‌ಪ್ಲಸ್ ಹೋಲ್ಡರುಗಳಿಂದ ಮಾತ್ರ ಧಾನ್ಯ ವಸೂಲು ಮಾಡುತ್ತೇವೆಂದೂ ಮಿಕ್ಕವರನ್ನು ಬಿಡುತ್ತೇವೆಂದೂ ಹೇಳುವುದಾದರೆ, ಒಂದು ಊರಿನಲ್ಲಿ 90 ಜನ ಬಡವರು ಹತ್ತು ಜನ ಬೆಳೆಯುವವರು ಇರುತ್ತಾರೆ. ಈ 90 ಜನರಿಗೆ ಆಹಾರ ಒದಗಿಸುವುದಕ್ಕೆ ಸರ್ಕಾರದವರು ಖಂಡಿತವಾಗಿ ಮನಸ್ಸು ಮಾಡಬೇಕಾಗುತ್ತದೆ. ಏಕೆಂದರೆ ಇದುವರೆಗೂ ಫೇರ್‌ಪ್ರೈಸ್ ಡಿಪೋಗಳಲ್ಲಿ ಹಳ್ಳಿಯವರಿಗೆ ದವಸ ಕೊಡುತ್ತೇವೆಂದು ಹೇಳಿ ಅವರಿಗೆ ಸಮರ್ಪಕವಾದ ರೀತಿಯಲ್ಲಿ ಆಹಾರ ಒದಗಿಸಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಇನ್ನು ಮುಂದೆ ಈ ರೀತಿ ಮಾಡುವುದು ಸಾಧ್ಯವಿಲ್ಲ. ಏಕೆಂದರೆ ಅನೇಕ ತಾಲ್ಲೂಕುಗಳಲ್ಲಿ ಹಳ್ಳಿಗಳಲ್ಲಿ ಕ್ಷಾಮಪರಿಸ್ಥಿತಿ ಉಂಟಾಗಿರುವುದು ಮಾನ್ಯ ಸಭಾ ಸದಸ್ಯರಿಗೂ ಸರ್ಕಾರದವರಿಗೂ ಗೊತ್ತಿರುವ ವಿಷಯ. ಆದಕಾರಣ ಈ ಸಂದರ್ಭದಲ್ಲಿ ಆಹಾರವನ್ನು ಎಲ್ಲರಿಗೂ ಕೊಡಬೇಕಾಗುತ್ತದೆ. ಅಂದ ಮೇಲೆ ಕಮ್ಯಾಂಡಿಯರಿಂಗ್ ಪದ್ಧತಿ ಇದ್ದ ಹಾಗಾಗುತ್ತದೆ.

ದವಸವನ್ನು ವಸೂಲುಮಾಡಿದ ಮೇಲೆ, ಪ್ರಜೆಗಳಿಗೆ ಜವಾಬ್ದಾರಿಯಾದ ಸರ್ಕಾರವಾಗಿರುವಾಗ ಎಲ್ಲಾ ಪ್ರಜೆಗಳ ವಿಷಯವನ್ನೂ ಗಮನದಲ್ಲಿಟುಕೊಂಡು, ಹೊರಗಿನಿಂದ ಎಷ್ಟು ತರಿಸಬೇಕು, ಇಲ್ಲಿ ಎಷ್ಟು ವಸೂಲು ಮಾಡಬೇಕೆಂದು ಗೊತ್ತುಮಾಡಬೇಕು. ಏನೇ ಆಗಲಿ ನಮ್ಮ ಸಂಸ್ಥಾನದಲ್ಲಿ ಕೊಂಡುಕೊಳ್ಳುವ ಧಾನ್ಯಕ್ಕೆ ಹೆಚ್ಚು ಬೆಲೆ ಕೊಡುವ ವಿಚಾರದಲ್ಲಿ ಇಂಡಿಯಾ ಸರ್ಕಾರದವರು ವಿರೋಧಿಸುವುದಿಲ್ಲ. ಏಕೆಂದರೆ, ಅವರಿಂದ ತಂದು ಮಾರುವಾಗ ಹೆಚ್ಚಿನ ಬೆಲೆಗೆ ತಂದು ಅದರಿಂದಾಗುವನಷ್ಟ ಸರ್ಕಾರದ ಮೇಲೆ ಬೀಳುತ್ತದೆ. ಹೀಗಿರುವಾಗ ಇಲ್ಲಿ ರೈತರಿಗೆ ಹೆಚ್ಚು ಬೆಲೆ ಕೊಡುವುದರಲ್ಲಿ ಸರ್ಕಾರಕ್ಕೆ ನಷ್ಟವಾಗುವುದಿಲ್ಲ. ಅಲ್ಲಿಂದ ತರಿಸಲು ತಗಲತಕ್ಕ ವ್ಯಾಗನ್ ಖರ್ಚು ಉಳಿಯುತ್ತದೆ; ಅಲ್ಲದೆ ಹೊರಗಿನಿಂದ ದವಸವನ್ನು ತರುವುದಕ್ಕಾಗಿ ಇಲ್ಲಿನ ಅಧಿಕಾರಿಗಳನ್ನು ಕಳುಹಿಸುವುದಕ್ಕಾಗುವ ಖರ್ಚು ಉಳಿಯುತ್ತದೆ. ಇದನ್ನೆಲ್ಲಾ ಸರ್ಕಾರ ಆಲೋಚನೆ ಮಾಡಬೇಕು. ರೈತರ ಮೇಲೆ ಇನ್ನು ಕಮ್ಯಾಂಡಿಯರಿಂಗ್ ಉಳಿದುಕೊಂಡಿದೆ ಎಂದು ರೈತರಿಗೆ ಅರ್ಥವಾಗುತ್ತದೆ. ಆದುದರಿಂದ ಸರ್ಕಾರದವರು ತಮ್ಮ ಆಹಾರ ನೀತಿಯನ್ನು, ವಸೂಲಿ ಕ್ರಮ,

ಎಷ್ಟು ತರಿಸುತ್ತಾರೆ. ಬಡಜನರಿಗೆ ಒದಗಿಸುವುದಕ್ಕೆ ಏನು ವ್ಯವಸ್ಥೆಮಾಡುತ್ತಾರೆ ಎಂಬ ಅಂಶವನ್ನೆಲ್ಲಾ ಸಭೆಯ ಮುಂದಿಟ್ಟಿದ್ದರೆ, ನಾವು ಅದರ ಮೇಲೆ ನಮ್ಮ ಅಭಿಪ್ರಾಯ ಕೊಡುವಾಗ ಕೆಲವು ವಿಷಯಗಳನ್ನು ತಿಳಿಸುವುದಕ್ಕೆ ಅವಕಾಶವಾಗುತ್ತಿತ್ತು. ಹಾಗೆ ಮಾಡದೆ ಮೊಗುಂ ಆಗಿ ಹೇಳಿದ್ದಾರೆ. ಮಾನ್ಯ ಸದಸ್ಯರು ಹೇಳಿದ ಹಾಗೆ ಮಾಡಿದ್ದೇವೆಂದು ದೇಶಕ್ಕೆ ತಿಳಿಸುವುದಕ್ಕೆ ಸರ್ಕಾರದವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲವೆಂದು ಅರ್ಥವಾಗುತ್ತದೆ. ಆದುದರಿಂದ ನಾನು ಈ ಸಂದರ್ಭದಲ್ಲಿ ಈ ಸಭೆಯ ಮೂಲಕ ಸರ್ಕಾರಕ್ಕೆ ತಿಳಿಸುವುದಿಷ್ಟೇ; ಆಹಾರವನ್ನು ಬೆಳೆದು ಕೊಡುವ ಜನರಿಗೆ ಹೆಚ್ಚು ಬೆಲೆಯನ್ನು ಕೊಡುವುದು ನ್ಯಾಯ. ಸಂಸ್ಥಾನಾದ್ಯಂತ ಬಡಜನರನ್ನು ದೃಷ್ಟಿಯಲ್ಲಿಟ್ಟು ಕೊಂಡು ಶೇಖರಣೆ ಮಾಡುವುದಲ್ಲದೆ, ಹೊರಗಿನಿಂದ ತರಿಸಿ, ಯಾವ ಹಳ್ಳಿಯಲ್ಲಿಯೂ ಆಹಾರ ಒದಗಿಸಿಲ್ಲವೆಂಬ ಕೂಗು ಬಾರದೆಯಿರುವ ರೀತಿಯಲ್ಲಿ ಏರ್ಪಾಡು ಮಾಡುವುದಾಗಿ ಇನ್ನು ಮುಂದೆ ಒಂದು ವರ್ಷ ಕಾಲದವರೆಗೆ ಸರ್ಕಾರ ಭರವಸೆ ಕೊಡಬೇಕಾಗುತ್ತದೆ. ಆ ಭರವಸೆಯನ್ನು ಕೊಡುವುದಲ್ಲದೆ, ಪೂರ್ತಿಯಾಗಿ ದೇಶದ ಆಹಾರ ಭದ್ರತೆ ಮತ್ತು ಕ್ಷಾಮ ಪರಿಸ್ಥಿತಿಯಿರುವ ಜಿಲ್ಲೆಗಳ ಭದ್ರತೆಯನ್ನು ಕಾಪಾಡುವುದು ಸರ್ಕಾರದವರ ಮಡಿಲಿಗೆ ಬಿದ್ದಿದೆ. ಇದನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಎಲ್ಲಾ ಪ್ರಜೆಗಳಿಗೂ ಆಹಾರವನ್ನೊದಗಿಸುವ ವ್ಯವಸ್ಥೆಯನ್ನು ಯಾವ ರೀತಿ ಮಾಡುತ್ತಾರೆಂಬುದನ್ನು ಅವರು ಸಭೆಗೆ ತಿಳಿಸಬೇಕೆಂದು ಹೇಳಿ, ನನಗೆ, ಈ ರೀತಿ ನಾಲ್ಕಾರು ವಿಷಯಗಳನ್ನು ತಿಳಿಸಲು ಅವಕಾಶ ಕೊಟ್ಟದ್ದಕ್ಕಾಗಿ ಅಧ್ಯಕ್ಷರನ್ನು ಸದಸ್ಯರನ್ನು ವಂದಿಸುತ್ತೇನೆ.

## ಆಸ್ಪತ್ರೆಗಳ ಸುಧಾರಣೆ; ವೈದ್ಯರ ಸಂಬಳ ಹೆಚ್ಚಿಸಿ.

**26ನೇ ಫೆಬ್ರವರಿ 1955.**

ಸ್ವಾಮಿ, ಈ ಜಿಲ್ಲಾ ಬೋರ್ಡುಗಳ ಕೈಕೆಳಗೆ ಕೆಲಸ ಮಾಡುತ್ತಿರುವಂಥ ಆಯುರ್ವೇದ ಮತ್ತು ಯುನಾನಿ ಆಸ್ಪತ್ರೆಗಳ ಹಾಗೂ ಆ ಔಷಧಿಗಳ ವಿಚಾರದಲ್ಲಿ ಈಗಾಗಲೇ ಅನೇಕ ಮಾನ್ಯ ಸದಸ್ಯರುಗಳು ಅನೇಕ ವಿಚಾರಗಳನ್ನು ತಮ್ಮ ಗಮನಕ್ಕೆ ತಂದಿರುತ್ತಾರೆ. ಆದರೆ ನಾನೂ ಕೂಡ ಕೆಲವು ಕಾಲ ಜಿಲ್ಲಾ ಬೋರ್ಡಿನಲ್ಲಿ ಒಬ್ಬ ಸದಸ್ಯನಾಗಿದ್ದೆ. ನನಗೂ ಸಹ ಇದರ ಬಗ್ಗೆ ಕೊಂಚ ಅನುಭವವಿದೆ. ಈ ಆಸ್ಪತ್ರೆಗಳಲ್ಲಿ ಕೆಲಸಮಾಡತಕ್ಕಂಥ ವೈದ್ಯರುಗಳಿಗೆ ಕೊಡತಕ್ಕಂಥ ವೇತನವಾದರೂ ಎಷ್ಟು? ತಿಂಗಳಿಗೆ ಔಷಧಿಗಾಗಿ 15 ರೂಪಾಯಿಗಳು ಮತ್ತು ಅವರಿಗೆ 35 ರೂಪಾಯಿಗಳ ವೇತನ

ಹೀಗೆ ಇವರಿಗೊಂದು ವೇತನ ಕೊಡಬೇಕೆಂಬುದಾಗಿ 1955 ರಲ್ಲೇ ಒಂದು ಕಾನೂನಾಯಿತು. ಆದರೆ ಆಗಿನಿಂದಲೂ ಈ ಕೆಲಸಕ್ಕೆ ಯಾರೂ ಬರುತ್ತಿಲ್ಲ. ಕಾರಣವೇನೆಂದರೆ ಅವರು ಒಂದೊಂದು ಕಾಯಿಲೆಯನ್ನು ಗುಣಪಡಿಸಿದರೆ 50–100 ರೂಪಾಯಿಗಳನ್ನು ತೆಗೆದುಕೊಳ್ಳುತ್ತಾರೆ. ಅಂಥ ಸಂದರ್ಭಗಳಿರುವುದರಿಂದ ಈ ಕೆಲಸಕ್ಕೆ ಇಷ್ಟು ಅಲ್ಪವೇತನಕ್ಕೆ ಯಾರು ಬರುವುದಿಲ್ಲ. ಈ ಹಿಂದೆ ಈ ಆಯುರ್ವೇದ ಆಸ್ಪತ್ರೆಗಳಲ್ಲಿ ಕೆಲಸಮಾಡತಕ್ಕ ಬಗ್ಗೆ ವೈದ್ಯರನ್ನು ತರತಕ್ಕ ಪ್ರಯತ್ನದಲ್ಲಿ ಎಷ್ಟೋ ಕೆಲಸಗಳನ್ನು ಮಾಡಲಾಯಿತು. ಆದಾಗ್ಯೂ ಆ ಆಸ್ಪತ್ರೆಗಳಲ್ಲಿ ಕೆಲಸ ನಡೆಸಲು ವೈದ್ಯರೇ ಬರಲಿಲ್ಲ. ಇದಕ್ಕೆ ಇರತಕ್ಕಂಥ ಮುಖ್ಯ ಕಾರಣ ವೇತನ ತೀರ ಕಡಿಮೆ ಎಂಬುದು. ಆದಕಾರಣ ಇವರಿಗೆ ಒಂದು ಸರಿಯಾದ ರೀತಿಯಲ್ಲಿ ವೇತನಕೊಡುವಂತೆ ಮೊದಲು ಏರ್ಪಾಡಾದರೆ ಆಗ ಅವರು ತಮಗೆ ತಾವೇ ಬರುತ್ತಾರೆ.

ಇನ್ನು ಎರಡನೆಯದಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಈ ಆಸ್ಪತ್ರೆಗಳನ್ನು ತೆರೆಯಲು ಎಲ್.ಎಫ್. ಡಿಸ್ಪೆನ್ಸರಿಗಳ ಮಾದರಿಯಲ್ಲಿರತಕ್ಕಂಥ ಮನೆಗಳು ಇವುಗಳಿಗೆ ದೊರೆಯುವುದಿಲ್ಲ. ಅಲ್ಲಿ ಅಂಥಮನೆಗಳು ಸಹ ಇಲ್ಲ ಒಂದು ವೇಳೆ ಇದ್ದರೂ ಕೂಡ ಅಂಥ ಮನೆಗಳನ್ನು ಯಾರೂ ಇವರು ಕೊಡತಕ್ಕಂಥ 2 ರೂಪಾಯಿಗಳ ಬಾಡಿಗೆಗೆ ಕೊಡುವುದಿಲ್ಲ. ಈ 2 ರೂಪಾಯಿಗಳಿಗೆ ಇನ್ನು ಎಂಥ ಮನೆ ಬಾಡಿಗೆಗೆ ಸಿಕ್ಕೀತು ಎಂಬುದನ್ನು ತಾವೆಲ್ಲರೂ ಊಹಿಸಿಕೊಳ್ಳಬಹುದು.

ಯಾವಾಗ ಹೀಗೆ ಈ ವೈದ್ಯರಿಗೆ ಕೊಡತಕ್ಕ ಸಂಬಳವನ್ನು ಕಡಿಮೆ ಮಾಡಿಬಿಟ್ಟರೋ ಆಗ ಸರಿಯಾಗಿ ತರಪೇತಾದಂಥ ವೈದ್ಯರುಗಳು ಈ ಕೆಲಸಕ್ಕೆ ಬಾರದೆ ಹೋಗಿ ಅಲ್ಪ ಅನುಭವವನ್ನು ಪಡೆದವರು ಈ ಕೆಲಸಕ್ಕೆ ಬಂದುದರಿಂದ ಅವರಿಗೆ ಅನೇಕ ವೇಳೆ ಆ ಔಷಧಿಗಳನ್ನು ಕೂಡ ಚೆನ್ನಾಗಿ ಪರೀಕ್ಷೆ ಮಾಡುವುದು ಬರುವುದಿಲ್ಲ. ಅನೇಕರಿಗೆ ಆ ಜಾಪಾಳವನ್ನು ಶುದ್ಧಿಮಾಡುವುದು ಕೂಡ ಗೊತ್ತಿಲ್ಲ. ಕಡಿಮೆ ಸಂಬಳಕ್ಕೆ ಸರಿಯಾಗಿ ಸಿಕ್ಕಿದ್ದಾರೆಂದು ಇಂಥ ವೈದ್ಯರನ್ನು ಅವರು ನೇಮಿಸಿಕೊಂಡಿರುವುದರಿಂದ ಆಗಬೇಕಾದ ಅನುಕೂಲಕ್ಕೆ ಪ್ರತಿಯಾಗಿ ಅನಾನುಕೂಲಗಳೇ ಹೆಚ್ಚಾಗಿವೆ ಇದನ್ನೆಲ್ಲಾ ತಾವೀಗ ಸರಿಪಡಿಸಬೇಕು. ಜಿಲ್ಲಾ ಪ್ರದೇಶಗಳಲ್ಲಿ ವೈದ್ಯಕೀಯ ಸಹಾಯ ಬಹಳ ಅಗತ್ಯವಾಗಿ ಬೇಕಾಗಿದೆ. ನಮಗೆ ಪ್ರಜಾ ಸರ್ಕಾರ ಬಂದ ಮೇಲಾದರೂ ನಾವು ಪ್ರಜೆಗಳ ಯೋಗಕ್ಷೇಮವನ್ನು ನೋಡಿಕೊಳ್ಳದೆ ಹೋದರೆ ಇದು ಎಂಥ ಅನ್ಯಾಯ! ಆದುದರಿಂದ ಸರ್ಕಾರದವರು

ಈ ಜಾಬಿಗೆ ಇನ್ನಾದರೂ ಹೆಚ್ಚಿಗೆ ನಿಗಾಕೊಟ್ಟು ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರ ತಕ್ಕಂಥವರನ್ನೇ ಈ ಕೆಲಸಗಳಿಗೆ ನೇಮಿಸಬೇಕೆಂದು ನಾನು ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಮತ್ತು ಇಂಥ ಒಂದು ಉಪಯುಕ್ತ ವಿಷಯವನ್ನು ಇಲ್ಲಿ ಚರ್ಚೆಗೆ ತಂದು ಇಷ್ಟು ಮಾತನಾಡಲು ಅವಕಾಶ ಕಲ್ಪಿಸಿಕೊಟ್ಟಂಥ ಮಾನ್ಯ ಅಧ್ಯಕ್ಷರನ್ನೂ ಸಹ ನಾನು ವಂದಿಸುತ್ತೇನೆ.

## ಬಡವರಿಗೆ ಸಾಲ ಕೊಡಿ

13ನೇ ಮಾರ್ಚ್ 1955.

ಸ್ವಾಮಿ, ನಮ್ಮ ಮುಂದೆ ಮಂಡಿಸಿರತಕ್ಕಂಥ Land Revenue Demand ನ ವಿಚಾರವಾಗಿ ಕೆಲವು ವಿಷಯಗಳನ್ನು ತಮ್ಮ ಮೂಲಕ ಸರ್ಕಾರದವರ ಗಮನಕ್ಕೆ ತರುವುದಕ್ಕೆ ನಾನು ಪ್ರಯತ್ನ ಪಡಬೇಕೆಂದಿದ್ದೇನೆ. ಒಂದನೆಯದಾಗಿ acquisition ಕ್ರಮ ಈ ಸಂಸ್ಥಾನದಲ್ಲಿ ಒಂದು ವರ್ಷದಿಂದ 20 ವರ್ಷಗಳವರೆಗೂ acquisition ಗೋಸ್ಕರ ಪ್ರಯತ್ನ ಪಟ್ಟರೂ ಕೂಡ ಅದು ನಿಧಾನವಾಗುತ್ತಾ ಇರುವ ವಿಷಯ ತಮಗೂ ಸರ್ಕಾರಕ್ಕೂ ಗೊತ್ತಿದೆ. ಆದ್ದರಿಂದ ಈಗ ಇರತಕ್ಕಂಥ acquisition ಪದ್ಧತಿಯನ್ನು ಬದಲಾವಣೆ ಮಾಡಿ ತಕ್ಷಣ acquisition ಕ್ರಮ ಕನಿಷ್ಠ ಪಕ್ಷ 6 ತಿಂಗಳಲ್ಲಿ ಆದರೂ ಮುಗಿದು ಯಾವ ಉದ್ದೇಶಕ್ಕಾಗಿ acquisition ಬೇಕು ಎಂದು ಹೇಳುತ್ತೇವೋ ಆ ಉದ್ದೇಶ ನೆರವೇರುವಂತೆ ಮಾಡಬೇಕು. ಇನ್ನೊಂದು ವಿಚಾರವನ್ನು ಅವರ ಗಮನಕ್ಕೆ ತರಬೇಕಾಗಿದೆ. ಪ್ರಜಾ ಸರ್ಕಾರ ಬಂದು 8 ವರ್ಷವಾದರೂ ಸಂಸ್ಥಾನಾಮಳೆ ಅಮಲ್ದಾರರು ತಮ್ಮ ಕರ್ತವ್ಯವೇನೆಂಬುದನ್ನು ಅರಿತು ಕೆಲಸ ಮಾಡುತ್ತಿಲ್ಲ, ನಾವು ಚುನಾವಣೆ ಕಾಲದಲ್ಲಿಯೂ ಮತ್ತು ಅದಕ್ಕಿಂತ ಮುಂಚಿತವಾಗಿ ಜನಗಳ ಮುಂದೆ ಅವರಿಗೆ ಏನೇನು ಅನುಕೂಲಗಳನ್ನು ಕಲ್ಪನೆ ಮಾಡುತ್ತೇವೆಂದು ಪ್ರಾರ್ಥನೆ ಮಾಡುತ್ತಿದ್ದೆವೋ ಆ ಪ್ರಾರ್ಥನೆಗಳ ಫಲ ತಾಲ್ಲೂಕ್ ಲೆವಲ್‌ನಲ್ಲಿ ಜನಗಳಿಗೆ ಸಿಕ್ಕುತ್ತಾ ಇಲ್ಲ. ಏತಕ್ಕೆಂದರೆ ತಮಗೆಲ್ಲರಿಗೂ ಗೊತ್ತಿರುವ ರೀತಿಯಲ್ಲಿ ಸುಮಾರು 8–10 ಅರ್ಜಿಗಳು ಪ್ರತಿಯೊಂದು ಗ್ರಾಮದಲ್ಲೂ ಇರುತ್ತವೆ. ತಾಲ್ಲೂಕ್ ಅಮಲ್ದಾರರು ಪ್ರವಾಸ ಮಾಡತಕ್ಕಂಥ ಕಾಲದಲ್ಲಿ 20 ದಿನಗಳ ಕಾಲ ತಾಲ್ಲೂಕಿನೊಳಗೆ ಪ್ರವಾಸ ಮಾಡಬೇಕು ಎಂಬ ಕಾನೂನು ಇದೆ. ಈ ಅಧಿಕಾರಿ ಮತ್ತೆ ಪ್ರವಾಸ ಮಾಡುವಾಗ ಯಾವ ಯಾವ ಗ್ರಾಮಕ್ಕೆ ಅವರು ದಯಮಾಡಿಸುತ್ತಾರೋ ಹಾಗೆ ದಯಮಾಡಿಸುವ ಗ್ರಾಮಗಳಲ್ಲಿ ಕೂತು ಗ್ರಾಮದಲ್ಲಿ ಡಂಗುರಹಾಕಿ ಅಲ್ಲಿ ಎಲ್ಲಾ ತರಹ ಅರ್ಜಿಗಳನ್ನು ತೆಗೆದುಕೊಂಡು ಫೈಸಲ್ ಮಾಡುವುದರಿಂದ ಪ್ರಜೆಗಳ ಹಕ್ಕು

ಬಾಧ್ಯತೆಗಳನ್ನು ಕಾಪಾಡಿದಂತೆ ಆಗುತ್ತದೆ, ಮತ್ತು ಪ್ರಜಾಸರ್ಕಾರ ಬಂದ ಮೇಲೆ ಅವರ ಸೌಲಭ್ಯವನ್ನು ನಡೆಸಿದಂತಾಗುತ್ತದೆ, ಮತ್ತು ಲಂಚರುಷುವತ್ತಿನ ಹಾವಳಿ ತಪ್ಪುತ್ತದೆ, ಎಂದು ಈ ಸಂದರ್ಭದಲ್ಲಿ ಹೇಳಲು ಇಷ್ಟಪಡುತ್ತೇನೆ. ಬಡರೈತ ಒಂದು ವಿಷಯವಾಗಿ ಅರ್ಜಿ ತೆಗೆದುಕೊಂಡು ಹೋದರೆ, ಅದರ ಪ್ರಯೋಜನವನ್ನು ಹೊಂದಬೇಕಾದರೆ 2–3 ವರ್ಷಗಳ ಕಾಲ ಬೇಕಾಗುತ್ತದೆ ಮತ್ತು ಅರ್ಜಿ ಫೈಸಲಾತಿ ಆಗುವ ಹೊತ್ತಿಗೆ ತನ್ನಲ್ಲಿರತಕ್ಕಂಥ ಆಸ್ತಿಪಾಸ್ತಿಗಳು ಕಳೆದುಕೊಂಡು ಅವನು ಯಾವ ಉದ್ದೇಶಕ್ಕಾಗಿ ಅರ್ಜಿಯನ್ನು ಹಾಕಿಕೊಂಡಿದ್ದಾನೋ ಅದು ಸಫಲವಾಗುವುದಿಲ್ಲ. ಇದು ಎಲ್ಲಾ ಅಧಿಕಾರಿಗಳಿಗೂ ಮತ್ತು ನಮ್ಮ ಮಂತ್ರಿವರ್ಗದವರಿಗೂ ಕೂಡ ಗೊತ್ತಿರತಕ್ಕಂಥ ವಿಷಯ. ಇದು ಬಹಳ ಪ್ರಾಮುಖ್ಯವಾದುದು. ಆದ್ದರಿಂದ ಮಂತ್ರಿಮಂಡಲದವರು ಈ ತಾಲ್ಲೂಕ್ ಲೆವಲ್‌ನಲ್ಲಿ ಪ್ರಜೆಗಳಿಗೆ ಅನುಕೂಲಗಳು ದೊರೆಯುವ ಹಾಗೆ ಮಾಡಿಕೊಡಬೇಕು. ಏತಕ್ಕೆಂದರೆ ಸರ್ಕಾರದಲ್ಲಿ ಮಾಡತಕ್ಕ ಎಲ್ಲಾ ಕಾನೂನುಗಳು ಕೂಡ ಅಮಲ್ದಾರರ ಮೂಲಕ, Sub-division officer ಮೂಲಕ, ಜಿಲ್ಲಾಧಿಕಾರಿಗಳ ಮೂಲಕ ಪ್ರಜೆಗಳಿಗೆ ಸೇರಬೇಕಾಗಿದೆ. ಇಂತಹ ಕಾಲದಲ್ಲಿ ಪ್ರಜೆಗಳಿಗೆ ಏನೇನು ಅನುಕೂಲಗಳನ್ನು ನಮ್ಮ ಸರ್ಕಾರದವರು ಮಾಡಿಕೊಡಬೇಕೆಂದು ಹೆಚ್ಚಿನ ಉತ್ಸಾಹದಲ್ಲಿದ್ದಾರೋ ಅವರು ಅವರ ಕೈಗೆ ದೊರಕುವ ಹಾಗೆ ತಕ್ಷಣ ವಿಲೇವಾರಿ ಆಗಬೇಕೆಂದು ಪ್ರಾರ್ಥಿಸುತ್ತೇನೆ. ತಕಾವಿಸಾಲ, ಮನೆ, ವಗೈರೆ ತೆಗೆದುಕೊಳ್ಳುವುದಕ್ಕೆ ಕೊಡತಕ್ಕಂಥ ಮುಫತ್ತು ಸಾಲ, ಹೀಗೆ ಅನೇಕ ಸಾಲಗಳನ್ನು ಸರಕಾರದವರು ಹೆಚ್ಚಿನ ರೀತಿಯಲ್ಲಿ ದೊರೆಯುವಂತೆ ಮಾಡಿ ಪ್ರಜೆಗಳಿಗೆ ಅನುಕೂಲ ಮಾಡಿಕೊಡಬೇಕೆಂದು ಸರ್ಕಾರದವರು ಹೊರಟಿರುವುದು ಗೊತ್ತಿದೆ. ಎಲ್ಲಾ ಸಾಲಗಳು ಕೂಡ ಪ್ರಜೆಗಳಿಗೆ ಸುಸೂತ್ರವಾಗಿ ಸಿಕ್ಕಬೇಕಾದರೆ ತಾಲ್ಲೂಕು ಅಮಲ್ದಾರರು ಪ್ರತಿ ಹಳ್ಳಿಗೂ ಸಂಬಂಧಪಟ್ಟ ರಿಕಾರ್ಡುಗಳನ್ನು ತೆಗೆದುಕೊಂಡು ಹೋಗಿ ಅಲ್ಲಿ ವ್ಯವಸ್ಥೆ ಮಾಡುವುದರಿಂದ ಹೆಚ್ಚಿನ ಪ್ರಯೋಜನವಾಗುತ್ತದೆ ಎಂದು ಹೇಳುತ್ತೇನೆ.

ಸಂಸ್ಥಾನಾಮುಳೆ ಈಗ 3 ಕೋಟಿ ರೂಪಾಯಿಗಳ ಸಾಲವೆತ್ತಬೇಕೆಂದು ಮೈಸೂರು ಸರ್ಕಾರದವರು ಮನಸ್ಸು ಮಾಡಿದ್ದಾರೆ. ಶ್ರೀಮಾರ್ವೆಂಕಟಪ್ಪನವರು ಹೇಳಿದಂತೆ, ಶ್ಯಾನುಭೋಗ ಪಟೇಲರುಗಳು ಸರಿಯಾಗಿ ಪೋಡಿ ಪಟ್ಟಿಯನ್ನು ಎಷ್ಟು ವರ್ಷಗಳಾದರೂ ತಯಾರು ಮಾಡುತ್ತಿಲ್ಲ. 20–30 ವರ್ಷಗಳಾದರೂ ಎಷ್ಟೋ ಕಡೆ ಹಕ್ಕುದಾರರ ಪಟ್ಟಿ ವಗೈರೆ ಒಂದೂ ಆಗದಿರುವ ಸಂದರ್ಭಗಳಿವೆ. ಇದು ಕೂಡ ಬಹಳ ಅವಶ್ಯಕವಾದ ವಿಚಾರ.

# ಗ್ರಾಮಾಂತರ-ಸಂಚಾರಿ ಆಸ್ಪತ್ರೆ

**18ನೇ ಮಾರ್ಚ್ 1955.**

ಸ್ವಾಮಿ, ಇತರ ಸಂಸ್ಥಾನಗಳಿಗಿಂತ ನಮ್ಮ ಸಂಸ್ಥಾನದಲ್ಲಿ ಜನ ಸಾಮಾನ್ಯರಿಗೆ ವೈದ್ಯ ಸಹಾಯವನ್ನು ಬಹಳ ಹೆಚ್ಚಿನ ಮಟ್ಟದಲ್ಲಿ ಒದಗಿಸುತ್ತಿದ್ದಾರೆ. ದಿನದಿನಕ್ಕೂ ಅಭಿವೃದ್ಧಿಕಾರ್ಯ ಜಾಸ್ತಿಯಾಗಿ ನಡೆಯುತ್ತಿದೆ. ಒಂದು ವಿಷಯವನ್ನು ಮಾತ್ರ ಹೇಳುವುದಕ್ಕೆ ಇಚ್ಛಿಸುತ್ತೇನೆ. ಕನಿಷ್ಟ ರೋಗಿಗಳಿಗೆ ಹೆಚ್ಚಿನ ಸೌಕರ್ಯವನ್ನೊದಗಿಸುವ ಕಾರ್ಯವನ್ನು ಸರ್ಕಾರ ಕೈಗೊಂಡಿಲ್ಲ. ಜನಾರೋಗ್ಯ ಇಲಾಖೆಯ ಡೈರೆಕ್ಟರಾಗಿದ್ದ ಡಾ॥ ಚಂದ್ರಶೇಖರಯ್ಯನರು ಒಂದು ವಿಧಾನವನ್ನೇನೋ ಕಂಡು ಹಿಡಿದರು. ಆದರೆ ಸಂಸ್ಥಾನದಲ್ಲಿ ಇದರಿಂದ ಲಾಭವಾಗಲಿಲ್ಲ. ಈ ವ್ಯಾಧಿ ದಿನದಿನಕ್ಕೆ ಹೆಚ್ಚಾಗುತ್ತಿದೆಯೆಂಬುದು ಎಲ್ಲರಿಗೂ ಗೊತ್ತಿದೆ. ತಕ್ಷಣ ಚಿಕಿತ್ಸೆ ಮಾಡುವಂತೆ ಊರಿನೊಳಗಿರುವ ಆಸ್ಪತ್ರೆಯಲ್ಲಿ ವ್ಯವಸ್ಥೆ ಮಾಡಲು ಸಾಧ್ಯವಾಗುವಂಥ ರೋಗವಿದ್ದಲ್ಲಿ, ಹೊರಗಿಟ್ಟಿರಬೇಕು. ಜನರ ಮಧ್ಯೆ ಕುಷ್ಠರೋಗಿಗಳಿದ್ದರೆ ಇದು ಸಾಂಕ್ರಾಮಿಕವಾಗಿ ಬಾಕಿಯವರಿಗೂ ತಗಲುತ್ತದೆ. ಆದುದರಿಂದ ಸರ್ಕಾರದವರು ಈ ವಿಷಯದಲ್ಲಿ ಹೆಚ್ಚು ಆಸಕ್ತಿವಹಿಸಿ ತಕ್ಕ ವ್ಯವಸ್ಥೆಯನ್ನು ಮಾಡಬೇಕೆಂದು ಹೇಳುತ್ತೇನೆ.

ಗ್ರಾಮಾಂತರಗಳಲ್ಲಿರುವ ಆಸ್ಪತ್ರೆಗಳಲ್ಲಿ ಔಷಧಗಳು ಸರಿಯಾಗಿ ಒದಗುತ್ತಿಲ್ಲ. ಹೆಚ್ಚಿನ ಪ್ರಮಾಣದಲ್ಲಿ ಔಷಧಗಳನ್ನೂ ಡಾಕ್ಟರುಗಳನ್ನೂ ಗ್ರಾಮಾಂತರಗಳಿಗೆ ಕಳುಹಿಸಬೇಕು, ಅಲ್ಲದೆ ಸರಬರಾಜು ಮಾಡುವ ಔಷಧಗಳನ್ನು ಸರಿಯಾಗಿ ಪ್ರಯೋಗ ಮಾಡುವ ಹಾಗೆ ಬಂದೋಬಸ್ತು ಮಾಡಬೇಕು. ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಕುಳಿತುಕೊಳ್ಳುವುದಕ್ಕೂ, ನಿಂತುಕೊಳ್ಳುವುದಕ್ಕೂ ಅವಕಾಶವಿಲ್ಲದಷ್ಟು ರೋಗಿಗಳು ಜಾಸ್ತಿಯಾಗುತ್ತಿದ್ದಾರೆ. ಅಲ್ಲಿಗೆ ಹೆಚ್ಚಿನ ಸೌಕರ್ಯಮಾಡಿಕೊಡಬೇಕು ಮತ್ತು ಅಲ್ಲಿ ಕೆಲಸಮಾಡತಕ್ಕ ಚಿಕ್ಕ ದರ್ಜೆಯ ನೌಕರರಿಗೆ ಈಗಿನ ಮಟ್ಟಕ್ಕಿಂತ ಜಾಸ್ತಿ ಸಂಬಳ ಸಾರಿಗೆ ಕೊಡಬೇಕೆಂದು ಸೂಚಿಸುತ್ತೇನೆ.

ಸಂಚಾರ ಆಸ್ಪತ್ರೆಯೆಂದು ವ್ಯಾನ್ ಮೂಲಕ ಸಂಸ್ಥಾನಾಮಳೆ, ಒಂದೊಂದು ಜಿಲ್ಲೆಗೆ ಒಂದೊಂದು ಅಥವಾ ಎರಡು ಜಿಲ್ಲೆಗಳಿಗೆ ಒಂದರಂತೆ ಸಂಚಾರ ಆಸ್ಪತ್ರೆಗಳನ್ನು ಮಾಡಿ ಸಂಸ್ಥಾನದಲ್ಲಿ ಎಲ್ಲ ಕಡೆಯಾ ವೈದ್ಯ ಸಹಾಯವನ್ನೊದಗಿಸಲು ಮಾಡಿದ ಪ್ರಯತ್ನ ಸಫಲವಾಗಿಲ್ಲ. ತಕ್ಷಣ ಇವುಗಳನ್ನು ಸುವ್ಯವಸ್ಥೆಗೊಳಿಸಿ ಔಷಧಗಳನ್ನು ಈ ಆಸ್ಪತ್ರೆಗಳ ಮೂಲಕ ಜನಸಾಮಾನ್ಯರಿಗೆ ಆಗಿಂದಾಗ್ಗೆ ಒದಗಿಸಿ ಖಾಯಿಲೆಗಳು ನಿವಾರಣೆಯಾಗುವಂತೆ ಏರ್ಪಾಡು ಮಾಡಬೇಕು.

ಹಳ್ಳಿಗಳಿಗೆ ಲೋಕಲ್ ಫಂಡ್ ಡಿಸ್ಪೆನ್ಸರಿಗಳಲ್ಲಿ ಮಿಡ್‌ವೈಫುಗಳನ್ನು ಕೊಟ್ಟು ಒಂದು ಹೊಸ ಪ್ರಯೋಗ ಮಾಡುತ್ತಿದ್ದಾರೆ. ಈಗ ಇದು ಕಡಿಮೆಯಾಗುತ್ತಿದೆ. ಟ್ರೈನಿಂಗ್ ಆಗಿರುವ ಮಿಡ್‌ವೈಫ್ ಗಳನ್ನು ಕೆಲವು ಹಳ್ಳಿಗಳಿಗೆ ಒಬ್ಬೊಬ್ಬರಂತೆ ನೇಮಕಮಾಡಿ, ಸಂಸ್ಥಾನದ ಜನರಿಗೆ ಅನುಕೂಲವಾಗುವಂತೆ ಮಾಡಬೇಕು. ಈಗ ಇರತಕ್ಕ ಅನೇಕ ಆಸ್ಪತ್ರೆಗಳಲ್ಲಿ ಡಾಕ್ಟರುಗಳಿಲ್ಲ. ಸಿಬ್ಬಂದಿ ಇಲ್ಲ. ತಕ್ಷಣ ಈ ಕೊರತೆಯನ್ನು ನಿವಾರಿಸಬೇಕು. ಅನೇಕ ಆಸ್ಪತ್ರೆಗಳಲ್ಲಿ ಡಾಕ್ಟರುಗಳಿಲ್ಲದಿರುವ ಕಾರಣ ಗೊತ್ತೇ ಇದೆ. ಅನೇಕರು ಎಂ.ಬಿ.ಬಿ.ಎಸ್.ಎಲ್.ಎಂ.ಪಿ. ಮಾಡಿದವರು ಹೊರಗೆ ಹೋಗುತ್ತಿದ್ದಾರೆ. ಮತ್ತು ಪ್ರೈವೇಟ್ ಆಸ್ಪತ್ರೆ ಇಟ್ಟುಕೊಂಡಿದ್ದಾರೆ. ಖಾಲಿ ಬಿದ್ದಿರುವ ಕೆಲಸಗಳಿಗೆ ತಕ್ಷಣ ಡಾಕ್ಟರುಗಳನ್ನು ನೇಮಿಸಿ ಜನರಿಗೆ ಅನುಕೂಲ ಮಾಡಿಕೊಡಬೇಕೆಂದು ಪ್ರಾರ್ಥಿಸುತ್ತೇನೆ.

## ಪ್ರಜಾಸರ್ಕಾರ ಬಂದು ಎಂಟು ವರ್ಷವಾಯ್ತು ಆಡಳಿತ ಸುಧಾರಣೆ ಆಗಿಲ್ಲ

17ನೇ ಮಾರ್ಚ್ 1956.

ಪ್ರತಿವರ್ಷವೂ ತಾಲ್ಲೂಕು ಜಮಾಬಂದಿ, ಹುಜೂರು ಜಮಾಬಂದಿಗಳು ಮಾಮೂಲಾಗಿ ನೂರಾರು ವರ್ಷಗಳಿಂದ ನಡೆಯುತ್ತಾ ಇರುವ ಹಾಗೆ ಈಗಲೂ ನಡೆಯುತ್ತಾ ಇವೆ. ಜಮಾಬಂದಿ ವೇಳೆಯಲ್ಲಿ ಜಿಲ್ಲೆಯ ಜಿಲ್ಲಾಧಿಕಾರಿಗಳು ಆಯಾಯಾ ಅರ್ಜಿದಾರರಿಗೆ ಅನುಕೂಲವಾಗುವ ರೀತಿಯಲ್ಲಿ ತೀರ್ಮಾನ ಮಾಡತಕ್ಕ ಪರಿಸ್ಥಿತಿ ಇನ್ನೂ ಜಾರಿಗೆ ಬಂದಿಲ್ಲ. ಈ ಪ್ರಜಾ ಸರ್ಕಾರ ಸ್ಥಾಪನೆಯಾಗಿ ಎಂಟು ವರ್ಷಗಳಾದವು. ಪ್ರಜೆಗಳಿಗೆ ಅನುಕೂಲ ಮಾಡಿ ಕೊಡುತ್ತೇವೆ. ಪ್ರಜೆಗಳೇ ಸರ್ಕಾರದ ಬೆನ್ನುಮೂಳೆ ಎಂದು ಹೇಳುತ್ತಾ ಇದ್ದು ಪ್ರಜೆಗಳಿಂದ ಚುನಾಯಿತರಾದ ನಾವು ಈ ದಿನ ದೇಶವನ್ನು ಆಳುತ್ತಾ ಇರುವಾಗ ಅವರ ಸ್ಥಿತಿಯನ್ನು ಉತ್ತಮ ಪಡಿಸುತ್ತೇವೆ ಎಂದು ಆ ದಿವಸ ಕೊಟ್ಟ ಭರವಸೆಯನ್ನು ಜಾಗ್ರತೆ ಕಾರ್ಯರೂಪಕ್ಕೆ ತರಲು ಪ್ರಯತ್ನ ಮಾಡಿಲ್ಲ ಎಂದು ವ್ಯಸನದಿಂದ ಹೇಳಬೇಕಾಗಿದೆ. ಇದುವರೆಗೂ ನಾನಾ ರೀತಿಯಲ್ಲಿ ಸರ್ಕಾರದವರು ಅನುಕೂಲ ಮಾಡಿದ್ದರೂ ಅತ್ಯವಶ್ಯಕವಾಗಿ ರೈತರ ಕಣ್ಣಿಗೆ ಕಾಣತಕ್ಕ ಮತ್ತು ಪ್ರಜೆಗಳ ಕಣ್ಣಿಗೆ ಕಾಣ ತಕ್ಕ ಅನೇಕ ವಿಷಯಗಳಲ್ಲಿ ಇನ್ನೂ ಉತ್ತಮಪಡಿಸಿಲ್ಲ ಎಂಬ ಅಂಶವನ್ನು ಈ ಸಂದರ್ಭದಲ್ಲಿ ತಿಳಿಸಬೇಕಾಗಿದೆ.

1753-6

ಒಂದನೆಯದು ಸರ್ಕಾರದವರಲ್ಲಿ ಕೊಡತಕ್ಕ ಅರ್ಜಿ, ರೆವಿನ್ಯೂ ಕಮೀಷನ್‌ರವರಲ್ಲಿ ಕೊಡತಕ್ಕ ಅರ್ಜಿ, ಡೆಪ್ಯೂಟಿ ಕಮೀಷನರವರಲ್ಲಿ ಕೊಡತಕ್ಕ ಅರ್ಜಿ, ತಾಲ್ಲೂಕು ಲೆವಲ್‌ನಲ್ಲಿ ಕೊಡತಕ್ಕ ಅರ್ಜಿ ಇವುಗಳೆಲ್ಲವು ಹತ್ತು ವರ್ಷಗಳಾದರೂ ಕೂಡ ಫೈಸಲಾಗುವುದಿಲ್ಲ. ಅರ್ಜಿ ಕೊಟ್ಟವನಿಗೆ ನಿನ್ನ ಅರ್ಜಿ ಬಂತು, ಈ ರೀತಿ ತೀರ್ಮಾನ ಮಾಡಲಿಕ್ಕೆ ಮನಸ್ಸು ಮಾಡಿದ್ದೇವೆ ಎಂಬ ಒಂದು ಎಂಡಾರ್ಸ್‌ಮೆಂಟ್ ಕೊಡತಕ್ಕ ವ್ಯವಸ್ಥೆ ಇನ್ನೂ ಜಾರಿಗೆ ಬಂದಿಲ್ಲ.

ಇದೆಲ್ಲ ನೋಡಿದರೆ ಹಳೆಯ ಪದ್ಧತಿ ಇನ್ನೂ ಜಾರಿಯಲ್ಲಿದೆ ಎಂದು ತಿಳಿದುಕೊಳ್ಳಬೇಕೇ ವಿನಾ ಹೊಸ ಪದ್ಧತಿಯನ್ನು ಜಾರಿಗೆ ತಂದಿದ್ದೇವೆ ಎನ್ನ ತಕ್ಕ ವಿಷಯವನ್ನು ಸಂತೋಷವಾಗಿ ಹೇಳುವುದಕ್ಕೆ ಆಗಲಿ, ಪ್ರಜೆಗಳಿಗೆ ಭರವಸೆಯನ್ನು ಕೊಡುವುದಕ್ಕೆ ಆಗಲಿ ಅವಕಾಶ ತಪ್ಪಿದೆ. ನಾವು ಯಾವುದನ್ನು ಉತ್ತಮಪಡಿಸುತ್ತೇವೆಂದು ಪ್ರಜೆಗಳಿಗೆ ಆಶ್ವಾಸನೆಯನ್ನು ಕೊಟ್ಟಿದ್ದೇವೋ ಅದನ್ನು ಉತ್ತಮಪಡಿಸಬೇಕಾದದ್ದು ಮೊದಲನೆ ಕರ್ತವ್ಯ ಎನ್ನುವುದನ್ನು ನಾವುಗಳು ಮರೆಯಬಾರದು.

## ಲಂಚವನ್ನು ತಹಬಂದಿಗೆ ತರಲು ಹೀಗೆ ಮಾಡಿ

ಸರ್ಕಾರಿ ನೌಕರರು ಲಂಚರುಷುವತ್ತುಗಳನ್ನು ಪಡೆಯತಕ್ಕ ಪದ್ಧತಿಯನ್ನು ನಿರ್ಮೂಲಮಾಡಲು ಒಂದು ಕಮಿಟಿಯನ್ನು ಮಾಡಿ ಅದಕ್ಕೆ ಒಬ್ಬರು ಅಧ್ಯಕ್ಷರನ್ನು ಮಾಡಿದ್ದೀರಿ ಆದರೆ ಒಂದು ವಿಷಯ ಹೇಳಬೇಕಾಗಿದೆ. ತಾಲ್ಲೂಕು ಅಮಲ್ದಾರರು ತಿಂಗಳಿಗೆ 20 ದಿವಸ, ಸಬ್ ಡಿವಿಷನ್ ಅಧಿಕಾರಿಗಳು ತಿಂಗಳಿಗೆ 15 ದಿವಸ, ಮತ್ತು ಜಿಲ್ಲಾಧಿಕಾರಿಗಳು ತಿಂಗಳಿಗೆ 15 ದಿವಸ ಸಂಚಾರ ಮಾಡಬೇಕು. ಮತ್ತು ಅವರ ಸಂಚಾರ ಕಾಲದಲ್ಲಿ ಜನಗಳ ಕುಂದುಕೊರತೆಗಳನ್ನು ನಿವಾರಣೆಮಾಡಬೇಕು. ಅರ್ಜಿಗಳನ್ನು ಆಯಾ ಸ್ಥಳಗಳಲ್ಲಿಯೇ ಫೈಸಲ್ಮಾಡಬೇಕು. ಹೀಗೆ ಮಾಡಿದರೆ ಲಂಚರುಷುವತ್ತುಗಳ ಹಾವಳಿ ತಪ್ಪಿ ರೈತ ತಾಲ್ಲೂಕು ಆಫೀಸಿಗೆ ತಿರುಗುವ ಕೆಲಸ ತಪ್ಪಿ, ತನ್ನ ಕೆಲಸವನ್ನು ಮಾಡಿಕೊಳ್ಳಲು ಅವಕಾಶವಾಗುತ್ತದೆಂದು ಹೇಳುತ್ತೇನೆ.

ಕಂದಾಯದ ವಸೂಲಿಯ ವಿಚಾರವಾಗಿ ಶ್ರೀ ನರಸಿಂಹರೆಡ್ಡಿಯವರು ಕೆಲವು ವಿಚಾರಗಳನ್ನು ತಿಳಿಸಿದರು. ಕಂದಾಯ ವಸೂಲಾತಿಯ ಸಂಬಂಧದಲ್ಲಿ ಅಮಲ್ದಾರರ ಒತ್ತಡದ ಮೇಲೆ ಪಟೇಲ್ ಶ್ಯಾನುಭೋಗರುಗಳು ರೆವಿನ್ಯೂ

ಕಂದಾಯವನ್ನು ಮಾತ್ರ ವಸೂಲ್ಮಾಡುತ್ತಿದ್ದಾರೆ; ಇನ್ನೂ ಅನೇಕತರಹ ಕಂದಾಯಗಳನ್ನು ವಸೂಲ್ಮಾಡುವುದಕ್ಕೆ ಅವರಿಗೆ ಮನಸ್ಸು ಇರುವುದಿಲ್ಲವೆಂದು, ಹೇಳಿ ಇತರ ಕಂದಾಯಗಳನ್ನು ಅಂದರೆ ಪಂಚಾಯಿತಿ ಕಂದಾಯಗಳನ್ನು ವಸೂಲ್ಮಾಡಬೇಕೆಂದು ಸರ್ಕಾರದ ಗಮನಕ್ಕೆ ತಂದಿದ್ದಾರೆ. ಎಲ್ಲೆಲ್ಲಿ ಪಂಚಾಯಿತಿಯವರು ಕಂದಾಯವನ್ನು ವಸೂಲ್ಮಾಡಿ ಮತ್ತು ಕೆಲಸ ಕಾರ್ಯಗಳನ್ನು ಮಾಡಿಕೊಳ್ಳುತ್ತಿದ್ದಾರೋ ಅಂಥ ಗ್ರಾಮಗಳಿಗೆ ತಾವು ಕೊಡತಕ್ಕ ಗ್ರಾಂಟುಗಳನ್ನು ಹೆಚ್ಚಿಗೆ ಕೊಟ್ಟು. ಆ ಗ್ರಾಮಗಳ ನೈರ್ಮಲ್ಯ ಮುಂತಾದ ಕೆಲಸಗಳನ್ನು ಮಾಡಿಸಿಕೊಡಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಸರ್ಕಾರದವರು ಇದುವರೆಗೂ ಹೆಚ್ಚು ಅನುಕೂಲಗಳನ್ನು ಮಾಡಿಲ್ಲ. ಪ್ರಜಾ ಸರ್ಕಾರ ಬಂದ ಮೇಲೆ ಯಾವ ರೀತಿ ಆಡಂಬರಗಳಲ್ಲಿ ಕಾಲಕಳೆದಿದ್ದಾರೆನ್ನುವುದು ಅನಾವಶ್ಯಕ. ಕಾಲಕಳೆದಿದ್ದಾರೆ ಎನ್ನುವ ಮಾತುಗಳನ್ನು ಆಡುವುದು ನನಗೆ ಇಷ್ಟವಿಲ್ಲ. ಕಾರಣ ಅಂಥದು ನಡೆದಿಲ್ಲ. ಪ್ರಜಾಸರ್ಕಾರ ಬಂದ ಮೇಲೆ ಹಗಲಿರುಳೂ, ಹೆಚ್ಚು ಕಷ್ಟದಿಂದ ಪ್ರಜೆಗಳ ಸೇವೆಯನ್ನು ಮಾಡಿದ್ದಾರೆ. ಇನ್ನು ಆಗಬೇಕಾದ ಕೆಲಸಗಳಿವೆ. ಈಗ 7–8 ವರ್ಷಗಳಿಂದಲೂ ಆಗಿರುವ ಕೆಲಸವನ್ನು ಅಂಕಿಅಂಶಗಳಿಂದ ತೋರಿಸುವುದಕ್ಕೆ ಅವಕಾಶವಿದೆ. ಇದು ಮಾನ್ಯ ಸದಸ್ಯರಿಗೂ ಗೊತ್ತಿರತಕ್ಕ ವಿಚಾರ. ಸಾಧ್ಯವಾದ ಮಟ್ಟಿಗೂ ಪ್ರಜೆಗಳ ಸೇವೆಯನ್ನು ಸಲ್ಲಿಸಿದ್ದಾರೆ. ಮಾಡಬೇಕಾದ ಕೆಲಸ ಇನ್ನೂ ಬಹಳವಿದೆ. ತಾಲ್ಲೂಕು ಅಮಲ್ದಾರರುಗಳು, ಸಬ್ ಡಿವಿಷನ್ ಅಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳು ತಮಗೆ ಇರತಕ್ಕ ಕಾಲಾವಕಾಶವನ್ನು ಸದುಪಯೋಗ ಪಡಿಸಿಕೊಂಡು ಆಯಾ ಗ್ರಾಮಗಳಲ್ಲಿ ಅವರು ಸಂಚಾರ ಮಾಡುವಾಗ ರೈತರುಗಳು, ಸಲ್ಲಿಸತಕ್ಕ ಅರ್ಜಿಗಳನ್ನು ಸ್ಥಳದಲ್ಲಿಯೇ ಫೈಸಲ್ಮಾಡುವುದರಿಂದ ರೈತಾಪಿ ಜನರಿಗೆ ಹೆಚ್ಚಿನ ಉಪಕಾರ ಮಾಡಿದಂತಾಗುತ್ತದೆ. ಇದಕ್ಕಿಂತಲೂ ಹೆಚ್ಚಿನ ಸೇವೆ ಮಾಡಬೇಕಾದದ್ದು ಇಲ್ಲ.

**17ನೇ ಮಾರ್ಚ್ 1956.**

ಊಟದ ಮಧ್ಯೆ ಉಪ್ಪಿನಕಾಯಿ ಅಂದ ಹಾಗೆ ಬರುತ್ತದೆ. ಇದರಲ್ಲಿ ಬೇಕಾದ್ದನ್ನು ಕಡತದಲ್ಲಿ ಸೇರಿಸಿಕೊಳ್ಳಿ. ಬೇಡವಾದದ್ದನ್ನು ಬಿಟ್ಟುಬಿಡಿ. ಅದು ಬೇರೆ ವಿಷಯ (ನಗು) ನಮಗೆ ಬಡ್ಜೆಟ್ ಮೇಲಿನ ಚರ್ಚೆಯಲ್ಲಿ ಹೆಚ್ಚಿಗೆ ಕಾಲಾವಕಾಶವನ್ನು ಕೊಡದೆ ಕಡಿಮೆ ಅವಕಾಶವನ್ನು ಕಲ್ಪಿಸಿ ನಮ್ಮ ಬೇಡಿಕೆಗಳನ್ನು ಜನರ ಅನೇಕ ಕೋರಿಕೆಗಳನ್ನು ಸರ್ಕಾರದ ಗಮನಕ್ಕೆ ತರುವುದಕ್ಕೆ ಈ ಸನ್ನಿವೇಶವನ್ನು ಉಪಯೋಗಿಸಿಕೊಳ್ಳುತ್ತಿದ್ದೇವೆ.

ತಾಲ್ಲೂಕು ಮಟ್ಟದಲ್ಲಿ, ಸಬ್ ಡಿವಿಜನ್ ಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ಅರ್ಜಿಗಳೂ ಮತ್ತು ಮನವಿಗಳೂ ಒಂದು ತಿಂಗಳ ಒಳಗಾಗಿ ಫೈಸಲಾಗುವಂತೆ ಮಾಡಿದ ಹೊರತು ಪ್ರಜೆಗಳಿಗೆ ನಾವು ಕೊಟ್ಟ ಆಶ್ವಾಸನೆ ಖಂಡಿತವಾಗಿಯೂ ನೆರವೇರಿದಂತಾಗುವುದಿಲ್ಲ. ಅಮಲ್ದಾರರ ಮತ್ತು ಸಬ್ ಡಿವಿಜನ್ ಅಧಿಕಾರಿಗಳ ವಿಚಾರದಲ್ಲಿ, ಅವರ ಕರ್ತವ್ಯಗಳ ವಿಚಾರದಲ್ಲಿ ಸರ್ಕಾರ ಗಮನ ಕೊಡಬೇಕು.

ಜಮೀನು ವಿಲೇವಾರಿ ವಿಚಾರದಲ್ಲಿ ಸರ್ಕಾರದ ಅನುಮತಿ ಇಲ್ಲದೆ ಗೋಮಾಳ, ಖರಾಬು, ಅರಣ್ಯ ಇವುಗಳಲ್ಲಿ ಜಮೀನನ್ನು ಉಳುಮೆ ಮಾಡತಕ್ಕವರಿಗೆ ಕೊಟ್ಟಿದ್ದಾರೆ ಎಂದು ಮಾನ್ಯ ಮಿತ್ರರೊಬ್ಬರು ಹೇಳಿದರು. ಸರ್ಕಾರದವರು ಇಂಥ ಜಮೀನುಗಳನ್ನು ಪ್ರಜೆಗಳಿಗೆ ನೇರವಾಗಿ, ಅರ್ಜಿಗಳ ಮೂಲಕ, ಒಂದು ನೀತಿಯನ್ನನುಸರಿಸಿ ಬಡಜನರಿಗೂ, ಜಮೀನು ಇಲ್ಲದವರಿಗೂ ಹಂಚಿ ಅವರು ಕಷ್ಟಪಡುವುದನ್ನು ನಿವಾರಣೆ ಮಾಡಬೇಕೆಂದೂ, ಇದನ್ನು ಕಾರ್ಯರೂಪಕ್ಕೆ ತರುವುದರಲ್ಲಿ ನಿಧಾನಮಾಡಬಾರದೆಂದೂ ಹೇಳುತ್ತೇನೆ. ಇನಾಂ ಮತ್ತು ಜೋಡಿ ಗ್ರಾಮಗಳಿಗೆ ಸಂಬಂಧಪಟ್ಟ ಕಾನೂನನ್ನು ಕಾರ್ಯರೂಪಕ್ಕೆ ತಂದಿಲ್ಲ. ಇದು ಕೂಡಲೇ ಜಾರಿಗೆ ಬರಬೇಕು. ಈ ಸಂಬಂಧದಲ್ಲಿ ಆಗಬೇಕಾದ ಎಲ್ಲ ಅನುಕೂಲಗಳನ್ನು ಕಲ್ಪಿಸಲಾಗಿದೆ. ಇದನ್ನು ಜಾರಿಗೆ ತಂದು ಪ್ರಜೆಗಳಿಗೆ ಪ್ರಯೋಜನವಾಗುವ ರೀತಿಯಲ್ಲಿ ಕಷ್ಟಪಡತಕ್ಕ ಜನಗಳಿಗೆ ಅನುಕೂಲ ಮಾಡಿಕೊಡಬೇಕು ಎಂದು ಹೇಳುತ್ತೇನೆ. ಅಧ್ಯಕ್ಷರು ಬಹಳ ಆತುರವಾಗಿದ್ದಾರೆ. ನನಗೆ ಕೊಟ್ಟಿರುವ ಕಾಲಾವಕಾಶ ಸಾಲದು. ಮತ್ತೊಮ್ಮೆ ಅವಕಾಶ ಕೊಡಬೇಕೆಂದು ಕೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಅಧ್ಯಕ್ಷರು ಇಷ್ಟು ಮಾತ್ರ ಕಾಲಾವಕಾಶ ಕೊಟ್ಟಿದ್ದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯನ್ನು ಸಲ್ಲಿಸುವುದಕ್ಕೆ ಅಪ್ಪಣೆಬೇಡುತ್ತೇನೆ.

**23ನೇ ಮಾರ್ಚ್ 1956.**

ಈಗ ವೈದ್ಯಕೀಯ ವಿಚಾರದಲ್ಲಿ ಈ ಸಭೆಯ ಅನೇಕ ಮಾನ್ಯ ಸದಸ್ಯರುಗಳು ಹೆಚ್ಚಿನ ನಿಗಾ ವಹಿಸಬೇಕೆಂದು ಸರ್ಕಾರದವರಿಗೆ ಹೇಳಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಈಗ ನಾಲ್ಕು ವರ್ಷದಿಂದಲೂ ಕೂಡ ಈ ವೈದ್ಯ ಸಹಾಯದ ವರ್ಷದಲ್ಲಿ ಬಹಳ ಹೆಚ್ಚಿನ ಅನುಕೂಲಗಳನ್ನು ಗ್ರಾಮಾಂತರಗಳಿಗೂ ಮತ್ತು ಪಟ್ಟಣಗಳಿಗೂ ಒದಗಿಸಿ ಸರ್ಕಾರದವರು ಬಹಳ ಒಳ್ಳೆಯ ಕೀರ್ತಿಯನ್ನು ಗಳಿಸಿದ್ದಾರೆ ಎಂದು ನಾನು ಹೇಳುತ್ತೇನೆ. ವಿಕ್ಟೋರಿಯಾ ಆಸ್ಪತ್ರೆ, ಕ್ಷಯದ ಆಸ್ಪತ್ರೆ, ಹುಚ್ಚಾಸ್ಪತ್ರೆ, ಕಣ್ಣಾಸ್ಪತ್ರೆ

ಆಹಾರಧಾನ್ಯವನ್ನು ಹೆಚ್ಚು ಬೆಳೆಯುವುದಕ್ಕೆ ತೊಂದರೆಯಾಗಿದೆ. ಇದನ್ನು ಸರ್ಕಾರದವರು ಮಾನ್ಯ ಮಾಡಿ ಇದರ ಬಗ್ಗೆ ಹೆಚ್ಚಿನ ಕಾರ್ಯಕ್ರಮವನ್ನು ತೆಗೆದುಕೊಳ್ಳಬೇಕು. ಈಗ ಮಾನ್ಯ ಮುಖ್ಯ ಮಂತ್ರಿಗಳು ವ್ಯವಸಾಯದ ಪೋರ್ಟ್ ಪೋಲಿಯೋವನ್ನು ಅವರೇ ತೆಗೆದುಕೊಂಡಿದ್ದಾರೆ. ಆದ್ದರಿಂದ ಅದಕ್ಕೆ ಈ ವರ್ಷ ಹೆಚ್ಚಿನ ಮಾನ್ಯತೆ ದೊರಕುತ್ತದೆಂದು ನಾನಾದರೂ ಭಾವಿಸುತ್ತೇನೆ.

ಆಹಾರದ ಅಭಾವದ ವಿಚಾರದಲ್ಲಿ ನಮ್ಮ ಸ್ನೇಹಿತರು ಅನೇಕ ಸಲಹೆಗಳನ್ನು ಕೊಟ್ಟಿದ್ದಾರೆ. ನಮ್ಮ ದೇಶದಲ್ಲಿ ಎಷ್ಟೇ ಆಹಾರದ ಕೊರತೆ ಇದ್ದಾಗ್ಯೂ ನಮ್ಮ ಆಹಾರ ಸಚಿವರು ಹೆಚ್ಚು ಶ್ರಮವಹಿಸಿ ನಮ್ಮ ಜನಗಳಿಗೆ ಅನುಕೂಲವಾಗುವ ರೀತಿಯಲ್ಲಿ ಒಂದು ಏರ್ಪಾಟು ಮಾಡಿರುತ್ತಾರೆ. ಇದನ್ನು ನಮ್ಮ ಸ್ನೇಹಿತರು ಗಮನಿಸಬೇಕು ಎಂದು ಹೇಳುತ್ತೇನೆ.

ಕೈಗಾರಿಕೆ ವಿಚಾರದಲ್ಲಿ ಹೇಳುವುದಾದರೆ, ನಮ್ಮಲ್ಲಿ ಈಗ ಹೆಚ್ಚು ಉತ್ಪನ್ನವಾಗುವ ವಿದ್ಯುಚ್ಛಕ್ತಿಯ ಪ್ರಯೋಜನವನ್ನು ನಮ್ಮ ದೇಶದ ಜನಗಳು ಹೊಂದುವಂತೆ ಆಗಬೇಕು. ಈಗಿರುವ ಪ್ರಕಾರ ಕರೆಂಟನ್ನು ಬೇರೆ ರಾಜ್ಯಗಳ ಜನಗಳಿಗೆ ಮಾರುವುದಾದರೆ ಅದರಿಂದ ನಮ್ಮ ರಾಜ್ಯದ ಜನಗಳಿಗೆ ಹೆಚ್ಚಿಗೆ ಪ್ರಯೋಜನವಾಗುವುದಿಲ್ಲ. ನಮ್ಮ ರಾಜ್ಯ ಸರ್ಕಾರದವರು ಹೆಚ್ಚು ನೀರಾವರಿ ಪಂಪುಗಳನ್ನು ಹಾಕಿ ತನ್ಮೂಲಕಾ ಹೆಚ್ಚು ಕರೆಂಟನ್ನು ಉಪಯೋಗಿಸಿ ನಮ್ಮ ದೇಶದಲ್ಲಿ ಆಹಾರ ಧಾನ್ಯಗಳನ್ನು ಬೆಳೆಯುವುದಕ್ಕೆ ಸಹಾಯವಾಗುವ ರೀತಿಯಲ್ಲಿ ಮಾಡಬೇಕೆಂದು ಕೇಳಿ ಕೊಳ್ಳುತ್ತೇನೆ.

ನಮ್ಮ ಎದುರು ಪಕ್ಷದ ಸ್ನೇಹಿತರು ಕೆಲವರು ಹಿಂದಿನ ಮಂತ್ರಿಮಂಡಲದಲ್ಲಿ ಸದಸ್ಯರಾಗಿದ್ದರು. ಅವರು ಅನೇಕ ಭಾಷಣಗಳನ್ನು ಮಾಡಿದ್ದಾರೆ. ಆದರೂ ನಮ್ಮವರು, ಅವರು ಅನೇಕ ವಿಷಯಗಳನ್ನು ತಿಳಿದುಕೊಂಡಿರತಕ್ಕವರು [illegible] ಅವರು ಕೆಲವು [illegible] ನಾನು 1957 ರಲ್ಲೇ ಈ ಸಭೆಯಲ್ಲಿ [illegible]

ತಿಳುವಳಿಕೆಯನ್ನು ಕೊಡಲು ಈ ವಿಜಿಟರ್ಸ್ ಕಮಿಟಿಗಳು ಅತ್ಯಗತ್ಯ. ಇನ್ನು ಅನೇಕ ಕಡೆಗಳಲ್ಲಿ ಆಸ್ಪತ್ರೆಗಳು ಪ್ರೈವೇಟ್ ಕಟ್ಟಡಗಳಲ್ಲಿವೆ. ನನಗೆ ತಿಳಿದಿರುವಂತೆ ಸುಮಾರು 40–50 ಆಸ್ಪತ್ರೆಗಳು ಪ್ರೈವೇಟ್ ಬಿಲ್ಡಿಂಗುಗಳಲ್ಲಿವೆ. ಅವುಗಳನ್ನು ಆದಷ್ಟು ಬೇಗ ಸರ್ಕಾರಿ ಕಟ್ಟಡಗಳನ್ನು ಮಾಡಿ ಅಲ್ಲಿಗೆ ವರ್ಗಾಯಿಸಬೇಕೆಂದು ಹೇಳುತ್ತೇನೆ. ಮೈಸೂರು ರಾಜ್ಯವೂ ಮೊದಲಿನಿಂದಲೂ ಆಸ್ಪತ್ರೆಗಳನ್ನು ಕಟ್ಟಿಸುವುದರಲ್ಲಿಯೂ, ರೋಗಿಗಳಿಗೆ ಒಳ್ಳೆಯ ಔಷಧೋಪಚಾರಗಳನ್ನು ನೀಡುವುದರಲ್ಲಿಯೂ ಹೆಸರನ್ನು ಗಳಿಸಿ ಬಹಳ ಯಶಸ್ಸನ್ನು ಪಡೆದಿದೆ. ಆದರೆ ಇತ್ತೀಚೆಗೆ ಮೈಸೂರು ರಾಜ್ಯವು ಕರ್ಣಾಟಕವಾದ ಮೇಲೆ ಇದರ ಪ್ರಜಾ ಸಂಖ್ಯೆ ಮೂರುವರೆ ಕೋಟಿಗೇರಿದೆ. ಆದುದರಿಂದ ಈಗ ದೇಶದಲ್ಲಿ ಹೆಚ್ಚು ಆಸ್ಪತ್ರೆಗಳು ಆಗಬೇಕಾದ್ದು ಅವಶ್ಯಕ. ಆದರೆ ಇದನ್ನಿನ್ನೂ ಮಾಡಿಲ್ಲ. ಇದನ್ನು ಕೂಡಲೇ ಕೈಗೊಳ್ಳಬೇಕಾದ್ದು ಅಗತ್ಯವೆಂದು ಸರ್ಕಾರದವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ನಮ್ಮ ಆರೋಗ್ಯ ಮಂತ್ರಿಗಳು ರೈತರ ಮಕ್ಕಳು; ಹಾಗೂ ವಿದ್ಯಾವಂತರು ಮತ್ತು ಅಭಿಮಾನಶಾಲಿಗಳು. ಇವರು ಜನರ ಬಗ್ಗೆ ಕನಿಕರವನ್ನು ಇಟ್ಟು ಹೆಚ್ಚಿನ ಸೌಲಭ್ಯಗಳನ್ನು ಒದಗಿಸಿ ಮುಂದಿನ ವರ್ಷ ಇಲ್ಲಿ ನಾವು ಸೇರಿದಾಗ ಜನರಿಂದ ಹೆಚ್ಚಿನ ಗಲಾಟೆಗೆ ಅವಕಾಶಕೊಡದಂತೆ ಅವರು ಕೆಲಸಗಳನ್ನು ಕೈಗೊಂಡು, ಈ ಸಭೆಯ ಸದಸ್ಯರಿಂದ ಅವರು ಒಂದು ಹೆಚ್ಚಿನ ಗೌರವವನ್ನು ಸಂಪಾದಿಸತಕ್ಕ ರೀತಿಯಲ್ಲಿ ಕೆಲಸ ಮಾಡುತ್ತಾರೆಂದು ಆಶಿಸುತ್ತೇನೆ.

ಇನ್ನು ಲಂಚರುಷುವತ್ತುಗಳ ಬಗ್ಗೆ ಅನೇಕರು ಹೇಳಿದ್ದಾರೆ. ಆದುದರಿಂದ ನಾನು ಅದರ ಬಗ್ಗೆ ಪುನರ್‌ಪಠಣೆ ಮಾಡುವುದಕ್ಕೆ ಹೋಗುವುದಿಲ್ಲ; ಸರ್ಕಾರದವರು ಆಸ್ಪತ್ರೆಗಳಲ್ಲಿ ರೋಗಿಗಳಿಗಾಗಿ ಒದಗಿಸತಕ್ಕ ಔಷಧಿಗಳನ್ನು ಮತ್ತು ಇತರೇ ಸಾಮಾನುಗಳನ್ನು ಕದ್ದು ಮಾರುವುದಕ್ಕೆ ಅವಕಾಶಕೊಡದಂತೆ ವೈದ್ಯಾಧಿಕಾರಿಗಳು ತಡೆಗಟ್ಟ ಬೇಕಾದ್ದು ಅವರ ಮುಖ್ಯ ಕರ್ತವ್ಯ. ಈ ದಿವಸ ಸರ್ಕಾರದವರು ಅಲ್ಲಲ್ಲೇ ಕೊಟ್ಟಿರತಕ್ಕ ಆರೋಗ್ಯ ಕೇಂದ್ರಗಳೇನಿದೆ ಅವುಗಳನ್ನು ಪರಿಪೂರ್ಣಗೊಳಿಸುವುದಕ್ಕಾಗಿ ಅವುಗಳಿಗೆ ಟೂರಿಸ್ಟ್ ವ್ಯಾನ್ ಸೌಕರ್ಯಗಳನ್ನು ಒದಗಿಸಿ ಔಷಧಿಗಳು ಬಡ ಜನರಿಗೆ ದೊರೆಯುವಂತೆ ಮಾಡಬೇಕಾದ್ದು ಅತ್ಯಗತ್ಯ. ಇದನ್ನು ನಾವು ಇದೇ ವೇದಿಕೆ ಮೇಲೆ ದೇಶದಲ್ಲಿ ಟೂರಿಸ್ಟ್ ಆಸ್ಪತ್ರೆಗಳನ್ನು ತೆರೆಯಬೇಕಾದ್ದು ಅತ್ಯಗತ್ಯ ಎಂದು ಅನೇಕಾವರ್ತಿ ಹೇಳಿದ್ದೇವೆ. ಪ್ರತಿಯೊಂದು ಆರೋಗ್ಯ ಕೇಂದ್ರಕ್ಕೂ ಒಂದೊಂದು ಟೂರಿಸ್ಟ್ ಬಸ್ ಇರಲೇ ಬೇಕು. ಇದನ್ನು

ಸರ್ಕಾರದವರು ಗಮನಕ್ಕೆ ತೆಗೆದುಕೊಂಡು ಅವುಗಳಿಗೆ ವಾಹನ ಸೌಕರ್ಯಗಳನ್ನು ಒದಗಿಸಬೇಕಾದ್ದು ಅತ್ಯಗತ್ಯ ಎಂದು ನಾನು ಭಾವಿಸಿದ್ದೇನೆ.

ಇನ್ನು ರಾಷ್ಟ್ರೀಯ ಯೋಜನೆಗಳ ಬಗ್ಗೆ ಅಲ್ಲಿಯ ನೌಕರರಿಗೆ ವಸತಿಸೌಲಭ್ಯಗಳನ್ನು ಎಲ್ಲರಿಗೂ ಕಲ್ಪಿಸಿಕೊಟ್ಟಿದ್ದಾರೆ. ಆದರೆ ಎಲ್ಲಿ ಹಗಲೂ ರಾತ್ರಿ ಜನಸೇವೆ ಮಾಡುತ್ತಾರೋ ಅವರಿಗೆ ಈ ಸೌಲಭ್ಯವಿಲ್ಲ. ಇದು ಬಹಳ ಅನ್ಯಾಯ. ಇದನ್ನು ಮಾನ್ಯ ಮಂತ್ರಿಗಳು ತಮ್ಮ ಗಮನಕ್ಕೆ ತೆಗೆದುಕೊಂಡು ಆಸ್ಪತ್ರೆಗಳಲ್ಲಿ ಕೆಲಸದಲ್ಲಿರತಕ್ಕವರಿಗೂ ವಸತಿಸೌಕರ್ಯಗಳನ್ನು ಕಲ್ಪಿಸಿಕೊಡಬೇಕಾದ್ದು ತೀರಾ ಅತ್ಯಗತ್ಯ. ಆದರೆ ಇವುಗಳನ್ನೆಲ್ಲಾ ಕಾರ್ಯಗತ ಮಾಡುವುದಕ್ಕೆ ಬಡ್ಜೆಟ್ಟಿನಲ್ಲಿ ಒದಗಿಸಿರತಕ್ಕ ಹನ್ನೊಂದೂವರೆ ಕೋಟಿ ರೂಪಾಯಿಗಳು ಸಾಲದು, ಇದಕ್ಕೆ ಇನ್ನೂ ಹೆಚ್ಚು ಹಣವನ್ನು ಒದಗಿಸಿ ಪ್ರಜೆಗಳಿಗೆ ವೈದ್ಯಕೀಯ ಸೌಲಭ್ಯಗಳು ಸುಲಭವಾಗಿ ಸಿಗುವಂತೆ ಮಾಡಬೇಕಾದ್ದು ಅತ್ಯಗತ್ಯ ಎಂದು ನಾನು ಅವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಇನ್ನು ಕ್ಷಯರೋಗದ ಆಸ್ಪತ್ರೆಗೆ ಕಟ್ಟಡ ಸಾಲದು. ರೋಗಿಗಳು ಕ್ಯೂನಲ್ಲಿ ನಿಲ್ಲಬೇಕಾಗಿದೆ. ಮುರು ತಿಂಗಳಾದರೂ ಅವಕಾಶ ಸಿಕ್ಕುವುದಿಲ್ಲ. ಅನೇಕರಿಗೆ ಸ್ಥಳ ಸಿಕ್ಕದೆ ಕೆಲವರು ಕ್ಯೂನಲ್ಲಿ ನಿಂತೇ ಸತ್ತು ಹೋದರು. ಈ ವಿಚಾರ ಸರ್ಕಾರದವರಿಗೂ ಗೊತ್ತಿದೆ. ಆದ್ದರಿಂದ ಸರ್ಕಾರದವರು ಇತ್ತ ಕಡೆಗೆ ಹೆಚ್ಚಿನ ಗಮನ ಕೊಟ್ಟು ಅಲ್ಲಿ ಸ್ಥಳ ವಸತಿಯನ್ನು ಹೆಚ್ಚಿಸಬೇಕು ಶ್ರೀಮಂತರಾದರೇನೋ ಪರವಾಗಿಲ್ಲ. ಭಾಗ್ಯವಂತರಿಗೆ ಲಭಿಸತಕ್ಕ ಸೌಲಭ್ಯಗಳು ಬಡವರಿಗೆ ಲಭಿಸುವುದಿಲ್ಲ. ನಮ್ಮ ದೇಶದಲ್ಲಿ 100ಕ್ಕೆ 50 ಜನ ಬಡವರಿದ್ದಾರೆ. ಸರ್ಕಾರದವರು ಕೊಡತಕ್ಕ ಹಣ ಛಿದ್ರ ಛಿದ್ರವಾಗುತ್ತಿದೆ.

**3.00 ಪಿ.ಎಂ.**

ಇದನ್ನು ತಡೆಗಟ್ಟಬೇಕು. ಅದನ್ನು ಭದ್ರತೆ ಮಾಡತಕ್ಕ ಒಂದು ಕಾರ್ಯಕ್ರಮಕ್ಕೆ ಸರ್ಕಾರದವರು ಕೃಪೆ ಮಾಡಬೇಕೆಂದು ಹೇಳಿ ಮನವಿ ಮಾಡಿಕೊಳ್ಳುತ್ತೇನೆ. ಇನ್ನು ಆಸ್ಪತ್ರೆಗಳಲ್ಲಿ ಆನೇಕರಿಗೆ ಬೆಡ್ ಇಲ್ಲ. ಒಟ್ಟಿನಲ್ಲಿ ಸರ್ಕಾರದವರು ಈ ಬೇಡಿಕೆಯಲ್ಲಿ ತೆಗೆದುಕೊಂಡಿರುವ ಕಾರ್ಯಕ್ರಮವನ್ನು ಅಲ್ಲದೆ ಇನ್ನೂ ಹೆಚ್ಚಿನ ಹಣವನ್ನು ಒದಗಿಸಿ, ಈ ಮನೆಯಲ್ಲಿ ಏನೇನು ಸಲಹೆಗಳು ಬಂದಿವೆನೋ, ಅವೆಲ್ಲವನ್ನೂ ತೆಗೆದುಕೊಂಡು ಸಾಧ್ಯವಾದಷ್ಟು ಮಟ್ಟಿಗೆ ಉತ್ತಮ ಸ್ಥಿತಿ ತರಬೇಕೆಂದು ಹೇಳಿ, ನನಗೆ ಮಾತನಾಡಲು ಅವಕಾಶ ಕೊಟ್ಟಂತಹ ಅಧ್ಯಕ್ಷರಿಗೆ ವಂದಿಸಿ, ನನ್ನ ಮಾತುಗಳನ್ನು ಮುಗಿಸುತ್ತೇನೆ–ಜೈ ಹಿಂದ್.

# ಬಂಧೀಖಾನೆಗೆ ಕಾಯಕಲ್ಪ: ಪೋಲೀಸ್ ಇಲಾಖೆಗೆ ಹೊಸರೂಪ.

18ನೇ ಜುಲೈ 1967.

ಸನ್ಮಾನ್ಯ ಸಭಾಧ್ಯಕ್ಷರೇ, ಈ ದಿವಸ ನಮ್ಮ ಮುಂದೆ ಮಂಡಿಸಿರತಕ್ಕ ಪೋಲೀಸ್, ಬಂದೀಖಾನೆ ವಗೈರೆ ಡಿಮ್ಯಾಂಡುಗಳ ವಿಚಾರದಲ್ಲಿ ಕೆಲವು ಸಲಹೆಗಳನ್ನು ಸರ್ಕಾರದವರಿಗೆ ಕೊಡುವುದಕ್ಕೆ ನಾನು ತಮ್ಮ ಮುಂದೆ ನಿಂತಿದ್ದೇನೆ ಸ್ವಾಮಿ, ಈಗಾಗಲೇ ನನ್ನ ಮಾನ್ಯ ಸ್ನೇಹಿತರು ಅನೇಕರು ಈ ಇಲಾಖೆಯ ವಿಚಾರದಲ್ಲಿ ಮಾತನಾಡಿರುವುದನ್ನು ನಾನು ಕೇಳಿದ್ದೇನೆ ಮತ್ತು ತಮಗೂ ಗೊತ್ತಿದೆ. ಈ ಇಲಾಖೆ ಈಗಿನ ಕಾಲಕ್ಕೆ ಅನುಗುಣವಾಗಿ ಇನ್ನೂ ಸಂಪೂರ್ಣ ಬಂದೋಬಸ್ತು ಆಗಬೇಕಾದ ಅಗತ್ಯ ಇದೆ ಎಂದು ನಾನಾದರೂ ಭಾವಿಸಿದ್ದೇನೆ. ಬಡಬಗ್ಗರ ಸಂಖ್ಯೆ ದಿನದಿನಕ್ಕೆ ಜಾಸ್ತಿಯಾಗುತ್ತಿರುವ ಈ ಕಾಲದಲ್ಲಿ ಪ್ರತಿಯೊಂದು ಗ್ರಾಮದಲ್ಲಿ ಕಳ್ಳತನದಿಂದ ಧಾನ್ಯಗಳ ಕಟಾವು ಮಾಡುವುದು ನಡೆಯುತ್ತಿದೆ. ಇದಕ್ಕೆ ಪೂರ್ಣ ಬಂದೋಬಸ್ತು ಆಗದಿದ್ದ ಪಕ್ಷದಲ್ಲಿ ರೈತ ತನ್ನ ಜಮೀನನ್ನು ಉಳುಮೆ ಮಾಡಿ ತನ್ಮೂಲಕ ಜೀವನ ಮಾಡತಕ್ಕ ಒಂದು ಅವಕಾಶ ತುಂಬಾ ಕಷ್ಟವಾಗುತ್ತದೆ. ಅದನ್ನು ಸರ್ಕಾರದ ಈ ಇಲಾಖೆಯವರು ಪೂರ್ಣವಾಗಿ ತಡೆಯುವುದಕ್ಕೆ ಪ್ರಯತ್ನ ಮಾಡಬೇಕು. ತಾಲ್ಲೂಕಿಗೆ ಒಬ್ಬೊಬ್ಬ ಪೋಲೀಸ್ ಇನ್‌ಸ್ಪೆಕ್ಟರ್ ಇರಬೇಕಾದ್ದು ಅಗತ್ಯ. ಮಾಗಡಿ ತಾಲ್ಲೂಕು ಆರು ಹೋಬಳಿಯಿಂದ ಒಳಗೊಂಡು ಎರಡು ಲಕ್ಷ ಪ್ರಜಾ ಸಂಖ್ಯೆ ಇರತಕ್ಕ ಕ್ಷೇತ್ರವಾಗಿದೆ. ಇದನ್ನು ಅನೇಕ ಸಾರಿ ಸರ್ಕಾರದವರ ಗಮನಕ್ಕೆ ತಂದಿದ್ದನೆ. ಒಬ್ಬ ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ಅಲ್ಲಿರಬೇಕಾದ್ದು ಅಗತ್ಯ ಎಂದು ಹಿಂದೆ ಇದ್ದಂತ ಐ.ಜಿ.ಪಿ. ಸಲಹೆ ಮಾಡಿರುವ ಪ್ರಕಾರ ಹಿಂದೆ ಇದ್ದಂಥ ಸರ್ಕಾರ ಎರಡು ತಾಲ್ಲೂಕುಗಳಿಗೆ ಒಬ್ಬ ಪೋಲೀಸ್ ಇನ್ಸ್‌ಪೆಕ್ಟರ್ ಇರಬೇಕೆಂದು ಮಾಡಿತು. 250 ರೂಪಾಯಿ ಒಬ್ಬ ಸಬ್‌ಇನ್ಸ್‌ಪೆಕ್ಟರಿಗೆ ಕೊಡತಕ್ಕ ಸಂಬಳ ಸರ್ಕಾರದವರಿಗೆ ಕಡಿಮೆಯಾದರೂ ಪರವಾಗಿಲ್ಲ ಅದರಿಂದ ಸರ್ಕಾರಕ್ಕೇನೂ ಹೆಚ್ಚು ಲಾಭವಾಗುವುದಿಲ್ಲ. ಅನೇಕ ಕಾರಣಗಳಿಂದ ಹಣ ಹಾಳಾಗತಕ್ಕ ಈ ಸಂದರ್ಭದಲ್ಲಿ ಪೊಲೀಸರಿಂದ ಜನತೆಗೆ ಆಗಬೇಕಾದ ಸೌಲಭ್ಯ, ಬಂದೋಬಸ್ತು ಎಲ್ಲಾ ಸನ್ನಿವೇಶದಲ್ಲಿ ಅಗತ್ಯ ಎನ್ನುವುದನ್ನು ನಾನು ಏನೂ ಪುನಃ ಒತ್ತಿ ಹೇಳಬೇಕಾದ್ದಿಲ್ಲ. ಅದು ಎಲ್ಲರಿಗೂ ಗೊತ್ತಿರತಕ್ಕ ವಿಷಯ. ಆದ್ದರಿಂದ ಮಾಗಡಿ ತಾಲ್ಲೂಕಿಗೆ ಒಬ್ಬ ಪೊಲೀಸ್ ಇನ್ಸ್‌ಪೆಕ್ಟರ್ ಅಗತ್ಯವಾಗಿ ಇರಬೇಕೆಂದು ಹೇಳುತ್ತೇಣೆ. ಒಟ್ಟಿನಲ್ಲಿ ಸಂಸ್ಥಾನದ ಎಲ್ಲಾ ಕಡೆಗಳಲ್ಲೂ ಒಬ್ಬ ಪೊಲೀಸ್ ಇನ್ಸ್‌ಪೆಕ್ಟರ್

ಇರಬೇಕಾದ್ದು ಅಗತ್ಯ. ಕೋರ್ಟು ಕಚೇರಿಗಳಿಗೆ ಹೋಗಬೇಕಾಗುತ್ತದೆ. ಪೋಲೀಸ್ ಸ್ಟೇಷನ್‌ನಲ್ಲಿ ಕಂಪ್ಲೇಂಟ್ಸ್ ತೆಗೆದುಕೊಳ್ಳುವವರು ಇರಬೇಕಾಗುತ್ತದೆ. ಈ ಇಲಾಖೆಯವರ ಲಾಭ ಜನರಿಗೆ ಸಿಕ್ಕದಿದ್ದರೆ ಹೆಚ್ಚು ತೊಂದರೆಯಾಗುವ ಪರಿಸ್ಥಿತಿಯುಂಟು. ಆದ್ದರಿಂದ ಪ್ರತಿಯೊಂದು ತಾಲ್ಲೂಕಿಗೂ ಒಬ್ಬೊಬ್ಬ ಪೋಲೀಸ್ ಇನ್ಸ್‌ಪೆಕ್ಟರ್ ಇರಬೇಕಾದ್ದು ಅಗತ್ಯ ಎಂಬುದನ್ನು ಸರ್ಕಾರದವರಲ್ಲಿ ಒತ್ತಾಯಪೂರ್ವಕವಾಗಿ ಹೇಳುತ್ತಾ ಇದ್ದೇನೆ. ಪೋಲೀಸ್ ನೌಕರರನ್ನು ತಾವು ತೆಗೆದುಕೊಳ್ಳುವಾಗ ಇನ್ನು ಮೇಲಾದರೂ ಕೂಡ ವಿದ್ಯಾವಂತರಾಗಿರತಕ್ಕ ಪೋಲೀಸ್ ಕಾನ್‌ಸ್ಟೇಬಲ್‌ಗಳಿಗೆ ಕನಿಷ್ಟ ಪಕ್ಷ ಪ್ರೌಢಶಾಲೆಯ ವಿದ್ಯಾಭ್ಯಾಸ ಇರಬೇಕಾದ್ದು ಅಗತ್ಯ ಎಂದು ಕಡ್ಡಾಯ ಮಾಡಬೇಕು. ಇಲ್ಲದೇ ಹೋದರೆ ಜನರಿಗೆ ಅವರಿಂದ ಸಿಕ್ಕ ಬೇಕಾದ ಅನುಕೂಲ ಕಡಿಮೆಯಾಗುತ್ತದೆ ಎಂದು ಹೇಳುತ್ತಾರೆ. ಅವರಿಗೆ ಬರುತ್ತಾ ಇರತಕ್ಕ ವೇತನ ಬಹಳ ಕಡಿಮೆ ಪೋಲೀಸ್ ಕಾನ್‌ಸ್ಟೇಬಲ್ಲಿನ ವೇತನ ಬಹಳ ಕಡಿಮೆ. ಈ ವಿಚಾರವನ್ನು ಇದೇ ಮಾನ್ಯ ಸಭೆಯಲ್ಲಿ ಅನೇಕರು ಅನೇಕಾವರ್ತಿ ಹೇಳಿದ್ದೇವೆ. ಈ ಆಹಾರಾಭಾವನ ಕಾಲದಲ್ಲಿ ಅವರು ಅವರ ಮಕ್ಕಳು ಮರಿಗಳನ್ನು ಸಾಕಿ ಸರಿಯಾದ ರೀತಿಯಲ್ಲಿ ದಕ್ಷತೆಯಿಂದ ಸರ್ಕಾರಿ ಕೆಲಸ ಕಾರ್ಯಗಳನ್ನು ಮಾಡಬೇಕಾಗಿದ್ದರೆ ಅವರಿಗೆ ಕೊಡತಕ್ಕ ವೇತನಗಳನ್ನು ತತ್ರಾಪಿ ಪೋಲೀಸ್ ಕಾನ್‌ಸ್ಟೇಬಲ್‌ಗಳ ವೇತನವನ್ನು ಉತ್ತಮಪಡಿಸಬೇಕಾದ್ದು ಅತ್ಯಗತ್ಯ. ಪೋಲೀಸ್ ಇಲಾಖೆಯ ಕೆಲಸಕಾರ್ಯಗಳು ಬಹಳ ಭದ್ರತೆಯಿಂದ ಇರಬೇಕಾದರೆ ಇವರ ವೇತನವನ್ನು ಇನ್ನೂ ಕೊಂಚಮಟ್ಟಿಗೆ ಉತ್ತಮಪಡಿಸಬೇಕಾದ್ದು ಅತ್ಯಗತ್ಯ. ನಾವು ಈ ದಿವಸ ಒಬ್ಬ ಗ್ರಾಮಸೇವಕನಿಗೆ, ಕೊಡತಕ್ಕ ಸಂಬಳವನ್ನು ಕೂಡ ಕೊಡುತ್ತಿಲ್ಲ. ಆದುದರಿಂದ ಸರ್ಕಾರದವರು ಇತ್ತ ಕಡೆಗೆ ತಮ್ಮ ಗಮನವನ್ನು ಹರಿಸಬೇಕಾದ್ದು ಅತ್ಯವಶ್ಯಕ ಎಂದು ಹೇಳುತ್ತೇನೆ.

ಇನ್ನು ನಮ್ಮ ರಾಜ್ಯದಲ್ಲಿ ಅನೇಕ ಕಡೆಗಳಲ್ಲಿ ಪೋಲೀಸ್ ಸ್ಟೇಷನ್ ಮತ್ತು ಜೈಲುಗಳು ತಾಲ್ಲೂಕ್ ಕಛೇರಿಯ ಕಟ್ಟಡದಲ್ಲಿ ಸೇರಿವೆ. ಇದರಿಂದ ರೆವಿನ್ಯೂ ಇಲಾಖೆಗಳ ಕೆಲಸಕ್ಕೂ ಬಹಳ ತೊಂದರೆ ಮತ್ತು ಪೋಲೀಸ್ ಕೇಸುಗಳ ತನಿಖೆಗೂ ಬಹಳ ತೊಂದರೆಯಾಗಿದೆ. ಆದುದರಿಂದ ಪೋಲೀಸ್ ಇಲಾಖೆಗೇ ಸರಿಯಾದ ಪ್ರತ್ಯೇಕವಾದ ಕಟ್ಟಡಗಳನ್ನು ನಿರ್ಮಾಣ ಮಾಡಬೇಕಾದ್ದು ಅವಶ್ಯಕವಾಗಿದೆ. ಇನ್ನು ಇದೇ ರೀತಿಯಗಿ ಜೈಲುಗಳಲ್ಲೂ ಸಹಾ ಅವರವರ ಮತಪದ್ಧತಿಗನುಸಾರವಾಗಿ ಅನುಕೂಲವಾಗುವಂತೆ ಕಟ್ಟಡಗಳನ್ನು ಕಟ್ಟಿಸಬೇಕೆಂದು ಇದಕ್ಕೆ ಸರಿಯಾದ ವ್ಯವಸ್ಥೆ ಇರುವಂತೆ ಮಾಡಬೇಕೆಂದು ಹೇಳುತ್ತೇನೆ.

ಇನ್ನು ದನ ಕುರಿಗಳ ಕಳವು ಜಾಸ್ತಿಯಾಗುತ್ತಿದೆ. ಸಾವಿರಾರು ರೂಪಾಯಿಗಳ ಬೆಲೆ ಬಾಳತಕ್ಕ ದನಗಳನ್ನು ಕಳ್ಳರು ಕೇವಲ ಮಾಂಸದ ಆಸೆಗಾಗಿ ಇಲ್ಲವೆ ಚರ್ಮದ ಆಸೆಗಾಗಿ ಕಳವು ಮಾಡುತ್ತಿದ್ದಾರೆ. ಈ ರೀತಿಯ ಒಂದು ವರ್ತಮಾನ ಸಂಸ್ಥಾನಾಮಳೆ ಕೇಳಿಬರುತ್ತಿದೆ. ಇದನ್ನು ತಡೆಗಟ್ಟಲು ನಾನು ಒಂದು ಸಲಹೆ ಮಾಡುವುದೇನೆಂದರೆ ಕಳ್ಳತನದಲ್ಲಿ ಚರ್ಮವನ್ನು ಮಾರಾಟ ಮಾಡತಕ್ಕವರು ಚರ್ಮದ ಅಂಗಡಿಗಳಿಗೆ ಹೋಗುತ್ತಾರೆ. ಅಲ್ಲಿ ಹೀಗೆ ಚರ್ಮ ಮಾರಾಟ ಮಾಡಲು ಬರತಕ್ಕ ಜನರಿಂದ ಆ ರಾಸುಗಳ ಚಹರೆ ಕೊಡದ ವಿನಾ ಆ ಚರ್ಮವನ್ನು ಅವರು ಕೊಂಡುಕೊಳ್ಳದ ಹಾಗೆ ನಿರ್ಬಂಧಮಾಡಬೇಕು. ಅದನ್ನು ಅವರು ಪಾಲಿಸದಿದ್ದರೆ ಅಂಥ ಅಂಗಡಿಗಳ ಲೈಸೆನ್ಸ್‌ಗಳ ರದ್ದು ಮಾಡುವಂತೆ ಮಾಡಿದರೆ ಆಗ ಈ ಕಳ್ಳತನಗಳು ಸ್ವಲ್ಪ ಮಟ್ಟಿಗಾದರೂ ಕಡಿಮೆಯಾಗಬಹುದು ಅನ್ನುವುದು ನನ್ನ ಅಭಿಪ್ರಾಯ. ಈ ದನ ಕುರಿಗಳ ಕಳ್ಳತನದಿಂದ ರೈತರಿಗೆ ಈ ದಿವಸ ಬಹಳ ತೊಂರೆಯಾಗುತ್ತದೆ. ಜಾನುವಾರಗಳ ಬೆಲೆಯಾದರೋ ವಿಪರೀತ ಜಾಸ್ತಿಯಾಗಿದೆ. ಆದುದರಿಂದ ಈ ಕಳ್ಳತನವನ್ನು ತಡೆಯಲು ಸಂಪೂರ್ಣವಾಗಿ ಬಂದೋಬಸ್ತು ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನು ಬೆಂಗಳೂರಿನಲ್ಲಿರತಕ್ಕ ಸೆಂಟ್ರಲ್ ಜೈಲು ಊರಿನ ಮಧ್ಯಭಾಗದಲ್ಲಿದೆ. ಇದ್ದನು ಬೇರೆ ಕಡೆಗೆ ಬದಲಾಯಿಸುತ್ತೇವೆಂದು ಹೇಳಿದ್ದು 1955 ರಲ್ಲಿ. ಆದರೆ ಇದನ್ನು ಇಲ್ಲಿಗೆ 12 ವರ್ಷಗಳು ಕಳೆದಿದ್ದರೂ ಇನ್ನು ಬದಲಾಯಿಸಿಲ್ಲ. ಕೂಡಲೇ ಇದನ್ನು ಬದಲಾಯಿಸಿ ಬೇರೊಂದು ಸ್ಥಳದಲ್ಲಿ ಒಂದು ಭದ್ರವಾದ ಹೊಸ ಜೈಲನ್ನು ನಿರ್ಮಾಣ ಮಾಡಬೇಕೆಂದು ಹೇಳುತ್ತೇನೆ. ಆದರೆ ನಾನು ಇಲ್ಲಿ ಮಾತನಾಡಬೇಕಾಗಿದ್ದ ವಿಚಾರಗಳು ಇನ್ನು ಬಹಳವಾಗಿದ್ದವು ಆದರೆ ಮಾನ್ಯ ಅಧ್ಯಕ್ಷರು ಬೆಲ್ಲನ್ನು ಹೊಡೆಯುವುದರ ಮೂಲಕ ನನ್ನ ಭಾಷಣವನ್ನು ಮುಗಿಸುವಂತೆ ನನಗೆ ಸೂಚನೆ ಮಾಡುತ್ತಿದ್ದಾರೆ. ನನಗೆ ಅವರ ಮನಸ್ಸಿಗೆ ನೋವುಂಟು ಮಾಡುವುದಕ್ಕೆ ಇಷ್ಟವಿಲ್ಲ. ಇಲ್ಲಿಯವರೆಗೂ ನಾನು ಹೇಳಿರತಕ್ಕ ವಿಷಯಗಳನ್ನು ಮತ್ತು ಈ ಹಿಂದೆ ಮಾತನಾಡಿದ ಶ್ರೀ ಪ್ರಭಾಕರ್ ಅವರು ಹೇಳಿರತಕ್ಕ ವಿಷಯಗಳನ್ನು ಮತ್ತು ಈ ಹಿಂದೆ ನಾವು ಕೊಟ್ಟಿರತಕ್ಕ ಸಲಹೆಗಳನ್ನು ಸರ್ಕಾರದವರು ತಮ್ಮ ಗಮನಕ್ಕೆ ತಂದುಕೊಂಡು ಕಾರ್ಯಗತ ಮಾಡಬೇಕು. ಇಲ್ಲಿ ನಾವುಗಳು ಸೂಚನೆ ಮಾಡಿರತಕ್ಕ ಎಲ್ಲಾ ಸಲಹೆಗಳನ್ನೂ ಮಾನ್ಯ ಮಂತ್ರಿಗಳು ತಮ್ಮ ಚಿತ್ರಕ್ಕೆ ತೆಗೆದುಕೊಂಡು ಅವುಗಳನ್ನು ಬದ್ಧ ರೀತಿಯಲ್ಲಿ ಕಾರ್ಯಗತ ಮಾಡಬೇಕು. ಇನ್ನು ದೇಶದಲ್ಲಿ ಈ ದಿವಸ ಐ.ಜಿ.ಪಿ. ಗಳಾಗಿರತಕ್ಕವರು ಮತ್ತು ಮಾನ್ಯ ಖಾದರಾಲಿಯವರು ದೇಶದ ಭದ್ರತೆಯ ಹೊಣೆಗಾರಿಕೆಗಳನ್ನು

1753-7

ಹೊತ್ತು ಬಹಳ ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆ. ಇಂಥಾ ಅಧಿಕಾರಿಗಳು ದೊರೆಯುವುದು ದುರ್ಲಭ. ನಾವು ಈ ಇಲಾಖೆಯ ವಿಚಾರದಲ್ಲಿ ಇಲ್ಲಿಯವರೆಗೂ ಹೇಳಿರತಕ್ಕದ್ದನ್ನು ಮಾನ್ಯ ಮಂತ್ರಿಗಳು ಕಾರ್ಯಗತ ಮಾಡಬೇಕು, ಹಾಗೆ ಮಾಡದಿದ್ದರೆ ನಾಳೆ ನಾವು ಚುನಾವಣೆಗೆ ಜನರ ಮುಂದೆ ಹೋದಾಗ ಬಹಳ ಕಷ್ಟಕ್ಕೆ ಸಿಕ್ಕಬೇಕಾಗುವುದು. ಅದಕ್ಕೆ ಅವಕಾಶಕೊಡದಂತೆ ಕೆಲಸಗಳನ್ನು ಮಾಡುತ್ತಾರೆಂದು ನಂಬಿದ್ದೇನೆ. ಅವರವರ ಪೋರ್ಟ್ ಪೋಲಿಯೋಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯಾಯ ಮಂತ್ರಿಗಳು ಗಮನಿಸಿ, ಮಾಡುತ್ತಾರೆಂದು ನಂಬಿದ್ದೇನೆ. ಈ ದಿವಸ ನನಗೆ ಇಷ್ಟು ಮಾತನಾಡುವುದಕ್ಕೆ ಅವಕಾಶ ಕಲ್ಪಿಸಿ ಕೊಟ್ಟ ಅಧ್ಯಕ್ಷರಿಗೆ ನನ್ನ ವಂದನೆಗಳನ್ನು ಅರ್ಪಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ. ಜೈಹಿಂದ್.

## ಶಿಕ್ಷಣ ಸುಧಾರಣೆ

**17ನೇ ಜುಲೈ 1967**

ಮಾನ್ಯ ಸಭಾಪತಿಗಳೇ, ನಾನು ಶ್ರೀಮಾನ್ ರಾಮೇಗೌಡರು ಹೇಳಿದ ವಿಷಯಗಳಿಗೆ ಅನುಮೋದನೆ ಕೊಡುತ್ತಾ, ನಮ್ಮ ಮುಂದಿರುವ ವಿದ್ಯಾ ಇಲಾಖೆಯ ಡಿಮ್ಯಾಂಡ್‌ಗಳನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿ, ಕೆಲವು ಸಲಹೆಗಳನ್ನು ಸರ್ಕಾರಕ್ಕೆ ಕೊಡುತ್ತೇನೆ. ಸರ್ಕಾರದವರು ದೇಶದ ಅಭ್ಯುದಯಕ್ಕೋಸ್ಕರವಾಗಿ ಸುಮಾರು 2 ವರ್ಷಗಳಲ್ಲಿ ಸತತವಾಗಿ ಬಹಳ ಹೆಚ್ಚಿನ ಹಣವನ್ನು ಖರ್ಚುಮಾಡಿ ವಿದ್ಯಾಭ್ಯಾಸದ ಮಟ್ಟವನ್ನು ದೇಶದಲ್ಲಿ ಹೆಚ್ಚಿಸಿದ್ದಾರೆ. ಶ್ರೀಮಾನ್ ಕಂಠಿಯವರು ವಿದ್ಯಾ ಮಂತ್ರಿಗಳಾಗಿದ್ದಾಗ ದೇಶದ ನಾನಾ ಭಾಗಗಳಲ್ಲಿ ಪ್ರೌಢ ಶಾಲೆಗಳ್ನನು ಮತ್ತು ಕಾಲೇಜುಗಳನ್ನು ಕಟ್ಟಿಸಿ ವಿದ್ಯಾರ್ಥಿಗಳಿಗೆ ಹೆಚ್ಚಿನ ವಿದ್ಯಾರ್ಜನೆಗೆ ಅವಕಾಶವನ್ನು ಮಾಡಿಕೊಟ್ಟಿದ್ದಾರೆ. ಈ ದಿವಸ ನಮ್ಮ ಶ್ರೀ ಶಂಕರ ಗೌಡರು ವಿದ್ಯಾಮಂತ್ರಿಗಳಾಗಿ ದಯಮಾಡಿಸಿದ್ದಾರೆ. ಅವರು ರೈತರ ಕುಟುಂಬಕ್ಕೆ ಸೇರಿದವರು. ವಿದ್ಯಾಭ್ಯಾಸದಲ್ಲಿ ಹೆಚ್ಚಿನ ಮಾಹಿತಿ ಪಡೆದವರು. ಅನೇಕ ಕಾಲೇಜುಗಳನ್ನು ತೆರೆದು ಸ್ವಂತ ಅನುಭವವನ್ನು ಪಡೆದಿದ್ದಾರೆ. ಈಗ ನಮ್ಮ ಮುಖ್ಯಮಂತ್ರಿಗಳು ಇವರನ್ನು ವಿದ್ಯಾ ಮಂತ್ರಿಗಳನ್ನಾಗಿ ಮಾಡಿದ್ದಾರೆ. ದೇಶದ ಅಭ್ಯುದಯಕ್ಕಾಗಿ ಅವರ ಕಾಲದಲ್ಲಿ ಈಗಿರತಕ್ಕಂಥ ವಿದ್ಯಾಭ್ಯಾಸದ ಮಟ್ಟವನ್ನು ಉತ್ತಮಪಡಿಸಬೇಕೆಂದು ಕೇಳಿಕೊಳ್ಳುತ್ತೇನೆ. ಈಗಿರತಕ್ಕಂಥ ಮಟ್ಟವೆಂದರೆ, ಇಂಜಿನಿಯರಿಂಗ್ ಸ್ಕೂಲು ಮತ್ತು ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡಿ ಪಾಸಾದ ಯುವಕರು ಮೂರು ನಾಲ್ಕು ಸಾವಿರದವರೆಗೆ ಕೆಲಸವಿಲ್ಲದೆ

ಕೂತಿದ್ದಾರೆ. ಅವರು ಕೆಲಸವಿಲ್ಲದೆ ತಪಸ್ಸು ಮಾಡುತ್ತಿದ್ದಾರೆ. ಸರ್ಕಾರಕ್ಕೆ ನಾನು ಮನವಿ ಮಾಡಿಕೊಳ್ಳುವುದೇನೆಂದರೆ ಎಲ್ಲಾ ಶಾಲೆಗಳಲ್ಲೂ ವೃತ್ತಿ ಶಿಕ್ಷಣವನ್ನು ಪ್ರಾರಂಭ ಮಾಡಿಸಿ. ವಿದ್ಯಾರ್ಥಿಗಳಿಗೆ ಅನುಗುಣವಾದ ವೃತ್ತಿ ಶಿಕ್ಷಣವನ್ನು ಹೇಳಿಕೊಟ್ಟರೆ ದೇಶದ ಅಭ್ಯುದಯವಾಗುತ್ತದೆ. ಮುಂದೆ ಸರ್ಕಾರದ ಕೆಲಸಕ್ಕೆ ಯಾರೂ ಕಾಯದೆ ತಮ್ಮ ವೃತ್ತಿಯನ್ನು ತಾವೇ ಮಾಡಿಕೊಳ್ಳುತ್ತಾರೆ.

ಇನ್ನು ಮೈಸೂರು ಸಂಸ್ಥಾನದ ಅನೇಕ ಗ್ರಾಮಗಳಲ್ಲಿ ವಿದ್ಯಾಭ್ಯಾಸದ ಪ್ರಗತಿ ಚಿಂತಾಜನಕವಾಗಿದೆ. ಇದು ಶ್ರೀಮಾನ್ ಶಂಕರಗೌಡರಿಗೆ ಗೊತ್ತಿದೆ. ಏಕೆಂದರೆ ಆಯಾ ತಾಲ್ಲೂಕಿನವರೇ ಉಪಾಧ್ಯಾಯರುಗಳು ಇರುವುದರಿಂದ, ಅವರು ಸ್ವಂತ ಕಸಬಿಗೆ ಹೆಚ್ಚಿನ ಗಮನ ಕೊಟ್ಟು ವಿದ್ಯಾರ್ಥಿಗಳಿಗೆ ಸರಿಯಾಗಿ ಪಾಠವನ್ನು ಕಲಿಸುತ್ತಿಲ್ಲ. ಸ್ಕೂಲ್ ಪಕ್ಕದಲ್ಲೇ ಇವರ ಮನೆಗಳಿರುತ್ತವೆ ಆದ್ದರಿಂದ ಇಂತಹವರನ್ನು ದೂರದ ತಾಲ್ಲೂಕುಗಳಿಗೆ ವರ್ಗ ಮಾಡಿಸಿ ಈಗಿರತಕ್ಕಂಥ ಅನಾನುಕೂಲಗಳನ್ನು ಉತ್ತಮಪಡಿಸುವುದಕ್ಕೆ ವಿದ್ಯಾಮಂತ್ರಿಗಳ ಸಹಾಯಕರಾಗಬೇಕೆಂದು ಈ ಮೂಲಕ ಅವರನ್ನು ಒತ್ತಾಯ ಪಡಿಸುತ್ತೇನೆ. ಶ್ರೀಮಾನ್ ವೆಂಕಟಪ್ಪನವರು ವಿದ್ಯಾಮಂತ್ರಿಗಳಾಗಿದ್ದಾಗ ಈ ವಿಷಯವನ್ನು ಕಾರ್ಯರೂಪದಲ್ಲಿ ತರಬೇಕೆಂದು ಸರ್ಕಾರದ ಆರ್ಡರನ್ನು ಹೊರಡಿಸುವ ಕಾಲಕ್ಕೆ ಯಾವ ಕಾರಣದಿಂದಲೋ ನಿಂತುಹೋಯಿತು. ಈಗ ಬಂದಿರುವ ವಿದ್ಯಾಮಂತ್ರಿಗಳು ಅದನ್ನು ಕಾರ್ಯಗತ ಮಾಡಿ, ದೇಶಕ್ಕೆ ಖರ್ಚುಮಾಡುವಂತಹ ಹಣ ಉತ್ತಮ ರೀತಿಯಿಂದ ಸಾರ್ವಜನಿಕರಿಗೆ ಅನುಕೂಲವಾಗುವಂತೆ, ಲಾಭವಾಗುವಂತೆ ಇರಬೇಕು. ಮಾಗಡಿಯಲ್ಲಿ ಹರಿಜನರ ಹಾಸ್ಟಲನ್ನು ಕಟ್ಟುವ ಸಲುವಾಗಿ ಒಂದು ಜಾಗವನ್ನು ಸ್ವಾಧೀನಪಡಿಸಿಕೊಂಡು 10 ವರ್ಷವಾದರೂ ಸಹ ಇನ್ನೂ ಕಟ್ಟಿಸಿಲ್ಲ. ಆ ಜಾಗ ಸರ್ಕಾರದ ಅಧೀನದಲ್ಲಿದೆ. ನಾನು ಸರ್ಕಾರಕ್ಕೆ ಹೇಳುವುದು ಇಷ್ಟೆ. ಇನ್ನು ಮೇಲೆ ಸಾರ್ವಜನಿಕ ಹಾಸ್ಟಲ್‌ಗಳನ್ನು ಕಟ್ಟಿಸಬೇಕೇ ವಿನಾ ಜಾತಿ, ಕುಲಗೋತ್ರಗಳ ಹೆಸರಿನಲ್ಲಿ ಹಾಸ್ಟೆಲ್‌ಗಳನ್ನು ಕಟ್ಟಿಸುವುದನ್ನು ರದ್ದು ಮಾಡಬೇಕು. ಸಾರ್ವಜನಿಕರ ಹಾಸ್ಟಲ್‌ಗಳನ್ನು ಕಟ್ಟಿಸುವಾಗ ಭಿನ್ನಾಭಿಪ್ರಾಯಗಳು ಬಾರದ ರೀತಿಯಲ್ಲಿ ನಮ್ಮ ಸರ್ಕಾರದವರು ವ್ಯವಸ್ಥೆ ಮಾಡಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಇನ್ನು ಮೇಲೆ ಕಾಲೇಜುಗಳನ್ನು ಮತ್ತು ದೊಡ್ಡ ದೊಡ್ಡ ತಾಂತ್ರಿಕ ವಿದ್ಯಾಭ್ಯಾಸದ ಕಾಲೇಜುಗಳನ್ನು ಬರೀ ಪಟ್ಟಣಗಳಲ್ಲಿ ಸ್ಥಾಪನೆ ಮಾಡಬಾರದೆಂದು ಸರ್ಕಾರಕ್ಕೆ ಕೇಳಿಕೊಳ್ಳುತ್ತೇನೆ. ಪ್ರತಿ ತಾಲ್ಲೂಕ್

ಹೆಡ್‌ಕ್ವಾರ್ಟರ್ಸ್‌ಗಳಲ್ಲಿ ಕಾಲೇಜುಗಳನ್ನು ಸ್ಥಾಪನೆ ಮಾಡುವುದರಿಂದ ಗ್ರಾಮಾಂತರ ಪ್ರದೇಶಗಳಿಂದ ಬರುವ ವಿದ್ಯಾರ್ಥಿಗಳಿಗೆ ಮುಂದಿನ ವಿದ್ಯಾಭ್ಯಾಸ ಮಾಡಲು ಅನುಕೂಲವಾಗುತ್ತದೆ. ಪಟ್ಟಣಗಳಿಗೆ ಬರುವುದು ತಪ್ಪುತ್ತದೆ. ಮುಂದೆ ಅವರು ವಿಧ್ಯಾಭ್ಯಾಸ ಮುಗಿದ ಮೇಲೆ ತಮ್ಮ ತಮ್ಮ ಕಸುಬುಗಳನ್ನು ತಾವೇ ಮಾಡಿಕೊಂಡು, ತಂದೆ ತಾಯಿಗಳಿಗೆ ಭಾರವಾಗದೆ, ಕುಟುಂಬದ ಪೋಷಣೆ ಮಾಡಿಕೊಂಡು ಹೋಗುತ್ತಾರೆ. ಉದ್ಯೋಗಕ್ಕಾಗಿ ಅಲೆಯುವುದು ತಪ್ಪುತ್ತದೆ. ಈ ವಿಚಾರಗಳನ್ನು ಮನಗಂಡು ನಮ್ಮ ಸರ್ಕಾರದವರು ಇನ್ನು ಮೇಲೆ ಎಲ್ಲಾ ರೀತಿಯ ವಿಧ್ಯಾಭ್ಯಾಸದ ವ್ಯವಸ್ಥೆಯನ್ನು ಪಟ್ಟಣಗಳಲ್ಲೇ ಪ್ರಾರಂಭಿಸುವುದನ್ನು ನಿಲ್ಲಿಸಿ ಮೈಸೂರು ಸಂಸ್ಥಾನದ ಎಲ್ಲಾ ತಾಲ್ಲೂಕ್ ಹೆಡ್‌ಕ್ವಾರ್ಟರ್ಸ್‌ಗಳಲ್ಲಿ ಪ್ರಾರಂಭ ಮಾಡಿಸಬೇಕು. ಮತ್ತು ಆಯಾ ಜಿಲ್ಲೆಗಳಿಗೆ ಅನುಗುಣವಾದ ರೀತಿಯಲ್ಲಿ ತಾಂತ್ರಿಕ ವಿದ್ಯೆಗಳನ್ನು ಕಲಿಸಬೇಕು. 1927ರಿಂದಲೂ ನಾನು ಇಲ್ಲಿದ್ದೇನೆ. ವಿದ್ಯಾಭ್ಯಾಸದ ಖರ್ಚಿಗಾಗಿ 33 ಕೋಟಿ ರೂಪಾಯಿಗಳನ್ನು ಖರ್ಚು ಮಾಡುವಾಗ ರೈತರ ಮಕ್ಕಳು ಮುಂದುವರಿಯದಿದ್ದರೆ ಅನ್ಯಾಯವಾಗುತ್ತದೆ. ರೈತರ ಮಕ್ಕಳು ಸಹ ವಿದ್ಯಾವಂತರಾಗಬೇಕು. ಈಗ ಹೆಚ್ಚಿನ ಹಣ ಪಟ್ಟಣವಾಸಿಗಳಿಗೆ ಖರ್ಚಾಗುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಿರುವ ಜನಗಳು ಬಡವರು. ತುಂಬಾ ದರಿದ್ರಾವಸ್ಥೆಯಲ್ಲಿರುತ್ತಾರೆ. ಅವರು ವಿದ್ಯಾವಂತರಾಗುವುದಕ್ಕೆ ಬಹಳ ತೊಂದರೆಯಾಗಿದೆ. ಇದು ಸರ್ಕಾರಕ್ಕೆ ಗೊತ್ತಿರತಕ್ಕ ಅಂಶ. ನಮ್ಮ ವಿದ್ಯಾಮಂತ್ರಿಗಳಾದ ಶ್ರೀಮಾನ್ ಗೌಡರಿಗೆ ಗ್ರಾಮಾಂತರ ಪ್ರದೇಶಗಳಲ್ಲಿನ ಜನಗಳ ಸ್ಥಿತಿಗತಿಗಳೆಲ್ಲವೂ ಚೆನ್ನಾಗಿ ಗೊತ್ತಿದೆ. ಈ ವಿಚಾರದಲ್ಲಿ ನಾನು ಹೆಚ್ಚು ಹೇಳುವುದಕ್ಕೆ ಕಾಲಾವಕಾಶವಿಲ್ಲ. ಒಟ್ಟಿನಲ್ಲಿ ವಿಧ್ಯಾಭ್ಯಾಸದ ವ್ಯವಸ್ಥೆ ಸರ್ವತೋಮುಖವಾಗಿ ದೇಶದ ಎಲ್ಲಾ ಭಾಗಕ್ಕೂ ಅನ್ವಯವಾಗುವ ಹಾಗೆ ಅನುಕೂಲಮಾಡಿಕೊಡಬೇಕೆಂದು ನಾನು ಹೇಳುತ್ತೇನೆ.

ಇನ್ನು ಉಪಾಧ್ಯಾಯರ ವ್ಯವಸ್ಥೆಯನ್ನು ಮಾತ್ರ ಈಗ ಉಪಾಧ್ಯಾಯರು ಯಾವ ಯಾವ ತಾಲ್ಲೂಕುಗಳಲ್ಲಿದ್ದಾರೆಯೋ ಅವರು ಆಯಾ ತಾಲ್ಲೂಕುಗಳಲ್ಲಿಯೇ ಇದ್ದುಕೊಂಡು ಅವರವರ ಮನೆ ಮಠಗಳ ಕೆಲಸಗಳನ್ನು ಮಾಡಿಕೊಂಡು ಹೋಗುವುದಕ್ಕೆ ಅವಕಾಶವನ್ನು ಕೊಡದಂತೆ ಅವರನ್ನು ಬೇರೆ ಬೇರೆ ತಾಲ್ಲೂಕುಗಳಿಗೆ ವರ್ಗ ಮಾಡತಕ್ಕ ಒಂದು ನಿಯಮಾವಳಿಯನ್ನು ಗೊತ್ತುಮಾಡಬೇಕು. ಸ್ಕೂಲ್ ಕಟ್ಟಡಗಳನ್ನು ಕಟ್ಟತಕ್ಕ ಜವಾಬ್ದಾರಿಯನ್ನು ತಾಲ್ಲೂಕು ಬೋರ್ಡ್‌ಗಳಿಗೆ ವಹಿಸುವುದರಿಂದ ಅದು ಸರಿಯಾದ ರೀತಿಯಲ್ಲಿ ನಡೆಯುವುದಿಲ್ಲ. ಆದ್ದರಿಂದ

ಸರ್ಕಾರದವರೇ ಅದಕ್ಕೆ ಹಣವನ್ನು ಒದಗಿಸಬೇಕು. ಗ್ರಾಮಾಂತರ ಪ್ರದೇಶಗಳಲ್ಲಿರುವ ಬಡಜನರಿಗೆ ವಿಧ್ಯಾಭ್ಯಾಸವನ್ನು ಒದಗಿಸಿಕೊಡಬೇಕೆಂದು ಸರ್ಕಾರದವರನ್ನು ಪ್ರಾರ್ಥಿಸಿಕೊಂಡು ಅಧ್ಯಕ್ಷರು ನನಗೆ ಮಾತನಾಡುವುದಕ್ಕೆ 5 ನಿಮಿಷ ಕಾಲಾವಕಾಶವನ್ನು ಕೊಟ್ಟಿದ್ದಕ್ಕಾಗಿ ಅವರಿಗೆ ವಂದಿಸಿ ನಾನು ನನ್ನ ಮಾತನ್ನು ಮುಗಿಸುತ್ತೆನೆ.

## ಅಣೆಕಟ್ಟುಗಳ ನೀರಿನ ವಿತರಣೆ ಸರಿಯಾಗಿ ಆಗಲಿ

**25ನೇ ಜುಲೈ 1967**

ಈ ದಿವಸ ನಮ್ಮ ಮುಂದೆ ಮೂರು ದಿವಸಗಳಿಂದಲೂ ಚರ್ಚೆಯಾಗುತ್ತಾ ಇರತಕ್ಕ ಈ 6 ಡಿಮ್ಯಾಂಡ್‌ಗಳನ್ನೂ ಅನುಮೋದಿಸುತ್ತಾ ನಾನು ಕೆಲವು ವಿಷಯಗಳನ್ನು ಸರ್ಕಾರದವರ ಗಮನಕ್ಕೆ ತರಲಿಚ್ಛಿಸುತ್ತೇನೆ. ಮಾನ್ಯ ಸಭಾಪತಿಗಳೇ ಈಗ ನೀರಾವರಿ ವಿಚಾರದಲ್ಲಿ ಅನೇಕ ಅನುಕೂಲಗಳನ್ನು ನಮಗೆಲ್ಲರಿಗೂ ಈ ಇಪ್ಪತ್ತು ವರ್ಷಗಳಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಯಶಸ್ವಿಯಾದ ಮಾರ್ಗವನ್ನು ಅನುಸರಿಸಿ ಮಾಡಿಕೊಂಡು ಬರುತ್ತಾ ಇದ್ದಾರೆ. ತುಂಗಾ, ಭದ್ರಾ, ತುಂಗಭದ್ರಾ ಇನ್ನೂ ಅನೇಕ ಜಲಾಶಯಗಳು ಇವೆ. ಇವುಗಳ ಹಿಂದಿನ ಅಚ್ಚುಕಟ್ಟಿನಲ್ಲಿ ಆಗತಕ್ಕ ಬೆಳೆಗಳು ಪೂರ್ಣ ಫಲಕಾರಿಯಾಗಿ ದೇಶದ ಅಭ್ಯುದಯಕ್ಕೆ ಧಾನ್ಯ ಒದಗಿಸುವುದರ ಕಡೆಗೆ ತೀವ್ರಾಸಕ್ತಿಯನ್ನು ವಹಿಸಿ ಕಾರ್ಯಕ್ರಮವನ್ನು ಕೈಗೊಳ್ಳಬೇಕೆಂದು ಸಲಹೆ ಮಾಡುತ್ತಾ ಇದ್ದೇನೆ.

## ಅರಣ್ಯ ಭೂಮಿ ಮತ್ತು ಗೋಮಾಳಗಳನ್ನು ಬಡರೈತರಿಗೆ ಹಂಚಿಬಿಡಿ

7. ಪಿ.ಎಂ

ಮಾನ್ಯ ಸಭಾಪತಿಗಳೇ, ಮೈಸೂರು ಸಂಸ್ಥಾನದಲ್ಲಿರತಕ್ಕ ನಿರ್ಜನವಾದ ಫಾರೆಸ್ಟ್ ಮತ್ತು ಗೋಮಾಳಗಳನ್ನು ಆಯಾಯಾ ಊರಿನ ಜನರಿಗೆ ಅವುಗಳನ್ನು ಹಂಚುವುದರ ಮೂಲಕ ವ್ಯವಸಾಯದ ಅಭಿವೃದ್ಧಿಯನ್ನು ಮುಂದುವರಿಸುವುದಕ್ಕೆ ನಮ್ಮ ಸರ್ಕಾರದವರು ಅವಕಾಶ ಮಾಡಿಕೊಡಬೇಕು. ಅಂತಹ ಜಮೀನು ನನ್ನ ತಾಲ್ಲೂಕಿನಲ್ಲಿ 2–3 ಸಾವಿರಕ್ಕೂ ಮೇಲ್ಪಟ್ಟು ಇವೆ. ಅವುಗಳು ಅನಾವಶ್ಯಕವಾಗಿ ಜಮೀನ್ದಾರರ ವಶಕ್ಕೆ ಹೋಗಿವೆ. ಅವುಗಳನ್ನು ಬಿಡುಗಡೆ ಮಾಡಬೇಕು.

ದೇಶಾದ್ಯಂತ ಈ ರೀತಿ ಒತ್ತುವರಿಯಾಗಿರತಕ್ಕ ಜಮೀನನ್ನು ಬಿಡುಗಡೆ ಮಾಡುವುದರಿಂದ ಬಡ ಜನರಿಗೆ ಆ ಜಮೀನುಗಳನ್ನು ಹಂಚುವುದಕ್ಕೆ ಅವಕಾಶವಾಗುತ್ತದೆ ಎಂಬ ಅಂಶವನ್ನು ಈ ಮೂಲಕ ನಾನು ತಮ್ಮ ಗಮನಕ್ಕೆ ತರುತ್ತೇನೆ. ಮೈಸೂರು ದೇಶದಲ್ಲಿ ಆಹಾರದ ಅಭಾವವಾಗಿ ಕಷ್ಟ ಪರಿಸ್ಥಿತಿ ಉಂಟಾಗಿರುವುದರಿಂದ ಜನರು ಪಟ್ಟಣಗಳಿಗೆ ಹೋಗಬೇಕಾದ ಸಂದರ್ಭ ಒದಗಿದೆ, ಅದು ತಪ್ಪಬೇಕಾದರೆ ಸರಕಾರದವರು ಪ್ರತಿ ತಾಲ್ಲೂಕಿನಲ್ಲೂ ಕೈಗಾರಿಕೆಗಳನ್ನು ವ್ಯವಸ್ಥೆಗೊಳಿಸಬೇಕು, ವಿಕೇಂದ್ರೀ ಕೃತವಾಗಬೇಕು. ಎಲ್ಲಿನವರೆಗೆ ಅದು ಆಗುವುದಿಲ್ಲವೋ ಅಲ್ಲಿಯವರೆಗೆ ಆಹಾರದ ಅನಾನುಕೂಲ ಹೆಚ್ಚುತ್ತಲೇ ಹೋಗುತ್ತದೆ. ಕಾರಣವಾದರೂ ಇಷ್ಟೇ ಹಳ್ಳಿಗಳಿಂದ ಅನೇಕ ಮಂದಿ ಪಟ್ಟಣಗಳಿಗೆ ಬಂದಿದ್ದರ ಕಾರಣವಾಗಿ ಧಾನ್ಯಗಳನ್ನು ಒದಗಿಸತಕ್ಕ ಕಾರ್ಯದಲ್ಲಿ ಸರ್ಕಾರ ತೀವ್ರಾಸಕ್ತಿಯನ್ನು ಹೊಂದಿದೆ. ಇದನ್ನು ಅನೇಕ ಸಾರಿ ಸರ್ಕಾರಕ್ಕೆ ತಿಳಿಸಿದ್ದೇನೆ. ಅದಕ್ಕೆ ಪ್ರಭುತ್ವ; ಪೂರ್ಣಮನಸ್ಸು ಮಾಡಿಲ್ಲ. ನಮ್ಮ ವಿಚಾರಗಳನ್ನು ಅನೇಕ ಸಾರಿ ಸೂಕ್ತವಾದಂತಹ, ದೇಶಕ್ಕೆ ಅನುಕೂಲವಾದಂತಹ ಯೋಜನೆಗಳನ್ನು, ಸಲಹೆಗಳನ್ನು ಕೊಡದೇ ಮಾರಿ ಕಣ್ಣು ಹೋತನ ಮೇಲೆ ಅಂತ ಅನ್ನುವಂತೆ ಆಗುತ್ತಾ ಇರುವುದು ನನ್ನ ಅನುಭವದಲ್ಲಿ ಇದೆ. ಅದರಂತೆ ಮಾನ್ಯ ಚೀಫ್ ಮಿನಿಸ್ಟರ್ ಅವರ ಮೇಲೆ ಅವರಿಗೆ ವ್ಯವಸಾಯದಲ್ಲಿ ಪರಿಶ್ರಮ ಇಲ್ಲ, ಅವರು ಆ ಇಲಾಖೆಯನ್ನು ಬಿಟ್ಟು ಕೊಡಬೇಕು ಎಂದು ಹೇಳಿ ಶ್ರೀಮಾನ್ ಸಿದ್ದವೀರಪ್ಪನವರು ಅವರ ಭಾಷಣದಲ್ಲಿ ಹೇಳಿದರು. ಅವರಿಗೆ ಈ ಮೂಲಕ ಹೇಳಬೇಕಾಗಿದೆ. ಏನೆಂದರೆ ದಿವಾನ್ ಸರ್. ಎಂ. ವಿಶ್ವೇಶ್ವರಯ್ಯನವರು ಎಲೆಕ್ಟ್ರಿಸಿಟಿ ಉತ್ಪಾದನೆ ಮಾಡಿದಾಗ, ದೊಡ್ಡ ದೊಡ್ಡ ನೀರಾವರಿ ಯೋಜನೆಗಳನ್ನು ಮಾಡಿಸಿದಾಗ, ಅವರೇ ಕಾಲುವೆಗಳನ್ನು ತೆಗೆದು ಆ ಮೂಲಕ ನೀರನ್ನು ಬಿಡಿಸಲಿಲ್ಲ, ಅವರು ಕರೆಂಟ್ ಹತ್ತಿರ ಕೆಲಸ ಮಾಡಲಿಲ್ಲ. ಅನುಭವ, ದಕ್ಷತೆ ಅವರಿಗೆ ಇರತಕ್ಕ ತೀವ್ರಾಸಕ್ತಿ ಇವುಗಳಿಂದ ದೇಶಕ್ಕೆ ಆಗಬೇಕಾದ ಸೌಲಭ್ಯಗಳನ್ನು ಲಭ್ಯಮಾಡಬೇಕೆಂಬ ಒಂದು ಮನೋಭಾವ ಇರತಕ್ಕ ಮುಖ್ಯ ಮಂತ್ರಿಗಳು ಈ ಸಾರಿ ನಮಗೆ ದೊರೆತಿದ್ದಾರೆ. ಅವರ ಬಗ್ಗೆ ನಾನೂ ಇನ್ನೇನೂ ಹೆಚ್ಚಿಗೆ ಹೇಳುವುದಿಲ್ಲ. ಅವರ ಕಾಲದಲ್ಲಿ ಹೆಚ್ಚಿನ ನೀರಾವರಿ ಕಾಂಗಾರಿಗಳು, ಕೈಗಾರಿಕೆಗಳು ಆಗುತ್ತಾ ಇವೆ. ಹೋದ ಸಾರಿ ಆಗಬೇಕಾಗಿರುವ ಕೈಗಾರಿಕೆಗಳು ಕುಂಠಿತವಾಗಿ ದೇಶಕ್ಕೆ ಆಗಬೇಕಾದ ಸೌಲಭ್ಯ ತೀರ ಕಮ್ಮಿಯಾಯಿತು, ಅದಕ್ಕೆ ಕಾರಣಗಳು ಸರ್ಕಾರದವರಿಗೆ ಗೊತ್ತಿದೆ ಮುಂದಾದರೂ ಕೈಗಾರಿಕೆಗಳನ್ನು ಹೆಚ್ಚಿನ ರೀತಿಯಲ್ಲಿ ಹೊರಗಡೆಯಿಂದ ಬರತಕ್ಕ ಹಣವನ್ನು

ಒದಗಿಸಿ ಅದಕ್ಕೆ ನಿಮ್ಮ ಗಮನವನ್ನು ಕೊಡುತ್ತೀರಿ ಎಂದು ನಾನು ನಂಬಿದ್ದೇನೆ. ಮಂಡ್ಯದಲ್ಲಿ ಇದ್ದ ಸಕ್ಕರೆ ಕಾರ್ಖಾನೆ ಕಾರಣಾಂತರಗಳಿಂದ ನಿಂತು ಹೋಗಿ ಅದರಿಂದ ಬರತಕ್ಕ ಲಾಭ ಹೋಗಿದೆ, ಅನ್ಯಾಯವಾಗಿದೆ. ಅದು ನಿಂತಿದ್ದದ ಫಲವಾಗಿ ಸಕ್ಕರೆ ಉತ್ಪಾದನೆಗೆ ತೀರಾ ಅನಾನುಕೂಲವಾಗಿದೆ. ಅಂತಹ ದೊಡ್ಡ ದೊಡ್ಡ ಕಾರ್ಖಾನೆಗಳನ್ನು ಮುಂದುವರಿಸುವುದಕ್ಕೆ ಹೆಚ್ಚಿನ ಗಮನವನ್ನು ಕೊಡದೇ ಇರುವುದು ಸರಿಯಲ್ಲ, ಅನ್ಯಾಯವಾಗತಕ್ಕ ಮಾರ್ಗಕ್ಕೆ ಸರಕಾರ ಕೈ ಒಡ್ಡಬಾರದು ಎಂದು ಹೇಳುತ್ತೇನೆ.

## ಮಾಗಡಿ ತಾಲ್ಲೂಕು ಬೆಂಗಳೂರಿಗೆ ನೀರು ಒದಗಿಸುತ್ತಿದೆ.

ಮಾಗಡಿ ತಾಲ್ಲೂಕಿನಲ್ಲಿ ಮಣ್ಣಿಗನಹಳ್ಳಿ ಚುಂಚನಕುಪ್ಪೆ, ತಾವರೆಕೆರೆ ಮುಂತಾದ ಕೆರೆಗಳ ಕೋಡಿ ದುರಸ್ತಿಯಾಗದೆ ನಿಂತು ಹೋಗಿದೆ. ಮಾಗಡಿ ತಾಲ್ಲೂಕು ಪ್ರಸಿದ್ಧವಾದ ಮಾಗಡಿ ಕೆಂಪೇಗೌಡನಿಗೆ ಜನ್ಮ ಕೊಟ್ಟ ಸ್ಥಳ. ಅವನು ಕಲ್ಯಾಣ ನಗರವಾದ ಈ ಬೆಂಗಳೂರನ್ನು ಸ್ಥಾಪನೆ ಮಾಡಿದ ಆಚಾರ್ಯ ಪುರುಷ, ಬೆಂಗಳೂರಿನ 18 ಲಕ್ಷ ಜನಗಳಿಗೆ ಕುಡಿಯುವ ನೀರನ್ನು ಒದಗಿಸತಕ್ಕ ತಾಲ್ಲೂಕು ಮಾಗಡಿ, ಅಲ್ಲಿಂದ ನೀರಾವರಿಯನ್ನು ಮಾಡುವುದಕ್ಕೆ ಸೌಲಭ್ಯ ಕಡಿಮೆಯಾಗಿದೆ. ಅರ್ಕಾವತಿಯಿಂದ ನೀರನ್ನು ಒದಗಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತಾ ಇಲ್ಲ, ತಿಪ್ಪಗೊಂಡನಹಳ್ಳಿ ಜಲಾಶಯದಿಂದಲೇ ನೀರನ್ನು ಒದಗಿಸಿಕೊಳ್ಳಬೇಕು, ಆದ್ದರಿಂದ ಅಲ್ಲಿ ಬಾವಿ ತೋಡುವುದಕ್ಕೆ ಹೆಚ್ಚಿನ ಸೌಲಭ್ಯಗಳನ್ನು ಒದಗಿಸಿಕೊಡಬೇಕೆಂದು ಹೇಳುತ್ತೇನೆ. ಮಾನ್ಯ ಮುಖ್ಯಮಂತ್ರಿಗಳು ಅವರು ಅಧಿಕಾರಕ್ಕೆ ಬಂದ ತಕ್ಷಣ ದೇಶದಾದ್ಯಂತ ಡೆವಲಪ್‌ಮೆಂಟ್ ಬ್ಯಾಂಕ್‌ಗಳ ಮೂಲಕ ಬಾವಿ ತೋಡುವುದಕ್ಕೆ ಹಣವನ್ನು ಒದಗಿಸಿ ಕಮ್ಮಿ ಬಡ್ಡಿ ದರದಲ್ಲಿ ಕೊಡುವಂತಹ ಒಂದು ಸೌಕರ್ಯವನ್ನು ಕಲ್ಪಿಸಿಕೊಟ್ಟಿದ್ದಾರೆ. ಹಾಗೆಯೇ ತೆಂಗು, ಅಡಿಕೆ ವಗೈರೆ ಹೆಚ್ಚಿನ ಬೆಳವಣಿಗೆಗೂ ಕೂಡ ಗಮನ ಕೊಟ್ಟು ಅವಕ್ಕೆ ಹಣವನ್ನು ಒದಗಿಸುವುದರಿಂದ ವ್ಯವಸಾಯದ ಅಭಿವೃದ್ಧಿಗೆ ಅವರು ಕಾರಣರಾಗುತ್ತಾರೆ ಎಂದು ನಾನು ತಿಳಿಯುತ್ತೇನೆ.

ಜಮೀನ್ದಾರಿ ಪದ್ಧತಿ ಭೂಸುಧಾರಣಾ ಕಾನೂನು ಜಾರಿಗೆ ಬಂದ ಮೇಲೆ ನಮ್ಮ ತಾಲ್ಲೂಕಿನಲ್ಲಿ ಕೋರ್ಟ್ ಆಗಬೇಕೆಂದು ಕೇಳಿಕೊಂಡಿದ್ದೆವು, ವೈಯಕ್ತಿಕವಾಗಿಯೂ ಹೇಳಿದ್ದೇನೆ. ಕಾರಣ ಇಷ್ಟೇ, ಅನೇಕ ರೈತರು ತಮ್ಮ ಮನೆ

ಮಠಗಳನ್ನು ಬಿಟ್ಟು ಕೋರ್ಟುಗಳಿಗೆ ಅಲೆಯುತ್ತಾ ಇದ್ದಾರೆ. ಅದರಲ್ಲಿ ಅನೇಕ ತೊಡಕುಗಳು ಇರುವುದರಿಂದ ಅದನ್ನು ಜಾಗ್ರತೆ ವ್ಯವಸ್ಥೆ ಮಾಡಿ ಮಾಗಡಿ ತಾಲ್ಲೂಕಿನಲ್ಲಿ ಮುನ್ಸೀಫ್ ಮ್ಯಾಜಿಸ್ಟ್ರೇಟ್ ಕೋರ್ಟನ್ನು ಸ್ಥಾಪನೆ ಮಾಡಬೇಕು. ಮಲ್ಲಪ್ಪನವರ ಕಾಲದಲ್ಲಿ ಒಂದು ತೀರ್ಮಾನಕ್ಕೆ ಬಂದು, ಅದರ ರೆಕಾರ್ಡ್ ಕೂಡ ನಡೆದಿದೆ, ಆದರೆ ಕಾರ್ಯಗತವಾಗಿಲ್ಲ ಇನ್ನಾದರೂ ಅದನ್ನು ಕಾರ್ಯಗತ ಮಾಡಿಸಿಕೊಡಬೇಕೆಂದು ಹೇಳುತ್ತೇನೆ.

## ಗ್ರಾಮಗಳಲ್ಲಿ ಕೈಗಾರಿಕೆ ಸ್ಥಾಪಿಸಿ, ನಿರುದ್ಯೋಗ ತಪ್ಪಿಸಿ

ನಮ್ಮ ರೈತರ ಮಕ್ಕಳು ಗ್ರಾಮಾಂತರ ಪ್ರದೇಶಗಳನ್ನು ಬಿಟ್ಟು ಬೆಂಗಳೂರು ಪಟ್ಟಣಕ್ಕೆ ಬರುತ್ತಾ ಇದ್ದಾರೆ. ಅದಕ್ಕೇ ಗ್ರಾಮಾಂತರಗಳಲ್ಲಿ ಹೆಚ್ಚಿನ ಕೈಗಾರಿಕೆಗಳನ್ನು ಮಾಡಬೇಕೆಂದು ಮತ್ತೊಮ್ಮೆ ಪ್ರಾರ್ಥಿಸುತ್ತೇನೆ. ಶಾಸನ ಸಭೆಯಲ್ಲಿ ನಾವು ಕುಳಿತು ಹೇಳತಕ್ಕ ಕೆಲಸಗಳನ್ನು ಕಾರ್ಯಗತ ಮಾಡದೇ ಇದ್ದ ಪಕ್ಷದಲ್ಲಿ ಚುನಾಯಿತರಾಗಿ ಬಂದಿದ್ದಕ್ಕೆ ಸರ್ಕಾರದಲ್ಲಿ ನಮಗೆ ಪ್ರಯೋಜನ ದೊರೆಯಲಿಲ್ಲ ಅನ್ನುವಂತಹ ಅಭಿಪ್ರಾಯ ಆಯಾಯಾ ಪ್ರಾಂತ್ಯದ ಜನರಲ್ಲಿ ಉಂಟಾಗುತ್ತದೆ. ಆದ್ದರಿಂದ ನಾವು ಹೇಳತಕ್ಕ ಕಾರ್ಯಗಳನ್ನು ಕಾರ್ಯಗತ ಮಾಡಿಕೊಡಬೇಕೆಂದು ಹೇಳಿ ಮಾನ್ಯ ಸಭಾಪತಿಗಳನ್ನು ಬಹಳ ಕಾಲದಿಂದ ಕಾದಿದ್ದರೂ ಕೂಡ ಕಾಲಾವಕಾಶ ಐದು ನಿಮಿಷ ಮಾತ್ರ ಸಿಕ್ಕಿದೆ, ಇನ್ನು ಹೆಚ್ಚು ವಿಷಯಗಳನ್ನು ತಿಳಿಸಬೇಕಾಗಿತ್ತು. ಬೇರೆ ಸಂದರ್ಭದಲ್ಲಿ ಈ ವಿಷಯಗಳನ್ನು ಹೇಳಲು ಪ್ರಯತ್ನ ಪಡುತ್ತೇನೆ ಎಂದು ಹೇಳಿ ಸಭಾಪತಿಯವರಿಗೆ ನನ್ನ ಧನ್ಯವಾದಗಳನ್ನು ಅರ್ಪಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಬೇಸಾಯ: "ಬೇಸಾಯದಲ್ಲಿ ರಸ ಗೊಬ್ಬರ ಬಳಕೆಗೆ ಬಂತು ಕ್ರಿಮಿಕೀಟಗಳೂ ರೋಗಗಳು ಉಲ್ಬಣಿಸಿದವು"

31ನೇ ಮಾರ್ಚ್ 1967

ಅಧ್ಯಕ್ಷರೇ, ನಮ್ಮ ಮುಂದೆ ಇರತಕ್ಕ ಮಸೂದೆಯನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತ, ದೇಶದಲ್ಲಿ ಆಹಾರದ ಅಭಾವ ಹೆಚ್ಚಾಗಿ ತಲೆದೋರಿರತಕ್ಕ ಕಾಲದಲ್ಲಿ ಕ್ರಿಮಿಕೀಟಾದಿಗಳನ್ನು ನಾಶ ಮಾಡಲು ಸರ್ಕಾರದವರು ಕೃಪೆಮಾಡಿ ಈ ಮಸೂದೆಯನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಆದರೆ ಈ ಮಸೂದೆಯು

ಮಸೂದೆಯು ರೂಪದಲ್ಲೇ ಉಳಿದರೆ ಪ್ರಯೋಜನವಿಲ್ಲ ಕಾರ್ಯಗತವಾಗಬೇಕು, ದೇಶದ ಎಲ್ಲ ವ್ಯವಸಾಯಗಾರರಿಗೂ ಇದರಿಂದ ಲಾಭವಾಗಬೇಕಾದರೆ ಸರ್ಕಾರವರು ಪ್ರತಿಯೊಂದು ತಾಲ್ಲೂಕಿನಲ್ಲಿಯೂ ಇರತಕ್ಕ ವ್ಯವಸಾಯ ಇಲಾಖೆಗೆ ಕ್ರಿಮಿನಾಶಕ ಔಷಧಿಗಳನ್ನು ಒದಗಿಸಿ, ತಕ್ಷಣ ಕಾರ್ಯಗತವಾಗುವ ಹಾಗೆ ಪ್ರಯತ್ನ ಮಾಡಬೇಕು ಎಂದು ನಾನು ತಮ್ಮನ್ನು ಪ್ರಾರ್ಥಿಸಿಕೊಳ್ಳುತ್ತಾ ಕೆಲವು ವಿಷಯಗಳನ್ನು ಹೇಳುತ್ತೇನೆ.

ಹೋದಸಾರಿ ಈ ಮಳೆಗಾಲದಲ್ಲಿ ಅನೇಕ ರಾಗಿ ಬಿತ್ತನೆಗೆ ಹುಳುಗಳು ಬಿದ್ದು ಬೆಳೆ ಪೂರ್ತಿಯಾಗಿ ನಾಶವಾಗಿದೆ. ಅದನ್ನು ವ್ಯವಸಾಯ ಇಲಾಖೆಯ ಅಧಿಕಾರಿಗಳಲ್ಲಿ ಹೋಗಿ ಮನವಿ ಮಾಡಿಕೊಂಡು ಅವರನ್ನು ಹತ್ತಾರು ಗ್ರಾಮಗಳಿಗೆ ಕರೆದುಕೊಂಡು ಹೋಗಿ ವಿಷಯವನ್ನು ತಿಳಿಸಿದ್ದಾಯಿತು. ಅವರು ಹೇಳಿದರು ನಮ್ಮ ಇಲಾಖೆಗೆ ಇದ್ದಂಥ ಅಧಿಕಾರವನ್ನು, ತಾಲ್ಲೂಕು ಬೋರ್ಡುಗಳಿಗೆ ವರ್ಗಾಯಿಸಿದ್ದಾರೆ, ಅವರೇ ಇದರ ವ್ಯವಸ್ಥೆ ಮಾಡಬೇಕು ಎಂದು ಹೇಳಿದರು. ಇಲಾಖೆಯಿಂದ ಇಲಾಖೆಗೆ ತಿರುಗಾಡಿದರೂ ರೈತರ ಉದ್ದೇಶ ಸಫಲವಾಗಲಿಲ್ಲ, ಆತನ ಕೊರತೆ ನೀಗಿದಂತಾಗಲಿಲ್ಲ. ನಮ್ಮ ಸರ್ಕಾರದವರು ತರತಕ್ಕ ಮಸೂದೆಯನ್ನು ಕಾರ್ಯಗತ ಮಾಡುವುದಕ್ಕೆ ಅವರೇ ಹೊಣೆಗಾರರಾಗಬೇಕು. ನಾವು ಈ ಮಸೂದೆಗೆ ಅಂಗೀಕಾರವನ್ನು ಕೊಟ್ಟ ಮಾತ್ರಕ್ಕೆ ದೇಶದಲ್ಲಿರುವ ಎಲ್ಲ ರೈತರಿಗೂ ಈ ಸೌಲಭ್ಯ ಸಿಕ್ಕಿದಂತಾಗುವುದಿಲ್ಲ. ಪ್ರತಿ ತಾಲ್ಲೂಕಿನಲ್ಲೂ ತಾಲ್ಲೂಕು ಬೋರ್ಡ್ ಲೆವಲ್‌ನಲ್ಲಿ ಮತ್ತು ಗ್ರಾಮ ಪಂಚಾಯಿತಿ ಲೆವಲ್‌ನಲ್ಲಿ ಆಗಾಗ್ಗೆ ಬರುವ ರೋಗಗಳನ್ನು ಕಂಡುಹಿಡಿದು ತಕ್ಷಣ ಅದಕ್ಕೆ ಔಷಧಿಗಳನ್ನು ಒದಗಿಸಿ ರೋಗಗಳನ್ನು ನಿವಾರಣೆ ಮಾಡಬೇಕು. ಈ ಸಾರಿ ಕೂಡ ಕೆಲವು ಪ್ರದೇಶಗಳಲ್ಲಿ ಪುನಃ ತಲೆದೋರಿರುವ ರೋಗಗಳ ಬಗ್ಗೆ ಸರಕಾರದವರು ಈಗಲೇ ಮುಂಜಾಗ್ರತೆ ಕ್ರಮ ಕೈಕೊಳ್ಳದಿದ್ದರೆ ಬೆಳೆಗಳು ನಷ್ಟವಾಗಿ ಸರಕಾರದ ಮೇಲೆ ಭಾರ ಹೆಚ್ಚಾಗುತ್ತದೆ. ಮತ್ತು ಪ್ರತಿ ವರ್ಷ ಅಧಿಕಾರಿಗಳು ಭಿಕ್ಷಾಟನೆಯಿಂದ ಆಹಾರ ಧಾನ್ಯಗಳನ್ನು ತಂದು ಜನರಿಗೆ ಒದಗಿಸಬೇಕಾದ ಸಂದರ್ಭ ಬರುತ್ತದೆ. ಇದಕ್ಕೆ ಅವಕಾಶವಿಲ್ಲದಂತೆ ಎಲ್ಲಾ ರೀತಿಯ ರೋಗಗಳಿಗೂ ಚಿಕಿತ್ಸೆ ಮಾಡುವುದರ ಮೂಲಕ ದೇಶದ ಅಭ್ಯುದಯಕ್ಕೆ ಸಹಾಯಕವಾಗಬೇಕು ಎಂದು ಪ್ರಾರ್ಥನೆ ಮಾಡಿ ಜನರ ಭದ್ರತೆಗೆ ಈಗ ಸೂಕ್ತಕ್ರಮ ತೆಗೆದುಕೊಂಡು ಅವರಿಗೆ ಬರುವ ಎಲ್ಲಾ ರೋಗಗಳಿಗೂ ಪರಿಹಾರವನ್ನು ಕಂಡುಹಿಡಿದು ಜನರು ಬಹಳ ಕಾಲ ಬದುಕಲು ಅವಕಾಶ ಮಾಡಿರುವಂತೆ ಬೆಳೆಗಳ ವಿಚಾರದಲ್ಲೂ ಮಾಡಬೇಕೆಂದು ಸೂಚಿಸುತ್ತೇನೆ. ಕೆಲವು ರೋಗಗಳು

ಮೊದಲಿರಲಿಲ್ಲ, ಕೆಲವು ವರ್ಷಗಳಿಂದೀಚೆಗೆ ಪ್ರಾಪ್ತವಾಗಿವೆ. ಮಳೆಯ ದೋಷದಿಂದಲೋ ಅಥವಾ ಜಮೀನುದಾರರ ದೋಷದಿಂದಲೋ ಅಥವಾ ಗೊಬ್ಬರ ಕೊಡುವುದರಲ್ಲಿ ಸರಿಯಾದ ವ್ಯವಸ್ಥೆಯಿಲ್ಲದಿರುವ ದೋಷವಿರುವುದರಿಂದಲೋ ರೋಗ ಪ್ರಾಪ್ತವಾಗಿದೆ. ನನಗೆ ಗೊತ್ತಿರುವ ಹಾಗೆ 50 ವರ್ಷಗಳಿಂದಲೂ ಈಗ ರೋಗದ ಕಾಟವಿರಲಿಲ್ಲ. ಈಚೀಚೆಗೆ 3 ವರ್ಷಗಳಿಂದ ಕಾರಣಾಂತರದಿಂದ ಅದು ಪ್ರಾಪ್ತವಾಗಿದೆ. ಸರಕಾರದವರು ಇದನ್ನು ಪೂರ್ಣವಾಗಿ ಮನಗಂಡು ತಕ್ಷಣ ಕಾರ್ಯೋನ್ಮುಖರಾಗಿ ರೈತರ ಬಗ್ಗೆ, ರಾಷ್ಟ್ರದ ಹಿತದಿಂದ ಹಗಲೂ ರಾತ್ರಿ ದುಡಿಯುತ್ತಿರುವವರ ಬಗ್ಗೆ ಕರುಣೆ ತೋರಿಸಿ ಅವರಿಗೆ ಸಹಾಯಕರಾಗಬೇಕು, ಇದಕ್ಕೆ ಸರಕಾರದವರು ಹೊಣೆಗಾರಿಕೆ ಹೊರಬೇಕು ಎಂದು ಒತ್ತಾಯ ಮಾಡಿ ನನ್ನ ಮಾತುಗಳನ್ನು ಮುಕ್ತಾಯ ಮಾಡುತ್ತೇನೆ.

ಜೈ ಹಿಂದ್.

## ಕ್ಷಾಮ ಬಂದಿದೆ, ನೋಡಿ ಕೆರೆಕಟ್ಟೆ ಮಾಡಿಸಿ: ಜನರಿಗೆ ಕೂಲಿ ಕೊಡಿ.

**21ನೇ ಡಿಸೆಂಬರ್ 1967**

ಸನ್ಮಾನ್ಯ ಅಧ್ಯಕ್ಷರೇ, ಈ ದಿವಸ ನಮ್ಮ ಮುಂದಿರುವ ವಿಷಯದ ಬಗ್ಗೆ ಮಾತನಾಡುತ್ತಾ ಜನರಲ್ ಅಡ್ಮಿನಿಸ್ಟ್ರೇಷನ್ ವಿಚಾರದಲ್ಲಿ ಕೆಲವು ವಿಚಾರಗಳನ್ನು ಹೇಳಬೇಕೆಂದಿದ್ದೇನೆ. ಈ ಚರ್ಚೆಯಲ್ಲಿ ಭಾಗವಹಿಸುವುದಕ್ಕೆ ಮುಂಚೆ ಆಹಾರ ವಿತರಣೆ ವಿಚಾರದಲ್ಲಿ ಪರಿಪೂರ್ಣತೆ ಹೊಂದುವ ಹಾಗೆ ಸರಕಾರ ವ್ಯವಸ್ಥೆ ಮಾಡಿಲ್ಲ, ಬಹಳ ಬಡವರಿಗೆ ಸರಿಯಾದ ರೀತಿಯಲ್ಲಿ ಆಹಾರದ ಹಂಚಿಕೆಯಾಗುತ್ತಿಲ್ಲ, ಇದನ್ನು ಗಮನಿಸಿ ಸುವ್ಯವಸ್ಥಿತವಾದ ವ್ಯವಸ್ಥೆ ಮಾಡಬೇಕು. ಈಗ ಅಭಾವದ ಕಾಲವಾಗಿರುವುದರಿಂದ ಕ್ಷಾಮ ನಿವಾರಣೆ ಬಗ್ಗೆ ತಕ್ಕ ಕಾರ್ಯಕ್ರಮವನ್ನು ಇಂಜಿನಿಯರಿಂಗ್ ಇಲಾಖೆಯ ಮೂಲಕ ತೆಗೆದುಕೊಂಡು ತನ್ಮೂಲಕ ಅನ್ಯಾಯವಾಗದಿರುವ ಹಾಗೆ ಮಾಡಬೇಕು, ಕೆರೆ, ರಸ್ತೆ, ಬಾವಿ ಮುಂತಾದ ಕೆಲಸಗಳನ್ನು ತೆಗೆದುಕೊಂಡು ಜನರಿಗೆ ಕೂಲಿ ಸಿಕ್ಕುವ ಹಾಗೆ ವ್ಯವಸ್ಥೆಮಾಡಬೇಕು ಎಂದು ಹೇಳುತ್ತೇನೆ. ಮಾಗಡಿಯಲ್ಲಿ ಕೆಂಪೇಗೌಡರ ಕಾಲದ ಹಳೆಯ ಕಛೇರಿ ಇದೆ, ಅದನ್ನು ಮಾರ್ಪಾಡು ಮಾಡಬೇಕು, ಈ ಬಗ್ಗೆ 25 ವರ್ಷಗಳಿಂದ ಸಲಹೆಮಾಡಿದೆ, ಆದರೆ ಅಂದಾಜಾಗಿಲ್ಲ, ಶೀಘ್ರವಾಗಿ ಇದನ್ನು ಕಾರ್ಯರೂಪಕ್ಕೆ ತರಲು ಸರಕಾರ ಸೂಕ್ತ ಕಾರ್ಯಕ್ರಮ ಕೈ ಕೊಳ್ಳಬೇಕು ಎಂದು ಹೇಳುತ್ತೇನೆ.

ಈಗ ನನ್ನ ಮಿತ್ರರಾದ ದುಗ್ಗಪ್ಪನವರು ಪೋಲಿಸ್ ವಿಷಯ ಹೇಳಿದರು. ನಾನು ಹೆಚ್ಚು ಹೇಳುವುದಿಲ್ಲ. ಸಂಸ್ಥಾನಾಮಳೆ ಪ್ರತಿ ತಾಲ್ಲೂಕಿನಲ್ಲೂ ಒಬ್ಬೊಬ್ಬ ಸಬ್-ಇನ್‌ಸ್ಪೆಕ್ಟರ್ ಹುದ್ದೆಯನ್ನು ರದ್ದು ಮಾಡಿ ಎರಡು ಮೂರು ತಾಲ್ಲೂಕುಗಳಿಗೆ ಒಬ್ಬರನ್ನು ಹಾಕಿರುವುದರಿಂದ ಜನರ ದೂರಿಗೆ ತಕ್ಷಣ ಗಮನಕೊಟ್ಟು ಕೆಲಸಮಾಡಲು ಸಾಧ್ಯವಾಗದೆ ಕಳವು ಮುಂತಾದುವು ಹೆಚ್ಚಿ ಅವನ್ನು ತಡೆಗಟ್ಟುವುದು ಕಷ್ಟವಾಗಿದೆ. ಇದನ್ನು ಹೋದ ಸಲವೇ ಹೇಳಿದ್ದೇನೆ. ಆದರೆ ಇನ್ನೂ ಕಾರ್ಯರೂಪಕ್ಕೆ ಬಂದಿಲ್ಲ ಇದಕ್ಕೆ ಹೆಚ್ಚು ಹಣ ಬೇಕಾಗಿಲ್ಲ. ಇದಕ್ಕೆ ಖರ್ಚುಮಾಡಿದರೆ ಜನರ ಭದ್ರತೆಗೆ ದೇಶದ ಭದ್ರತೆಗೆ ಅನುಕೂಲವಾಗುತ್ತದೆ ಎಂಬುದನ್ನು ಈ ಸಂದರ್ಭದಲ್ಲಿ ಸರ್ಕಾರದ ಗಮನಕ್ಕೆ ತರುತ್ತೇನೆ.

## ನನ್ನ ತಾಲ್ಲೂಕಿನಲ್ಲಿ ಎಪ್ಪತ್ತು ಗ್ರಾಮಗಳಲ್ಲಿ ಶಾಲಾ ಕಟ್ಟಡಗಳಿಲ್ಲ

ವಿದ್ಯಾ ಇಲಾಖೆಗೆ ಸಂಬಂಧಪಟ್ಟಂತೆ ಹೇಳುವುದಾದರೆ, ಅನೇಕ ಕಡೆ ಸ್ಕೂಲುಗಳು ಇಲ್ಲ, ನನ್ನ ತಾಲ್ಲೂಕಿನಲ್ಲಿ 70 ಗ್ರಾಮಗಳಿಗೆ ಸ್ಕೂಲು ಕಟ್ಟಡಗಳು ಇಲ್ಲ, ತಾವು ಕೊಡತಕ್ಕ ಒಂದು ಸಾವಿರ ರೂಪಾಯಿ ಒಂದು ಸ್ಕೂಲ್ ಕಟ್ಟಡಕ್ಕೆ ಸಾಲದು, ಮೊದಲು ಇದ್ದ ಪದ್ಧತಿಯೇ ಜಾರಿಗೆ ತರಬೇಕು, ಕೋಟ್ಯಾಂತರ ರೂಪಾಯಿಗಳನ್ನು ಖರ್ಚು ಮಾಡುತ್ತಾ ಇರುವಾಗ ಉಪಾಧ್ಯಾಯರುಗಳಿಗೆ ಮತ್ತು ಮಕ್ಕಳು ಕುಳಿತುಕೊಳ್ಳುವುದಕ್ಕೆ ಸ್ಥಳ ಇಲ್ಲದೇ ಗುಡಿ ಗೋಪುರಗಳಲ್ಲಿ, ಮರದ ಕೆಳಗೆ ಕುಳಿತು ವಿದ್ಯಾಭ್ಯಾಸ ನಡೆಯುತ್ತಾ ಇದೆ. ಕಟ್ಟಡ ಸಾಲದು, ಅದರ ಭದ್ರತೆಗೆ ಸರ್ಕಾರ ಹಣ ವೆಚ್ಚ ಮಾಡತಕ್ಕ ಒಂದು ಕಾರ್ಯಕ್ರಮವನ್ನು ಕೈಕೊಳ್ಳಬೇಕು.

## ಅರಣ್ಯ ಅಭಿವೃದ್ಧಿಯಾಗದೆ ಮಳೆ ಬೆಳೆ ಆಗದು

ಫಾರೆಸ್ಟ್ ಇಲಾಖೆ ವಿಚಾರ ದೇಶಾದ್ಯಂತ ಅರಣ್ಯ ಸಂಪತ್ತು ಕುಂಠಿತವಾಗುತ್ತಾ ಇದೆ. ಇದಕ್ಕೆ ಖರ್ಚು ಮಾಡತಕ್ಕ ಹಣ ಸರಿಯಾದ ರೀತಿಯಲ್ಲಿ ಇಲಾಖೆ ವ್ಯವಸ್ಥೆ ಮಾಡುತ್ತಿಲ್ಲ. ನನ್ನ ತಾಲ್ಲೂಕಿನಲ್ಲಿ ಸಾವನದುರ್ಗ ಫಾರೆಸ್ಟ್ ಅಂತ ಇದೆ, ಬಹಳ ಹೆಚ್ಚು ಹಣ ಪ್ರತಿ ಸಾರಿ ಅದಕ್ಕೆ ವಿಲೇ ಆಗುತ್ತಾ ಇದೆ, ಅದನ್ನು ಕಾಯತಕ್ಕ ಅಧಿಕಾರಿಗಳ ಸಂಖ್ಯೆ ಜಾಸ್ತಿ ಇದೆ, ಆದರೆ ಅದರಿಂದ ಬರತಕ್ಕ ವರಮಾನ ಕಡಿಮೆ ಇದೆ. ಎಲ್ಲಿನವರೆಗೆ ಅರಣ್ಯ ಅಭಿವೃದ್ಧಿಯಾಗುವುದಿಲ್ಲವೋ ಅಲ್ಲಿನವರೆಗೂ ಮಳೆಬೆಳೆ

ಬರುವುದಿಲ್ಲ ಎಂದು ಹಿರಿಯರ ನಾಣ್ನುಡಿ ಇದೆ. ಆದ್ದರಿಂದ ಎಲ್ಲಿ ಫಾರೆಸ್ಟ್ ಇದೆ ಅದನ್ನು ಸುಭದ್ರಗೊಳಿಸಿ ದೇಶದ ಜನರಿಗೆ ಅನುಕೂಲವಾಗುವ ಹಾಗೆ ಮಾಡಿಕೊಡಬೇಕೆಂದು ಸಲಹೆ ಮಾಡುತ್ತೇನೆ. ಹುಳಿಹಣ್ಣಿನ ಮರಗಳು ಎಲ್ಲೂ ಇಲ್ಲ. ಆದ್ದರಿಂದಲೇ ಹುಳಿಹಣ್ಣಿನ ಬೆಲೆ ಜಾಸ್ತಿಯಾಗಿದೆ, ಅದು ಬಡವರಿಗೆ ಸಿಕ್ಕುವುದು ಬಹಳ ದುರ್ಲಭವಾಗಿದೆ. ಆದ್ದರಿಂದ ಫಾರೆಸ್ಟ್ ಇಲಾಖೆಯನ್ನು ಶುಭ್ರಗೊಳಿಸುವುದರಿಂದ ಸರ್ಕಾರದವರಿಗೂ ಲಾಭವುಂಟು, ದೇಶಕ್ಕೂ ಪ್ರಯೋಜನವುಂಟು ಮಳೆಬೆಳೆಗಳಿಗೂ ಅನುಕೂಲವಾಗುತ್ತದೆ ಎಂದು ಹೇಳುತ್ತಾ ಇದ್ದೇನೆ.

## ಮಾಗಡಿಗೊಂದು ನ್ಯಾಯಾಲಯ ಬೇಕು

ಮಾಗಡಿ ತಾಲ್ಲೂಕಿನಲ್ಲಿ ಮ್ಯಾಜಿಸ್ಟ್ರೇಟ್ ಕೋರ್ಟ್ ಆಗಬೇಕೆಂದು ಕೇಳುತ್ತಿದ್ದೇವೆ. ಟಿ.ಎನ್. ಮಲ್ಲಪ್ಪನವರ ಕಾಲದಲ್ಲೇ ಅಲ್ಲಿ ಒಂದು ಕೋರ್ಟ್ ಆಗಬೇಕೆಂದು ತೀರ್ಮಾನ ಮಾಡಿದ್ದರು, ಅನೇಕ ಸಾರಿ ಚೀಫ್ ಮಿನಿಸ್ಟರಿಗೂ, ಮತ್ತು ನ್ಯಾಯಾಂಗ ಇಲಾಖೆಗೂ ಬರೆದರೂ ಕೂಡ ಇನ್ನೂವರೆಗೂ ಆಗಿಲ್ಲ, ಲ್ಯಾಂಡ್ ರಿಫಾರಂಸ್ ಕಮಿಟಿ ಶಿಫಾರಸಿನ ಪ್ರಕಾರ ಒಂದು ಕೋರ್ಟ್‌ನ್ನು ರಾಮನಗರಕ್ಕೆ ಹಾಕಿದ್ದಾರೆ ಅಲ್ಲಿರತಕ್ಕ 7 ತಾಲ್ಲೂಕುಗಳನ್ನು ಒಳಗೊಂಡಿರುವಂತೆ ಒಂದು ವ್ಯವಸ್ಥೆಯನ್ನು ಮಾಡಿದ್ದಾರೆ. ರೈತರು ಕುಳಿತುಕೊಳ್ಳುವುದಕ್ಕೆ ಸ್ಥಳ ಇಲ್ಲ, ಮತ್ತು ಹೋಗಿ ಬರುವುದಕ್ಕೆ ಸೌಕರ್ಯ ಇಲ್ಲ, ಈ ರೀತಿ ಮಾಡಬಾರದು, ಮಾಗಡಿ ತಾಲ್ಲೂಕಿನ ಜ್ಯುಡಿಷಿಯಲ್ ಮತ್ತು ನ್ಯಾಯಾಂಗದ ವಿಚಾರದಲ್ಲಿ ಕೋರ್ಟ್ ಈಗ ಬೆಂಗಳೂರಿನಲ್ಲೇ ಮಾಡಿದ್ದಾರೆ. ಅದರಂತೆ ಟ್ರಿಬ್ಯೂನಲ್ ಕೋರ್ಟನ್ನೂ ಕೂಡ ಬೆಂಗಳೂರಿಗೆ ಕೊಟ್ಟು ಜನರಿಗೆ ಉಂಟಾಗಿರತಕ್ಕ ಕಷ್ಟವನ್ನು ಶಾಂತಗೊಳಿಸಬೇಕು. ಇದನ್ನು ಚೀಫ್ ಮಿನಿಸ್ಟರ್ ಹತ್ತಿರವೂ ಕೂಡ ಹೇಳಿದ್ದೇನೆ. ಈ ಒಂದು ಕೆಲಸವನ್ನು ತ್ವರಿತವಾಗಿ ಮಾಡಬೇಕೆಂದು ಹೇಳುತ್ತೇನೆ.

## ಕೈಗಾರಿಕೆಗಳ ವಿಕೇಂದ್ರೀಕರಣವಾಗಲಿ

ಇನ್ನು ಕೈಗಾರಿಕೆಗಳ ವಿಚಾರ, ಕೈಗಾರಿಕೆಗಳನ್ನು ಬೆಂಗಳೂರು ಪಟ್ಟಣದಲ್ಲೇ ಹೆಚ್ಚು ಹೆಚ್ಚಾಗಿ ಮಾಡುವುದರಿಂದ ಕೈಗಾರಿಕೆಗಳ ಸಂಬಂಧದಲ್ಲಿ ಉಂಟಾಗತಕ್ಕ

ಗಲಭೆಗಳನ್ನು ನಿವಾರಣೆ ಮಾಡುವುದಕ್ಕೆ ತುಂಬಾ ಕಷ್ಟವಾಗಿದೆ. ಗ್ರಾಮಾಂತರದಲ್ಲಿ ತುಂಬಾ ಬಡತನ ಇರುವುದರಿಂದ ಸರ್ಕಾರದವರು ಕೈಗಾರಿಕೆಗಳನ್ನು ಪ್ರತಿಯೊಂದು ತಾಲ್ಲೂಕಿನಲ್ಲೂ ಅಲ್ಲಿ ಸಿಕ್ಕ ತಕ್ಕ ಸೌಲಭ್ಯಗಳಿಗೆ ಅನುಕೂಲವಾದಂತೆ ಸ್ಥಾಪನೆ ಮಾಡುವುದರ ಮೂಲಕ ಜನತೆಗೆ ಸುಖವನ್ನುಂಟುಮಾಡುವುದಕ್ಕೆ ತಾವು ಕಾರ್ಯಕ್ರಮವನ್ನು ಕೈಕೊಳ್ಳಬೇಕು. ಎಲ್ಲಾ ಕೈಗಾರಿಕೆಗಳೂ ಬೆಂಗಳೂರಿನಲ್ಲೇ ಕೇಂದ್ರೀಕೃತವಾಗುವುದರಿಂದ ಬಡಬಗ್ಗರು ಮುಂದುವರಿಯುವುದಕ್ಕೆ ಅವಕಾಶವಾಗುವುದಿಲ್ಲ. ಅಲ್ಲದೇ ಗ್ರಾಮಾಂತರದ ಜನರು ಇಲ್ಲಿಗೆ ವಲಸೆ ಬಂದು ಅಲ್ಲಿ ವ್ಯವಸಾಯಕ್ಕೆ ತುಂಬಾ ಕಷ್ಟವಾಗುತ್ತಾ ಇದೆ. ಇದನ್ನು ನಾನು ಅನೇಕ ಸಾರಿ ಹೇಳಿದ್ದೇನೆ. ಆದರೂ ಸರ್ಕಾರದವರೂ ಈ ಬಗ್ಗೆ ಆಲೋಚನೆ ಮಾಡಿಲ್ಲ. ನಾವು ಇಲ್ಲಿ ಹೇಳುವ ಒಂದೆರಡು ಕೆಲಸಗಳನ್ನಾದರೂ ಕಾರ್ಯಗತ ಮಾಡುವುದಕ್ಕೆ ಸರ್ಕಾರದವರು ಮನಸ್ಸು ಮಾಡಬೇಕು.

## ಪ್ರತಿಭಾ ಪಲಾಯನ ನಿಲ್ಲಲಿ (ಡಾಕ್ಟರುಗಳು)

ಇನ್ನು ಡಾಕ್ಟರುಗಳ ವಿಚಾರ, ಅನೇಕ ಆಸ್ಪತ್ರೆಗಳಲ್ಲಿ ಡಾಕ್ಟರುಗಳು ಇಲ್ಲ. ನಮ್ಮಲ್ಲಿ ತಯಾರಾದಂತಹ ಅನೇಕ ಡಾಕ್ಟರುಗಳು ಪರದೇಶಗಳಿಗೆ ಹೋಗತಕ್ಕ ಪದ್ಧತಿ ಇದೆ. ಅಂತಹವರು ಮತ್ತೆ ವಾಪಸ್ಸು ಬರುವುದಿಲ್ಲ. ಕಾರಣ ಅಲ್ಲಿ ಹೆಚ್ಚು ವೇತನ ಸಿಕ್ಕುತ್ತದೆ. ಹತ್ತು ವರ್ಷವಾದರೂ ಇಲ್ಲಿ ವ್ಯಾಸಂಗ ಮಾಡಿದಂತಹವರು ಇಲ್ಲಿನ ಜನರಿಗೆ ಅನುಕೂಲ ಮಾಡಿದ ನಂತರ ಪಾಶ್ಚಿಮಾತ್ಯ ದೇಶಗಳಿಗೆ ಹೋಗಲು ಅವಕಾಶ ಕೊಡಲಾಗುತ್ತದೆ ಎಂಬ ಒಂದು ಕಂಡೀಷನ್ ಹಾಕಿದರೆ ಅನುಕೂಲವಾಗುತ್ತದೆ ಇಲ್ಲದೆ ಹೋದರೆ ನಮ್ಮ ದೇಶದ ಜನರಿಗೆ ಅವರ ಸೌಲಭ್ಯ ಸಿಕ್ಕುವುದಿಲ್ಲ, ನಾವು ವಿದ್ಯಾಭ್ಯಾಸಕ್ಕಾಗಿ ಖರ್ಚು ಮಾಡತಕ್ಕ ಹಣ ಪ್ರಯೋಜನವಾಗದೇ ಹೋಗುತ್ತದೆ. ಈಗ ಮಾಗಡಿಯಲ್ಲಿ ಎರಡು ಕಡೆ ಆಸ್ಪತ್ರೆಯನ್ನು ಕೊಟ್ಟಿದ್ದಾರೆ, ತಾವರೆಕೆರೆ ಮತ್ತು ಸಂಕಿಘಟ್ಟ ಅಲ್ಲಿ ಕಟ್ಟಡ ಆಗಿಲ್ಲ, ಅದಕ್ಕೆ 15 ಸಾವಿರ ರೂಪಾಯಿಗಳನ್ನು ಡಿಪಾಸಿಟ್ ಕೂಡ ಮಾಡಿಸಿದ್ದೇನೆ, ಈ ಒಂದು ಕಾರ್ಯವನ್ನು ಮಾಡಿಸಿಕೊಡಬೇಕು.

ಎಲ್ಲಕ್ಕಿಂತಲೂ ಮಿಗಿಲಾಗಿ ಪ್ರತಿಯೊಂದು ತಾಲ್ಲೂಕಿನಲ್ಲೂ ಶಾಲೆಗಳ ಭದ್ರತೆಗೆ ನಿಗಾ ಕೊಟ್ಟು ಅವಕ್ಕೆ ಹೆಚ್ಚಿನ ಗ್ರಾಂಟ್ ಕೊಡಬೇಕು ಮತ್ತು ಆ ಬಗ್ಗೆ ಮೊದಲಿನ ಪದ್ಧತಿಯನ್ನೇ ಜಾರಿಗೆ ತರಬೇಕೆಂದು ಹೇಳಿ ಮಾನ್ಯ ಅಧ್ಯಕ್ಷರನ್ನು ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಕಾಂಗ್ರೆಸಿಗರ ಎದೆಯೇನೋ ಕಲ್ಲು, ಹೃದಯ ಮೃದು

**27ನೇ ಫೆಬ್ರವರಿ 1968**

ಸನ್ಮಾನ್ಯ ಸಭಾಧ್ಯಕ್ಷರೇ ಈ ದಿವಸ ನಾನು ರಾಜ್ಯಪಾಲರ ಭಾಷಣಕ್ಕಾಗಿ ವಂದನೆಗಳನ್ನು ಸಲ್ಲಿಸಲು ನಿಂತಿದ್ದೇನೆ. ಇದುವರೆವಿಗೂ ನನ್ನ ಸ್ನೇಹಿತರಾದ ಕೆಲವು ಮಾನ್ಯ ಸದಸ್ಯರು ಬಹಳ ತೀಕ್ಷ್ಣವಾಗಿ ಮಾತನಾಡಿದರು, ಕಾಂಗ್ರೆಸ್ಸಿನವರ ಎದೆ ಕಲ್ಲು ಎಂದು ಹೇಳಿದರು. ಈ ಕಟ್ಟಡವನ್ನು ಭದ್ರವಾಗಿ ಕಲ್ಲಿನಿಂದಲೇ ಕಟ್ಟಿದೆ. ಮಾನ್ಯ ಸದಸ್ಯರು ಕಾಂಗ್ರೆಸ್‌ನವರ ಹೃದಯ ಕಲ್ಲು ಎಂದು ಹೇಳಬಾರದಾಗಿತ್ತು ಎಂದು ವಿನಂತಿ ಮಾಡುತ್ತೇನೆ.

### ಪಂಪ್‌ಸೆಟ್‌ಗಳಿಗೆ ವಿದ್ಯುತ್ ಒದಗಿಸಿ

ದೇಶದಲ್ಲಿ ಆಹಾರದ ಉತ್ಪತ್ತಿಯನ್ನು ಜಾಸ್ತಿ ಮಾಡುವುದಕ್ಕಾಗಿ ಸರಕಾರದವರು ಕೈಗೊಂಡಿರುವ ನಾನಾ ಕಾರ್ಯಗಳು ಕಾರ್ಯಗತವಾಗಿ ಈಗ ಕೆಲವು ಅನುಕೂಲಗಳನ್ನು ಪಡೆಯುತ್ತಿದ್ದೇವೆ. ಆದರೂ ಕೂಡ ಕೊಟ್ಟಿರುವ ಬಾವಿಗಳಿಗೆ ಬಹಳ ತೀವ್ರವಾಗಿ ವಿದ್ಯುಚ್ಛಕ್ತಿಯನ್ನೊದಗಿಸಬೇಕು. ಡೆವಲಪ್‌ಮೆಂಟ್ ಬ್ಯಾಂಕಿನಿಂದ ಕೊಟ್ಟಿರುವ ಹಣದಿಂದ ಬಾವಿ ತೋಡಿ ತನ್ಮೂಲಕ ಕರೆಂಟನ್ನು ಉಪಯೋಗಿಸಲು ಕೆಲವು ಕಡೆ ಕರೆಂಟಿನ ಅಭಾವದಿಂದ ತೊಂದರೆಯಾಗಿದೆ. ಇದರಿಂದ ಕೊಟ್ಟಿರುವ ಅನುಕೂಲವನ್ನು ಪಡೆಯಲು ಕಾರ್ಯೋನ್ಮುಖರಾಗುವುದಕ್ಕೆ ಕಷ್ಟವಾಗಿದೆ. ದಯಮಾಡಿ ಕರೆಂಟನ್ನು ತೀವ್ರವಾಗಿ ಒದಗಿಸಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

### ಶಾಲೆಗಳ ಸಂಖ್ಯೆ ಹೆಚ್ಚಾಗಲಿ

1947 ರಿಂದ ಇಂದಿನವರೆಗೆ 20ವರ್ಷಗಳಲ್ಲಿ ಕಾಂಗ್ರೆಸ್ ಸರಕಾರ ಅನೇಕ ಉಪಯುಕ್ತವಾದ ರಸ್ತೆ, ಕೆರೆ, ಜಲಾಶಯಗಳು, ಕುಡಿಯುವ ನೀರಿನ ಬಾವಿ ಸೌಕರ್ಯಗಳನ್ನೊದಗಿಸಿರುವುದರಿಂದ ಹೆಚ್ಚು ಅನುಕೂಲವಾಗಿದೆ. ಇನ್ನೂ ಕೆಲವು ಸೌಕರ್ಯಗಳು ಜಾಗ್ರತೆ ಒದಗಬೇಕಾಗಿದೆ. ಸರಕಾರದ ಪಂಚವಾರ್ಷಿಕ ಯೋಜನೆಗಳಿಂದ ಸಾಧ್ಯವಾದಷ್ಟು ಫಲ ದೇಶದ ಪ್ರಜೆಗಳಿಗೆ ದೊರಕಿದೆ. ಆದರೆ ಮಾಡಬೇಕಾದ ಕರ್ತವ್ಯ ಇನ್ನೂ ಇವೆ. ಈಗ ವಿದ್ಯಾರ್ಥಿಗಳಿಗೆ ಹೆಚ್ಚಿನ ಸೌಲಭ್ಯ ಕೊಡುವುದಕ್ಕೆ ಸರಕಾರದವರು ಅನೇಕ ಪ್ರೌಢಶಾಲೆಗಳನ್ನು ಮತ್ತು ಪ್ರಾಥಮಿಕ

ಶಾಲೆಗಳನ್ನು ತೆರೆದಿದ್ದಾರೆ. 'ಇನ್ನೂ ಅನೇಕ ಕಡೆ ವಿದ್ಯಾ ಕೇಂದ್ರಗಳಿಲ್ಲ ಸರಕಾರದವರು ತಾಲ್ಲೂಕು ಬೋರ್ಡಿನವರಿಗೆ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟರೆ ಗ್ರಾಮಾಂತರದವರು ಶಾಲಾ ಕಟ್ಟಡಗಳನ್ನು ಕಟ್ಟಲು ಸಾಧ್ಯವಾಗುವುದಿಲ್ಲ. ಆದುದರಿಂದ ಸಬ್‌ರಿಜಿಸ್ಟ್ರಾರ್ ಆಫೀಸಿಗೆ ಬರುವ ಪೂರ್ಣ ಮೊಬಲಗನ್ನು ಶಾಲಾ ಕಟ್ಟಡಗಳಿಗಾಗಿ ಮೀಸಲಾಗಿಡಲು ಪ್ರಯತ್ನ ಮಾಡಿದರೆ ಕಟ್ಟಡಗಳ ಅಭಾವ ತಪ್ಪಿ ಮಕ್ಕಳು ಸರಿಯಾಗಿ ವಿದ್ಯಾರ್ಜನೆ ಮಾಡಲು ಅನುಕೂಲವಾಗುತ್ತದೆ ಎಂಬ ಸಲಹೆ ಮಾಡುತ್ತೇನೆ.

## ಅರಣ್ಯ ಉಳಿಸಿದರೆ ಮಳೆ ಬರುತ್ತದೆ

Chairman (Smt. Nagarathnamma Hiremath) in the chair.

ವ್ಯವಸಾಯದ ವಿಷಯದಲ್ಲಿ ಶ್ರೀ ಜಿ. ರಾಮೇಗೌಡರು ಕೆಲವು ಅಂಶಗಳನ್ನು ಸರಕಾರದ ಗಮನಕ್ಕೆ ತಂದಿದ್ದಾರೆ. ವ್ಯವಸಾಯ ಕಾರ್ಯ ಯಶಸ್ವಿಯಾಗಬೇಕಾದರೆ ರೈತರಿಗೆ ಹೆಚ್ಚಿನ ಅನುಕೂಲಗಳನ್ನು ಕಲ್ಪಿಸಿಕೊಡಬೇಕು. ನಾಲ್ಕಾಣೆ ಬೆಳೆಯಾಗಿರುವ ಕಡೆ ಕಂದಾಯವನ್ನು ವಸೂಲು ಮಾಡುವುದನ್ನು ನಿಲ್ಲಿಸುವುದಾಗಿ ಮಂತ್ರಿಗಳು ಹೇಳಿದ್ದರು. ಆದರೆ ತಾಲ್ಲೂಕುಗಳಲ್ಲಿ ಇದಕ್ಕೆ ತಕ್ಕ ಸಿದ್ಧತೆ ಮಾಡಿಕೊಂಡಿಲ್ಲ. ಈಗ ಕಳೆದ ಮೂರು ವರ್ಷಗಳಲ್ಲಿ ಸರಕಾರಕ್ಕೆ ರೈತರಿಂದ ಬರಬೇಕಾದ ಜಮೀನು ಕಂದಾಯದಲ್ಲಿ ರೆಮೀಷನ್ ಮಾಡಬೇಕಾದ್ದನ್ನು ಮಾಡಿ ಉಳಿದುದನ್ನು ಮಾತ್ರ ವಸೂಲು ಮಾಡಬೇಕು. ಇದನ್ನು ಮಾಡದಿದ್ದರೆ ರೈತರಿಗೆ ಹೊರೆ ಹೆಚ್ಚಿ ಅವರು ಪೂರ್ಣವಾಗಿ ಮನಸ್ಸಿಟ್ಟು ಅವರ ಕೆಲಸವನ್ನು ಮಾಡುವುದಿಲ್ಲ. ಆದುದರಿಂದ ಕಂದಾಯದ ವಿಚಾರವನ್ನು ಮಾನ್ಯ ಸರಕಾರದವರು ಜಾಗ್ರತೆಯಾಗಿ ತೀರ್ಮಾನ ಮಾಡಬೇಕು. ದೇಶದಲ್ಲಿ ಮಳೆಯ ಅಭಾವಕ್ಕೆ ಕಾರಣ ದಿನೇ ದನೇ ಫಾರೆಸ್ಟು ಕಡಿಮೆಯಾಗುತ್ತಿರುವುದು. ಆದುದರಿಂದ ಅರಣ್ಯ ಸಂಪತ್ತನ್ನು ವೃದ್ಧಿ ಮಾಡಲು ಹೆಚ್ಚು ಮುತುವರ್ಜಿ ವಹಿಸಬೇಕು. ಈಗ ಅರಣ್ಯದಿಂದ ಹೆಚ್ಚು ವರಮಾನವಿದೆ. ಅದನ್ನು ಗಮನಿಸಿ ಹೆಚ್ಚು ಮರಗಳನ್ನು ಬೆಳೆಸಿ ಮಳೆ ಹೆಚ್ಚಾಗಿ ಬರುವುದಕ್ಕೆ ಅವಕಾಶ ಮಾಡಬೇಕು.

## ಉನ್ನತ ಶಿಕ್ಷಣ

ವಿದ್ಯಾಭ್ಯಾಸದ ವಿಚಾರ ಹೇಳುವುದಾದರೆ, ಇಂಜಿನಿಯರಿಂಗ್ ಕಾಲೇಜುಗಳು ಮತ್ತು ಶಾಲೆಗಳಲ್ಲಿ ಪಾಸಾದ ಸುಮಾರು ನಾಲ್ಕು ಸಾವಿರ ಮಂದಿ ಮೂರು ವರ್ಷಗಳಿಂದ ಕೆಲಸ ಇಲ್ಲದೆ ಒದ್ದಾಡುತ್ತಿದ್ದಾರೆ, ನೌಕರಿಗಾಗಿ ಅಲೆದಾಡುತ್ತಿದ್ದಾರೆ. ಆದುದರಿಂದ ಮುಂದೆ ಆ ಶಾಲೆಗಳ ಸಂಖ್ಯೆಯನ್ನು ಕುಂಠಿತ ಮಾಡಿ ಯಾವ ವಿದ್ಯಾಭ್ಯಾಸದಿಂದ ರೈತರ ಮಕ್ಕಳಿಗೆ ಹೆಚ್ಚು ಅನುಕೂಲವಾಗುವುದೋ ಅದನ್ನು ಹೆಚ್ಚಾಗಿ ದೊರೆಯುವಂತೆ ವ್ಯವಸ್ಥೆ ಮಾಡಬೇಕು.

## ಕೈಗಾರಿಕೆ :

ಕೈಗಾರಿಕೆಯಲ್ಲಿ ನಾವು ಬಹಳ ಹಿಂದುಳಿದಿದ್ದೇವೆ, ಕಳೆದ ಐದು ವರ್ಷಗಳಿಂದ ಈ ಸಂಬಂಧದಲ್ಲಿ ಹೆಚ್ಚು ಕೆಲಸವಾಗಿಲ್ಲ. ಒದಗಿಸಿದ ಹಣ ಪೂರ್ಣವಾಗಿ ಖರ್ಚಾಗಿಲ್ಲವೆಂದು ನಾನು ತಿಳಿದಿದ್ದೇನೆ. ಇದಕ್ಕೆ ಕಾರಣವೇನೇ ಇರಲಿ ಮುಂದಾದರೂ ಮೈಸೂರು ಸಂಸ್ಥಾನದಲ್ಲಿ ಕೈಗಾರಿಕೆಗಳಿಂದ ಉತ್ಪತ್ತಿ ಜಾಸ್ತಿಯಾಗುವಂತೆ ವ್ಯವಸ್ಥೆ ಮಾಡಬೇಕು. ಈಗ ಕೈಗಾರಿಕೆಗಳೆಲ್ಲವೂ ಕೂಡ ಪಟ್ಟಣಗಳಲ್ಲೇ ಕೇಂದ್ರೀಕೃತವಾಗಿವೆ. ಇದರಿಂದ ಗ್ರಾಮಾಂತರಗಳವರು ವಲಸೆ ಬಂದು ಪಟ್ಟಣಗಳಿಗೆ ಸೇರಿ ವ್ಯವಸಾಯವು ಕುಂಠಿತವಾಗಿ ಸರಕಾರ ಎಷ್ಟು ಸೌಲಭ್ಯ ಕೊಟ್ಟರೂ ಕೂಡ ಫಲಕಾರಿಯಾಗಿಲ್ಲ. ನೆಲಮಂಗಲದಿಂದ ನಿತ್ಯವೂ ನಾಲ್ಕು-ಐದು ಲಾರಿಗಳಲ್ಲಿ ಕೆಲಸಗಾರರನ್ನು ಕೈಗಾರಿಕಾ ಸ್ಥಳಕ್ಕೆ ಕರೆತರುತ್ತಿದ್ದಾರೆ. ಅದುದರಿಂದ ಬೆಂಗಳೂರು ಪಟ್ಟಣದ ಸುತ್ತಮುತ್ತ 30 ಮೈಲಿಗಳ ಪ್ರದೇಶದಲ್ಲಿ ಕೈಗಾರಿಕೆಗಳು ಹೆಚ್ಚಾಗಿರುವುದರಿಂದ ಆಹಾರ ಧಾನ್ಯಗಳನ್ನು ಬೆಳೆಯಲು ಎಷ್ಟೇ ಸೌಲಭ್ಯ ಒದಗಿಸಿದರೂ ಕೂಡ ರೈತರು ಗ್ರಾಮಾಂತರಗಳನ್ನು ಬಿಟ್ಟು ಪಟ್ಟಣಗಳಿಗೆ ಬರುತ್ತಿರುವುದರಿಂದ ಪ್ರಯೋಜನವಾಗಿಲ್ಲ. ಅದನ್ನು ತಡೆಗಟ್ಟುವುದಕ್ಕೆ ಒಂದೇ ಮಾರ್ಗ. ಆಯಾಯಾ ಗ್ರಾಮಾಂತರಗಳಲ್ಲಿ ಕೈಗಾರಿಕೆಗಳನ್ನು ವ್ಯವಸ್ಥೆ ಮಾಡುವುದರಿಂದ ಸರ್ಕಾರಕ್ಕೂ ತೊಂದರೆ ತಪ್ಪುತ್ತದೆ ಮತ್ತು ಆಹಾರವನ್ನು ಒದಗಿಸತಕ್ಕ ಸಂದರ್ಭವೂ ಕಡಿಮೆಯಾಗುತ್ತದೆ. ರೈತರು ತಾವು ಬೆಳೆದಂತಹ ಧಾನ್ಯವನ್ನು ಇತರೆಯವರಿಗೆ ಕೊಡುವುದಕ್ಕೂ ಸಹ ಅವಕಾಶವಾಗುತ್ತದೆ ಎಂಬುದನ್ನು ಈ ಸಂದರ್ಭದಲ್ಲಿ ತಮ್ಮ ಗಮನಕ್ಕೆ ತರುತ್ತೇನೆ.

ಸಂಸ್ಥಾನದ ಪೋಲೀಸ್ ಇಲಾಖೆಯ ವಿಚಾರದಲ್ಲಿ ಒಂದು ಸಲಹೆಯನ್ನು ಕೊಡಬೇಕಾಗಿದೆ. ಬಹಳ ಕಾಲದಿಂದಲೂ ಒಂದು ತಾಲ್ಲೂಕಿಗೆ ಒಬ್ಬೊಬ್ಬ ಇನ್‌ಸ್ಪೆಕ್ಟರು ಇದ್ದರು. ಅದನ್ನು ಯಾವ ಕಾರಣದಿಂದಲೋ ಎರಡು ತಾಲ್ಲೂಕಿಗೆ ಒಬ್ಬೊಬ್ಬ ಇನ್‌ಸ್ಪೆಕ್ಟರ್ ಅಂತ ಮಾಡಿದ್ದರಿಂದ ತುಂಬಾ ಕಷ್ಟವಾಗಿದೆ ವಿಧಾಯಕವಾಗಿ ನೂರಾರು ವರ್ಷಗಳಿಂದಲೂ ಒಂದು ತಾಲ್ಲೂಕಿಗೆ ಒಬ್ಬ ಪೋಲೀಸ್ ಇನ್‌ಸ್ಪೆಕ್ಟರು ಅಂತ ಇದ್ದ ಪದ್ಧತಿಯನ್ನೇ ಪುನಃ ಜಾರಿಗೆ ತಂದು ತನ್ಮೂಲಕ ಆಯಾಯ ತಾಲ್ಲೂಕಿನ ಭದ್ರತೆಯನ್ನು ಕಾಪಾಡಬೇಕಾದ್ದು ಸರ್ಕಾರದ ಕರ್ತವ್ಯ ಎಂದು ಹೇಳುತ್ತೇನೆ.

ಮಾನ್ಯರೇ, ಈಗ ಬೆಂಗಳೂರು ಪಟ್ಟಣದಲ್ಲಿ ಬೆಂಗಳೂರು ಡಿಸ್ಟ್ರಿಕ್ಟ್ ಬೋರ್ಡ್ ಅಂತ ಒಂದು ಇದೆ. ಅದು ಡಿಸ್ಟ್ರಿಕ್ಟ್ ಬೋರ್ಡಿನ ಹಣದಿಂದ ಕಟ್ಟಿದ್ದು. ಅದು ಇವತ್ತಿನ ದಿವಸ 20–25–30ಲಕ್ಷ ರೂಪಾಯಿ ಬೆಲೆ ಬಾಳತಕ್ಕದ್ದಾಗಿದೆ. ಅದು ಬೆಂಗಳೂರು ಡಿಸ್ಟ್ರಿಕ್ಟ್‌ನ ಎಲ್ಲಾ ತಾಲ್ಲೂಕಿನ ತಾಲ್ಲೂಕು ಬೋರ್ಡಿಗೆ ಅನ್ವಯಿಸಿದಂತಹ ಆಸ್ತಿ. ಅದರಿಂದ ಬರತಕ್ಕ ಬಾಡಿಗೆಯನ್ನು ಸರ್ಕಾರದವರು ಟಟ ತಾಲ್ಲೂಕುಗಳಿಗೂ ಕೊಡುವುದರ ಮೂಲಕ ಆಯಾಯಾ ತಾಲ್ಲೂಕಿನಲ್ಲಿ ವಿದ್ಯಾ ಕೇಂದ್ರಗಳನ್ನು ಹೆಚ್ಚಿನ ಮಟ್ಟದಲ್ಲಿ ಕಟ್ಟುವುದಕ್ಕೆ ಅವಕಾಶವನ್ನು ಮಾಡಿಕೊಟ್ಟಂತಾಗುತ್ತದೆ. ನಮ್ಮ ತಾಲ್ಲೂಕು ಬೋರ್ಡುಗಳಲ್ಲಿ ಮೇಲ್ವಿಚಾರಣೆ ಇಲ್ಲದೆ ಸರ್ಕಾರದವರು ಅದನ್ನು ತಮ್ಮ ವಶಕ್ಕೆ ತೆಗೆದುಕೊಂಡು ಅಲ್ಲಿ ಬೇರೆ ಬೇರೆ ಕಟ್ಟಡಗಳನ್ನು ಕಟ್ಟುವುದಕ್ಕೆ ಅವಕಾಶ ಮಾಡಬಾರದು. ಕಾರಣವಾದರೂ ಇಷ್ಟೆ. ಅದು ಬಹಳ ಕಾಲದಿಂದಲೂ ತಾಲ್ಲೂಕು ಬೋರ್ಡಿಗೆ ಸಂಬಂಧಪಟ್ಟ, ಡಿಸ್ಟ್ರಿಕ್ ಬೋರ್ಡಿಗೆ ಸಂಬಂಧ ಪಟ್ಟ ವಿಷಯ. ಆದ್ದರಿಂದ ಸ್ಥಳೀಯ ಸಂಸ್ಥೆಗಳು ಇದನ್ನು ಪೂರ್ಣವಾಗಿ ಗಮನಿಸಿ ಅದರಿಂದ ಬರತಕ್ಕ ವರಮಾನವನ್ನು ಟಟ ತಾಲ್ಲೂಕುಗಳಿಗೂ ಕೊಟ್ಟು ತನ್ಮೂಲಕ ವಿದ್ಯಾಕೇಂದ್ರಗಳನ್ನು ಕಟ್ಟುವುದಕ್ಕೆ ಅವಕಾಶ ಕಲ್ಪನೆ ಮಾಡಿಕೊಡಬೇಕೆಂದು ಹೇಳುತ್ತಾ ಇದ್ದೇನೆ.

## ಬೆಂಗಳೂರಿನಲ್ಲಿ ರಿಕ್ಷಾಗಳ ಸಂಖ್ಯೆ ನಿಯಂತ್ರಿಸಿ

ಇನ್ನು ರಾಷ್ಟ್ರೀಕರಣ ಮಾಡತಕ್ಕ ವಿಚಾರದಲ್ಲಿ ಒಂದು ಮಾತು ಹೇಳಬೇಕೆಂದು ಇದ್ದೇನೆ ವಾಹನ ಸೌಕರ್ಯ ಈ ಬೆಂಗಳೂರಿನಲ್ಲಿ ಸುಮಾರು 3,000 ರಿಕ್ಷಾಗಳು ಇವೆ. ಈ ರಿಕ್ಷಾಗಳ ಸಂಖ್ಯೆ ದಿನದಿನಕ್ಕೆ ಬೆಳೆಯುತ್ತಾ ಇದೆ. 500 ರಿಂದ 3,000ಕ್ಕೆ ಏರಿದೆ. ಇದರ ಸಂಖ್ಯೆ ಏರಿದಂತೆಲ್ಲಾ ಟ್ಯಾಕ್ಸಿಗಳವರಿಗೂ

1753-8

ಮತ್ತು ಬೆಂಗಳೂರು ಪಟ್ಟಣದಲ್ಲಿರತಕ್ಕ ಸರ್ಕಾರಿ ಬಸ್ಸುಗಳಿಗೂ ದಿನ ಒಂದಕ್ಕೆ ಸುಮಾರು 10 ಸಾವಿರ ರೂಪಾಯಿನಷ್ಟು ಲುಕ್ಸಾನಾಗುತ್ತಾ ಇದೆ. ಸರ್ಕಾರದವರು ಇದನ್ನು ಗಮನಿಸಿ ಈ ರಿಕ್ಷಾಗಳಿಗೆ ಲೈಸನ್ಸ್‌ನ್ನು ಹೆಚ್ಚಿನ ಮಟ್ಟದಲ್ಲಿ ಕೊಡದೇ ಸಿಟಿಯಲ್ಲಿರತಕ್ಕ ಇತರ ವಾಹನಗಳಿಗೆ ಹೆಚ್ಚಿನ ಅನುಕೂಲ ದೊರೆಯುವಂತೆ ಮಾಡಬೇಕೆಂದು ಹೇಳುತ್ತೇನೆ. ಸಿಟಿ ಸರ್ವೀಸುಗಳಿಗೆ ತುಂಬಾ ನಷ್ಟವಾಗುತ್ತಾ ಇದೆ ಇದನ್ನು ಗಮನಿಸಬೇಕೆಂದು ಈ ಮೂಲಕ ಪ್ರಾರ್ಥಿಸುತ್ತೇನೆ.

ಇನ್ನು ಉಳಿದಿರತಕ್ಕ ಅಂಶ, ಮಾಗಡಿ ತಾಲ್ಲೂಕಿನಲ್ಲಿ ದನಗಳ ಆಸ್ಪತ್ರೆ ಕಟ್ಟಿದ್ದಾರೆ. ಜನಗಳ ಮತ್ತು ದನಗಳ ಆಸ್ಪತ್ರೆಗಳಿಗೆ ಸರ್ಕಾರದ ಸಿಬ್ಬಂದಿ ಬಂದಿಲ್ಲ, ದಯಮಾಡಿ ಅದನ್ನು ಜಾಗ್ರತೆ ಏರ್ಪಾಡು ಮಾಡಿಕೊಡಬೇಕು. ಮಾಗಡಿ ತಾಲ್ಲೂಕಿನಲ್ಲಿ ಅನೇಕ ನೀರಾವರಿ ಕಾಮಗಾರಿಗಳು ಹಾಗೆಯೇ ಉಳಿದು ಬಿಟ್ಟಿವೆ. ಕಾರಣ ಗೊತ್ತಿಲ್ಲ. ತಾವರೆಕೆರೆ, ಬಿಸ್ಕೂರು, ದೊಡ್ಡೇರಿ ಮತ್ತು ನಾಲ್ಕು ಲಕ್ಷ ರೂಪಾಯಿನಲ್ಲಿ ಖರ್ಚುಮಾಡಿದ ಚೆಂಚನಕೆರೆ ಕೋಡಿ, ಮಲ್ಲೇನಹಳ್ಳಿ ಕೆರೆ ಕೋಡಿ ಕೆಟ್ಟು ಹೋಗಿದೆ. ಈ ಕಾಮಗಾರಿಗಳನ್ನು ತೆಗೆದುಕೊಂಡು ಜಾಗ್ರತೆ ಅನುಕೂಲ ಮಾಡಿಕೊಟ್ಟಲ್ಲಿ ಸುಮಾರು ನಾಲ್ಕು ಸಾವಿರಕ್ಕೂ ಮೇಲ್ಪಟ್ಟು ಎಕರೆ ಜಮೀನು ಸಾಗುವಳಿಗೆ ಬಂದು ರೈತರಿಗೂ ಮತ್ತು ದೇಶದ ಪ್ರಜೆಗಳಿಗೂ ಲಾಭವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತಂದಿದ್ದೇನೆ.

ಇನ್ನು ಹೆಚ್ಚು ಕಾಲವನ್ನು ತೆಗೆದುಕೊಳ್ಳದೆ ತಾವು ಕೊಟ್ಟಿರತಕ್ಕ ಕಾಲದಲ್ಲಿ ಕೆಲವು ಅಂಶಗಳನ್ನು ಸರ್ಕಾರದವರ ಗಮನಕ್ಕೆ ತಂದಿದ್ದೇನೆ, ಅದರ ಬಗ್ಗೆ ಪೂರ್ಣ ಮನಸ್ಸು ಕೊಟ್ಟು ಕಾರ್ಯೋನ್ಮುಖರಾಗಬೇಕಾಗಿ ಪ್ರಾರ್ಥಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ. 'ಜೈ ಹಿಂದ್'.

1968 ಅಂದರೆ ಇಂದಿಗೆ ಮೂವತ್ತೇಳು ವರ್ಷಗಳ ಹಿಂದೆಯೇ ಬೆಂಗಳೂರು ನಗರ ಸಾರಿಗೆ ವ್ಯವಸ್ಥೆಯ ಬಗ್ಗೆ ಸಲಹೆ ನೀಡಿದ್ದರು. ಅದರಂತೆ ಬೆಂಗಳೂರಿನ ಆಟೋ ರಿಕ್ಷಾಗಳಿಗೆ ಇತಿ–ಮಿತಿಯಿಲ್ಲದೆ ಪರವಾನಗಿ ನೀಡುವುದನ್ನು ನಿಲ್ಲಿಸಿ ಸಿಟಿ ಸರ್ವೀಸ್ ವಾಹನಗಳನ್ನು ಹೆಚ್ಚು ಮಾಡಿರೆಂದು ಸರ್ಕಾರಕ್ಕೆ ಸಲಹೆ ನೀಡಿದ್ದರು. ಇದರಿಂದ ಬೆಂಗಳೂರು ಮುಂದಿನ ದಿನಗಳಲ್ಲಿ ಕಲುಷಿತ ಹೊಗೆಯುಳ್ಳ ವಾಹನ ದಟ್ಟಣೆ ಕಡಿಮೆಯಾಗುತ್ತದೆ ಎಂದಿದ್ದರು.

## ಆಯ-ವ್ಯಯ ಚರ್ಚೆ

4ನೇ ಮಾರ್ಚ್ 1968

ಸನ್ಮಾನ್ಯ ಸಭಾಪತಿಗಳೇ, ಈ ದಿವಸ ನಮ್ಮ ಹಣಕಾಸಿನ ಸಚಿವರು ಬಹಳ ಸಾಹಸ ಮಾಡಿ ಉಳಿತಾಯ ಬಡ್ಜೆಟ್ಟನ್ನು ಮಂಡಿಸಿದ್ದಾರೆ. ಅದು ದೇಶಕ್ಕೂ ಮತ್ತು ನಮ್ಮೆಲ್ಲರಿಗೂ ಬಹಳ ಸಂತೋಷವನ್ನುಂಟು ಮಾಡಿದೆ. ಅವರು 190 ಕೋಟಿ ರೂಪಾಯಿಗಳ ಬಡ್ಜೆಟ್ಟನ್ನು ಬಹಳ ಚಾಕಚಕ್ಯತೆಯಿಂದ ತಯಾರಿಸಿ ನಮ್ಮ ಮುಂದಿಟ್ಟಿದ್ದಾರೆ. ಅಷ್ಟೇ ಅಲ್ಲ, ಅವರು ಈ ವರ್ಷದ ಬಡ್ಜೆಟ್ಟಿನಲ್ಲಿ ಹಿಂದಿನ ಸಾಲಿಗಿಂತ ಹೆಚ್ಚು ಹಣವನ್ನು ಎಲ್ಲ ಇಲಾಖೆಗಳಿಗೂ ಒದಗಿಸಿದ್ದಾರೆ. ಆದರೆ ಈ ಪೈಕಿ ಕೆಲವು ಬಾಬುಗಳಿಗೆ ಇನ್ನೂ ಹೆಚ್ಚಿನ ಹಣವನ್ನು ಒದಗಿಸಬೇಕಾಗಿತ್ತು ಎಂಬುದು ನನ್ನ ಅಭಿಪ್ರಾಯ.

### ಖಾಸಗಿ ಪ್ರೌಢಶಾಲೆಗಳನ್ನು ಸರ್ಕಾರ ವಹಿಸಿಕೊಳ್ಳಲಿ

ಈಗ ವಿದ್ಯಾ ಇಲಾಖೆಗೆ ಒದಗಿಸಿರತಕ್ಕ ಹಣ ಸಾಲದು. ಅದಕ್ಕೆ ಕಾರಣವಿಷ್ಟೇ-ಸಂಸ್ಥಾನಾಮಳಿ ಪ್ರೌಢಶಾಲೆಗಳು ಹೆಚ್ಚಿನ ಮಟ್ಟದಲ್ಲಿ ಸ್ಥಾಪನೆಯಾದರೆ ರಾಜ್ಯದಲ್ಲಿ ಹೆಚ್ಚಿನ ಮಟ್ಟದಲ್ಲಿ ವಿದ್ಯಾರ್ಜನೆಯಾಗಿ ದೇಶದಲ್ಲಿ ಪ್ರಜಾಪ್ರಭುತ್ವಾಡಳಿತ ಬಂದಿರುವುದಕ್ಕೆ ನಾವು ಮಾನ್ಯತೆಯನ್ನು ಕೊಟ್ಟ ಹಾಗೆ ಆಗುತ್ತದೆ ಅನ್ನುವುದು ಒಂದು. ಇನ್ನು ರಾಜ್ಯದಲ್ಲಿರತಕ್ಕ ರೈತಾಪಿ ಜನರ ಮಕ್ಕಳಿಗೂ ಮತ್ತು ಬಡವರ ಮಕ್ಕಳಿಗೂ ವಿದ್ಯಾರ್ಜನೆಯ ಸೌಲಭ್ಯ ಹೆಚ್ಚುವುದರಿಂದ ಅವರಿಗೂ ಹೆಚ್ಚಿನ ಅನುಕೂಲವಾಗುತ್ತದೆ. ಮತ್ತು ಇನ್ನು ಮುಂದಕ್ಕೆ ಈ ಎಲ್ಲ ಪ್ರೌಢಶಾಲೆಗಳ ಆಡಳಿತವನ್ನೂ ಸರ್ಕಾರದವರೇ ತಮ್ಮ ಸುಪರ್ಧಿಗೆ ತೆಗೆದುಕೊಂಡರೆ ಈ ವಿದ್ಯಾರ್ಜನೆ ಒಂದು ಸುರಕ್ಷಿತ ರೀತಿಯಲ್ಲಿ ನಡೆದು ಹಾಗೂ ಆ ನೌಕರವರ್ಗದ ಹತೋಟಿ ಬಿಗಿಯಾದ ರೀತಿಯಲ್ಲಿದ್ದು ಇದರಿಂದ ಎಲ್ಲರಿಗೂ ಒಳ್ಳೆಯದಾಗುತ್ತದೆಂದು ನಾನು ತಿಳಿದಿದ್ದೇನೆ.

### ಕಂದಾಯ ನಿಗಧಿ ಬಗ್ಗೆ

ಇನ್ನು ರೆವಿನ್ಯೂ ಇಲಾಖೆಯ ವಿಚಾರಕ್ಕೆ ಬಂದರೆ-ಕಂದಾಯವನ್ನು ರೆಮೀಷನ್ ಮಾಡುವ ವಿಚಾರದಲ್ಲಿ ನಾವು ಹಿಂದಿನಿಂದಲೂ ಇದನ್ನು

ಮಾಡಬೇಕೆಂದು ಒತ್ತಾಯ ಮಾಡುತ್ತಲೇ ಬಂದಿದ್ದೇವೆ. ಆದರೆ ಈ ದಿವಸ ಈ ಬಡ್ಜೆಟ್ಟನ್ನು ಮಂಡಿಸುವ ಪ್ರಥಮದಲ್ಲೇ ನಮ್ಮ ಸಚಿವರು ಕಂದಾಯವನ್ನು ತೆಗೆದುಹಾಕಲು ಸಾಧ್ಯವಿಲ್ಲ ಎಂದು ಹೇಳಿದ್ದಾರೆ. ಅದನ್ನು ತೆಗೆದುಹಾಕಲು ಸಾಧ್ಯವಿಲ್ಲ ಅನ್ನುವಂಥ ಒಂದು ಪ್ರಶ್ನೆ ಉದ್ಭವವಾಗಿದೆ. ಆದರೆ ಇದರ ಬಗ್ಗೆ ನಾನು ಈ ಸಂದರ್ಭದಲ್ಲಿ ಸಲಹೆ ಮಾಡಬೇಕೆಂದಿರುವುದಾದರೂ ಇಷ್ಟೇ. ದೇಶದಲ್ಲಿ ಎಲ್ಲೆಲ್ಲಿ ನಾಲ್ಕಾಣಿ ಬೆಳೆ ಇದೆಯೋ ಅಥವಾ ಅದಕ್ಕೂ ಕಡಿಮೆ ಬೆಳೆ ಇದೆಯೋ ಅಂಥ ಜಮೀನುಗಳ ಬಗ್ಗೆ ಎಲ್ಲ ಲೆಕ್ಕಪತ್ರಗಳನ್ನೂ ಜಿಲ್ಲಾಧಿಕಾರಿಗಳ ಮೂಲಕ ಕೂಡಲೆ ತರಿಸಿಕೊಂಡು ಕೂಡಲೆ ಇಂಥ ಜಮೀನುಗಳಿಗೆಲ್ಲಾ ರೆಮಿಷನ್ ಕೊಟ್ಟು ಇನ್ನು ಉಳಿಯತಕ್ಕ ಭೂಮಾಲಿಕರಿಂದ ಸರ್ಕಾರಕ್ಕೆ ಬರಬೇಕಾದ ಕಂದಾಯ ಎಷ್ಟು ಉಳಿದಿದೆಯೋ ಅದನ್ನು ವಸೂಲ್ಮಾಡುವುದಕ್ಕೆ ಕೂಡಲೆ ಕ್ರಮ ಕೈಗೊಳ್ಳಬೇಕೆಂದು ಸಲಹೆ ಮಾಡುತ್ತೇನೆ. ಇನ್ನು ದೇಶದಲ್ಲಿ ಇಲ್ಲಿಯವರೆಗೂ ಕೆಲಸ ಮಾಡುತ್ತಿದ್ದ ಪಟೇಲ್ ಶ್ಯಾನುಭೋಗರನ್ನು ಕೆಲಸದಿಂದ ವಜಾಮಾಡಿ ಅಲ್ಲೆಲ್ಲಾ ಸೆಕ್ರೆಟರಿಗಳನ್ನು ನೇಮಕ ಮಾಡಲಾಗಿದೆ. ಆದರೆ ಈ ವಿಚಾರದಲ್ಲಿ ಸರ್ಕಾರದವರು ಸಾಕಷ್ಟು ಮುನ್ನೆಚ್ಚರಿಕೆ ತೆಗೆದುಕೊಂಡಿಲ್ಲ. ಕೆಲವು ಕಡೆ ಆ ಕಾರ್ಯದರ್ಶಿಗಳನ್ನಿನ್ನೂ ನೇಮಕ ಮಾಡದಿರುವುದರಿಂದ ಅಲ್ಲಿ ವಸೂಲಿಯ ಕೆಲಸ ಹಾಗೇ ನಿಂತುಹೋಗಿದೆ. ಯಾವಾಗ ಸರ್ಕಾರದವರು ಇಂಥ ವಿಚಾರದಲ್ಲಿ ಬಂದು ನಿರೂಪಣೆಯನ್ನು ಹೊರಡಿಸಿದರೋ ಆಗ ಅದರ ಬಗ್ಗೆ ಮುನ್ನೆಚ್ಚರಿಕೆಯನ್ನು ಮುಂಜಾಗ್ರತೆಯನ್ನು ಅವರು ಕೈಗೊಳ್ಳಲೇಬೇಕು. ಅದು ಅಗತ್ಯ. ಆದುದರಿಂದ ದೇಶಾದ್ಯಂತವೂ ಈ ಸೆಕ್ರೆಟರಿಗಳನ್ನು ನೇಮಿಸಿಕೊಳ್ಳಲು ಸಂಬಂಧಪಟ್ಟವರು ಕೂಡಲೇ ಪೂರ್ಣ ಮನಸ್ಸು ಮಾಡಬೇಕು ಎಂಬುದಾಗಿ ನಾನಾದರೂ ಈ ಸಂದರ್ಭದಲ್ಲಿ ಸಲಹೆ ಮಾಡುವುದಕ್ಕೆ ಇಷ್ಟ ಪಡುತ್ತೇನೆ.

## ಮುಜರಾಯಿ ಅರಣ್ಯ ಜಮೀನು ಬಡವರಿಗೆ ಹಂಚಿಬಿಡಿ.

ಇನ್ನು ಮುಜ್ರಾಯಿ ಇಲಾಖೆಗೆ ಸಂಬಂಧಪಟ್ಟ ಜಮೀನುಗಳ ಮತ್ತು ದೇವಾಲಯಗಳ ವಿಚಾರಕ್ಕೆ ಬಂದರೆ–ದೇಶಾದ್ಯಂತ ಲಕ್ಷಾಂತರ ಎಕರೆ ಮುಜ್ರಾಯಿಗೆ ಸಂಬಂಧಪಟ್ಟ ಜಮೀನಿದೆ. ಇದನ್ನು ಹಿಂದಿನ ರಾಜ ಮಹಾರಾಜರುಗಳು ಆ ಸಂಸ್ಥೆಗಳಿಗೆ ಕೊಟ್ಟಿದ್ದಾರೆ. ಅಲ್ಲಿನ ಖರ್ಚುವೆಚ್ಚಗಳಿಗೆ ಈ ದಿವಸ ಸಾಕಷ್ಟು ಹಣವಿಲ್ಲ. ಅದಕ್ಕಾಗಿ ನಾನು ಈ ಸಂದರ್ಭದಲ್ಲಿ ಸಲಹೆ ಮಾಡುವುದೇನೆಂದರೆ–

ಈ ದಿವಸ ಜಮೀನಿಗೆ ಬಹಳ ಬೆಲೆಯಿದೆ; ಆದುದರಿಂದ ಆ ಜಮೀನುಗಳನ್ನೆಲ್ಲಾ ಮಾರಾಟ ಮಾಡಿದರೆ ಹೆಚ್ಚು ಹಣ ಬರುತ್ತದೆ. ಆ ಹಣದಿಂದ ಗುಡಿಗೋಪುರಗಳನ್ನು ಅಭಿವೃದ್ಧಿಪಡಿಸಿ ಅವುಗಳನ್ನು ಉತ್ತಮ ಸ್ಥಿತಿಗೆ ತರಲು ಸಾಧ್ಯವಾಗುತ್ತದೆ ಎಂದು ಹೇಳುತ್ತೇನೆ. ಅಷ್ಟೇ ಅಲ್ಲದೆ ಆ ಜಮೀನುಗಳನ್ನು ಜಮೀನಿಲ್ಲದ ಬಡಬಗ್ಗರಿಗೆ ಮಾರಾಟ ಮಾಡುವುದರಿಂದ ಇತ್ತಲಾಗಿ ಮುಜ್ರಾಯಿ ಇಲಾಖೆಗೆ ಸಂಬಂಧಪಟ್ಟ ಸಣ್ಣ ದೊಡ್ಡ ದೇವಾಲಯಗಳು ಶಾಶ್ವತವಾಗಿ ಅಭಿವೃದ್ಧಿಯಾಗುವುದೇ ಅಲ್ಲದೆ ಅತ್ತ ದೇಶದಲ್ಲಿ ಆ ಮಾರಾಟವಾದ ಭೂಮಿಯಿಂದ ಹೆಚ್ಚು ಬೆಳೆ ಬೆಳೆಯುವುದಕ್ಕೂ ಸಹಾಯವಾಗುತ್ತದೆ. ಆದುದರಿಂದ ಆ ಜಮೀನುಗಳನ್ನು ಮಾರಾಟ ಮಾಡಬೇಕೆಂದು ನಾನು ಸಲಹೆ ಮಾಡುತ್ತೇನೆ. ಇನ್ನು ಫಾರೆಸ್ಟ್ ಇಲಾಖೆಯ ವಿಚಾರಕ್ಕೆ ಬಂದರೆ ಫಾರೆಸ್ಟ್ ಪ್ರದೇಶದಲ್ಲಿ ಎಲ್ಲೆಲ್ಲಿ ನಾ–ದು ರಸ್ತಾದ ಜಮೀನಿದೆಯೋ ಅದನ್ನೂ ಮತ್ತು ಫಾರೆಸ್ಟ್ ಇಲಾಖೆಗೆ ಪ್ರಯೋಜನಕ್ಕೆ ಬಾರದ ಜಮೀನನ್ನು ಮತ್ತು ಗೋಮಾಳ ಭೂಮಿಗಳನ್ನೂ ಆಯಾ ಗ್ರಾಮಗಳಲ್ಲಿ ಜಮೀನಿಲ್ಲದ ಜನರಿಗೆ ಹಂಚಿಕೆ ಮಾಡುವುದರ ಮೂಲಕ ದೇಶದಲ್ಲಿ ಕೃಷಿ ಉತ್ಪನ್ನವನ್ನು ಹೆಚ್ಚಿಸಿ ಹಾಗೂ ದೇಶದಲ್ಲಿರತಕ್ಕ ಬಡ ಜನತೆ ಅವರೂ ಸಹಾ ನಮ್ಮ ಸರಿಸಮಾನರಾಗಿ ದೇಶದ ಸತ್ಪ್ರಜೆಗಳಾಗಿ ಆಗುವುದಕ್ಕೆ ಇದರಿಂದ ಅನುಕೂಲವಾಗುತ್ತದೆಂದು ನಾನು ಈ ವಿಚಾರವನ್ನು ಹೋದ ಬಡ್ಜೆಟ್ ಅಧಿವೇಶನದ ಕಾಲದಲ್ಲೇ ಸಲಹೆ ಮಾಡಿದ್ದೆ. ಆದರೆ ಅದನ್ನಿನ್ನೂ ಕಾರ್ಯರೂಪಕ್ಕೆ ತಂದಿಲ್ಲ. ನಾವು ಇಲ್ಲಿ ಹೀಗೆ ಬಡ್ಜೆಟ್ ಅದಿವೇಶನದ ಕಾಲದಲ್ಲಿ ಮಾಡತಕ್ಕ ಸಲಹೆಗಳಲ್ಲಿ ಸಾಧ್ಯವಾದಷ್ಟನ್ನು ಸರ್ಕಾರದವರು ಕಾರ್ಯರೂಪಕ್ಕೆ ತರಬೇಕು. ಇದರಿಂದ ದೇಶದಲ್ಲಿರತಕ್ಕ ಪ್ರಜೆಗಳಿಗೂ ಅನುಕೂಲವಾಗಿ ಸರ್ಕಾರಕ್ಕೂ ಹೆಚ್ಚಿನ ಆದಾಯ ಬರುತ್ತದೆ ಎಂಬುದಾಗಿ ನಾನಾದರೋ ಭಾವಿಸಿದ್ದೇನೆ.

## ಈಚಲು ವನಗಳನ್ನು ಸರ್ಕಾರ ವಹಿಸಿಕೊಳ್ಳಲಿ

ಇನ್ನು ಎಕ್ಸೈಜ್ ಇಲಾಖೆಯ ವಿಚಾರಕ್ಕೆ ಬಂದರೆ ಕೆಲವು ವರ್ಷಗಳ ಕಾಲ ನಾವು ಇದನ್ನು ದೇಶದಲ್ಲಿ ರದ್ದು ಮಾಡಿದ್ದೆವು. ನಾವು ಯಾವ ಒಂದು ಸದುದ್ದೇಶದಿಂದ ಪಾನನಿರೋಧವನ್ನು ದೇಶದಲ್ಲಿ ರದ್ದು ಮಾಡಿದ್ದೆವೋ ಅದರಿಂದ ಸತ್ಪರಿಣಾಮವಾಗುವುದರ ಬದಲು ಹೆಚ್ಚಿನ ದುಷ್ಪರಿಣಾಮವೇ ಆಯಿತು. ನಾವು ಬಯಸಿದ್ದ ಉದ್ದೇಶ ಸಫಲವಾಗಲಿಲ್ಲ. ಆದ್ದರಿಂದ ಅದನ್ನು ಈ ದಿವಸ ರದ್ದು ಮಾಡಿ ಮತ್ತೆ ಶೇಂದಿ ಅಂಗಡಿಗಳನ್ನು ಹರಾಜ್ ಮಾಡತಕ್ಕ ಅವಶ್ಯಕತೆ ಉಂಟಾಯಿತು

ಅದರಿಂದ ಸರ್ಕಾರಕ್ಕೆ ಹಣವನ್ನು ರೂಡಿಸಲು ಅನುಕೂಲವಾಗುತ್ತದೆ. ಆದರೆ ದೇಶದಲ್ಲಿ ಮೊದಲಿನ ಹಾಗೆ ಈ ದಿವಸ ಈಚಲುವನಗಳಿಲ್ಲ. ಆದುದರಿಂದ ಈ ದಿವಸ ತೆಂಗಿನ ಮರಗಳಿಂದ ಶೇಂದಿಯನ್ನು ಉತಾರ್ ಮಾಡಲಾಗುತ್ತಿದೆ. ಈ ವಿಚಾರದಲ್ಲಿ ನಾನಾದರೂ ಸಲಹೆ ಮಾಡುವುದೇನೆಂದರೆ ರಾಜ್ಯದಲ್ಲಿ ಈ ದಿವಸ ಈಚಲುವನ ಇರತಕ್ಕ ಭೂಮಿ ಎಲ್ಲೆಲ್ಲಿ ಉಳಿದಿದೆಯೋ ಅದನ್ನು ಸರ್ಕಾರದವರೇ ತಮ್ಮ ವಶಕ್ಕೆ ತೆಗೆದುಕೊಂಡು ಅದನ್ನು ವೃದ್ಧಿ ಪಡೆಸಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

## ಶಿಕ್ಷಣದ ಬಗ್ಗೆ

ಇನ್ನು ವಿದ್ಯಾಭ್ಯಾಸ ವಿಚಾರದಲ್ಲಿ ಒಂದು ಮಾತನ್ನು ಹೇಳಲಿಚ್ಛಿಸುತ್ತೇನೆ; ಇದರ ಬಗೆಗೆ ನಾನು ಒಂದು ವಿಷಯ ಪ್ರಸ್ತಾಪ ಮಾಡುವುದನ್ನು ಮರೆತಿದ್ದೆ. ವಿದ್ಯಾಮಂದಿರಗಳನ್ನು ಕಟ್ಟಿಸತಕ್ಕ ವಿಚಾರದಲ್ಲಿ ಈ ದಿವಸ ಏನೊಂದು ತೊಂದರೆಯಿದೆ ಎಂಬುದನ್ನು ವಿದ್ಯಾ ಮಂತ್ರಿಗಳು ಕಂಡುಹಿಡಿದು ಅದರ ನಿವಾರಣೆಯಲ್ಲಿ ಅವರು ನಿರತರಾಗಬೇಕು. ತಾಲ್ಲೂಕ್ ಬೋರ್ಡಿನವರು ಈ ಶಾಲಾಕಟ್ಟಡಗಳ ಬಗ್ಗೆ ಒಂದು ಸಾವಿರ ರೂಪಾಯಿಗಳ ಗ್ರಾಂಟನ್ನು ಕೊಡಬೇಕೆಂದರೆ ಅವರಿಗೆ ಸಾಧ್ಯವಿಲ್ಲ. ಹೀಗಾಗಿ ಅನೇಕ ಕಡೆಗಳಲ್ಲಿ ಪ್ರಾಥಮಿಕ ಶಾಲೆಗಳಿಲ್ಲದೆ ಮಕ್ಕಳ ವಿದ್ಯಾಭ್ಯಾಸ ಮರದ ಕೆಳಗೆ ನಡೆಯಬೇಕಾಗಿದೆ. ಆದುದರಿಂದ ಈ ವಿಚಾರದಲ್ಲಿ ಸರ್ಕಾರದವರು ಈ ಗ್ರಾಂಟನ್ನು 2 ಸಾವಿರ ರೂಪಾಯಿಗಳಿಗೆ ಏರಿಸಿ ಅದರಲ್ಲಿ ಒಂದು ಸಾವಿರವನ್ನು ಸರ್ಕಾರದವರು ಕೊಟ್ಟು ಇನ್ನುಳಿದ ಒಂದು ಸಾವಿರವನ್ನು ಗ್ರಾಮಪಂಚಾಯಿತಿಗಳಿಂದ ಕೊಡಿಸುವುದಕ್ಕೆ ಏರ್ಪಾಡು ಮಾಡಬೇಕಾಗಿ ಪ್ರಾರ್ಥನೆ ಮಾಡುತ್ತೇನೆ. ಸರ್ಕಾರದವರು ಇದನ್ನು ಕಾರ್ಯಗತ ಮಾಡಬೇಕಾದ್ದು ಅಗತ್ಯವೆಂದು ನಾನು ಭಾವಿಸಿದ್ದೇನೆ. ಈ ದಿವಸ ತಾಲ್ಲೂಕ್ ಬೋರ್ಡುಗಳ ಉತ್ಪನ್ನ ಸಾಕಾಗುವುದಿಲ್ಲ. ಅದಕ್ಕಾಗಿ ಆಯಾಯ ತಾಲ್ಲೂಕಿನಲ್ಲಿ ಸಬ್‌ರಿಜಿಸ್ಟ್ರಾರ್ ಆಫೀಸಿನಲ್ಲಿ ರಿಜಿಸ್ಟರ್ ಆಗತಕ್ಕ ಕಾಗದ ಪತ್ರಗಳ ಫೀಜಿನಲ್ಲಿ ನೂರಕ್ಕೆ ಮೂರು ರೂಪಾಯಿಗಳಂತೆ ಆ ದರವನ್ನು ಹೆಚ್ಚುಮಾಡಿ ಆ ಹೆಚ್ಚಿಗೆ ಬರತಕ್ಕ ಹಣವನ್ನು ತಾಲ್ಲೂಕು ಬೋರ್ಡುಗಳಿಗೆ ಕೊಟ್ಟರೆ ಅವರಿಗೆ ಆಗ ಈ ಶಾಲಾಕಟ್ಟಡಗಳನ್ನು ಕೈಗೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಜನರಿಂದ ಬರತಕ್ಕ ಹಣವನ್ನು ಜನರ ಅಭಿವೃದ್ಧಿಗೆ ವಿನಿಯೋಗ ಮಾಡಿದ ಹಾಗೆ ಆಗುತ್ತದೆ. ಸರ್ಕಾರಕ್ಕೆ ಪ್ರಜೆಗಳಿಂದ ನಾನಾ ಮುಖವಾಗಿ ಬರತಕ್ಕ ಹಣವನ್ನು

ನಾನಾ ರೀತಿಯಲ್ಲಿ ಜನರಿಗೇ ಹಿಂದಿರುಗಿಸಿದಂತೆ ಆಗುತ್ತದೆ. ಅದರಿಂದ ಜನರೂ ತೃಪ್ತರಾಗುತ್ತಾರೆ. ಆದ್ದರಿಂದ ಇದನ್ನು ಸಂಬಂಧಪಟ್ಟ ಇಲಾಖೆಯ ಮಂತ್ರಿಗಳು ಗಮನ ಕೊಡಬೇಕೆಂದು ಹೇಳುತ್ತೇನೆ.

## ಮಾಗಡಿ ಕ್ಷೇತ್ರದ ಕೆರೆಗಳು

ಇನ್ನು ಪಿ.ಡಬ್ಲ್ಯು.ಡಿ ವಿಚಾರಕ್ಕೆ ಬಂದರೆ–ಸಣ್ಣ ಸಣ್ಣ ಕೆರೆಗಳು ಹಾಗೂ ಪಿಕಪ್‌ಗಳ ಬಗ್ಗೆ ಹೆಚ್ಚು ಹಣವನ್ನು ಒದಗಿಸಬೇಕಾಗಿತ್ತು. ಈಗ ಒದಗಿಸಿರತಕ್ಕದ್ದು ಸಾಲದು. ದೊಡ್ಡ ದೊಡ್ಡ ಜಲಾಶಯಗಳನ್ನು ಕಟ್ಟುವುದಕ್ಕೆ ಹೆಚ್ಚಿನ ಹಣವನ್ನು ಖರ್ಚು ಮಾಡುವ ಕಾರ್ಯವನ್ನು ನಮ್ಮ ಸರ್ಕಾರ 10 ವರ್ಷಗಳಿಂದೀಚೆಗೆ ಕೈಗೊಂಡಿದೆ; ಸಂತೋಷ. ದೊಡ್ಡ ದೊಡ್ಡ ಜಲಾಶಯಗಳನ್ನು ಮಾಡುವುದರಲ್ಲಿ ಯಾರಿಗೂ ಅಭ್ಯಂತರವಿಲ್ಲ. ಆದರೆ ಒಂದು ಕಾರ್ಯ ಮಾಡಬೇಕು. ಬೆಂಗಳೂರು ಜಿಲ್ಲೆಯಲ್ಲಿ ಮಾಗಡಿ ತಾಲ್ಲೂಕಿನಲ್ಲಿ 225 ಕೆರೆಗಳಿವೆ. ಅದರಲ್ಲಿ ಸಣ್ಣ ಕೆರೆಗಳು 180 ಇವೆ. ಅಲ್ಲಿ ಸರ್ಕಾರದವರು ಹೆಚ್ಚಿನ ಬೆಳೆಯನ್ನು ಬೆಳೆದು ತನ್ಮೂಲಕ ಕೃಷಿ ಸಂಪತ್ತನ್ನು ಹೆಚ್ಚಿಸಿ ಧಾನ್ಯವನ್ನು ಯಥೇಚ್ಚವಾಗಿ ಬೆಳೆಯಬೇಕೆಂಬ ಯೋಜನೆಯನ್ನು ಇಟ್ಟುಕೊಂಡಿದ್ದಾರೆ. ಅದರ ಬಗ್ಗೆ ಇನ್ನೂ ಪೂರ್ಣ ವಿಚಾರ ಮಾಡಿ ಲಾಭ ಪಡೆಯುವುದರ ಜೊತೆಗೆ ರೈತನ ಏಳಿಗೆಗೂ ಗಮನ ಕೊಟ್ಟಂತಾಗುತ್ತದೆಂಬ ಅಂಶವನ್ನು ನಾನು ಸರ್ಕಾರಕ್ಕೆ ಒತ್ತಾಯ ಮಾಡಿ ಹೇಳುತ್ತಿದ್ದೇನೆ.

## ಸಾರಿಗೆ ಸೌಕರ್ಯ ಹೆಚ್ಚಿಸಿ

**5–30 ಪಿ.ಎಂ.**

ಇನ್ನು ಸಾರಿಗೆ ವಿಷಯದಲ್ಲಿ ಸಂಬಂಧಪಟ್ಟ ಮಂತ್ರಿಗಳಲ್ಲಿ ಒಂದು ವಿಷಯ ತಿಳಿಸುವುದಕ್ಕೆ ಇಷ್ಟಪಡುತ್ತೇನೆ. ಸಾರಿಗೆ ಸೌಕರ್ಯ ಹೆಚ್ಚಿನ ಮಟ್ಟದಲ್ಲಿ ದೇಶದ ಮೂಲೆ ಮೂಲೆಗಳಲ್ಲಿಯೂ ನಡೆದಿದೆ. ಇನ್ನೂ ಅದರ ಅಭಿವೃದ್ಧಿ ಬಗ್ಗೆ ಕೋಟಿಗಟ್ಟಲೆ ರೂಪಾಯಿಗಳನ್ನು ಬಂಡವಾಳ ಹಾಕಿ ಅದನ್ನು ಇನ್ನೂ ಹೆಚ್ಚಿನ ಮಟ್ಟದಲ್ಲಿ ಪ್ರಜೆಗಳಿಗೆ ಎಲ್ಲಾ ರೀತಿಯಲ್ಲಿಯೂ ಸೌಕರ್ಯಗಳನ್ನು ಒದಗಿಸುವ ವ್ಯವಸ್ಥೆ ಮಾಡಬೇಕು. ಇದಕ್ಕೆ ಬಹಳ ಹೆಚ್ಚಿನ ಮಹತ್ವವನ್ನು ಸಾರಿಗೆ ಇಲಾಖೆಯಲ್ಲಿರುವ ಅಧಿಕಾರಿಗಳು ಕೊಡಬೇಕು. ಅವರಿಂದ ಯಾವ ರೀತಿಯಲ್ಲಿಯೂ ದುರುಪಯೋಗವಾಗದೆ ಪ್ರತಿಯೊಂದು

ಹಂತದಲ್ಲಿಯೂ ಕಾವಲು ಇಟ್ಟು ಹೆಚ್ಚಿನ ಸೌಕರ್ಯಗಳನ್ನು ಪ್ರಜೆಗಳಿಗೆ ಕೊಡಬೇಕು. ನೇರವಾಗಿ ಇದರಿಂದ ಜನಗಳಿಗೆ ಅನುಕೂಲವಾಗುವಂತೆ ತಕ್ಕ ವ್ಯವಸ್ಥೆಗಳನ್ನು ಮಾಡುವುದಕ್ಕೆ ಸಂಬಂಧಪಟ್ಟ ಮಂತ್ರಿಗಳೂ ಸಹ ಗಮನಿಸಬೇಕಾದುದು ಅವಶ್ಯಕ. ಈಗಿನ ಡ್ರೈವರ್ಸ್‌ಗೆ ಸಾಕಷ್ಟು ಟ್ರೈನಿಂಗ್ ಇಲ್ಲ. ಕಂಡಕ್ಟರುಗಳಿಗೂ ಶಿಕ್ಷಣವಿಲ್ಲ. ಇಂತಹವರನ್ನು ಹೆಚ್ಚು ಸಂಖ್ಯೆಯಲ್ಲಿ ಸೇರಿಸಿಕೊಂಡಿರುವುದರಿಂದಲೇ ಇತ್ತೀಚೆಗೆ ಬಹಳವಾಗಿ ಅಪಾಯಗಳು ಉಂಟಾಗುತ್ತಿವೆ. ಇದರಿಂದ ದೇಶದ ಜನರಿಗೆ ನೆಮ್ಮದಿ ಇಲ್ಲ, ಭಯವಿದೆ. ಆದ್ದರಿಂದ ಸುಶಿಕ್ಷಿತರಾದ ಡ್ರೈವರ್‌ಗಳನ್ನು ನೇಮಿಸಬೇಕಾದುದು ಅವಶ್ಯಕವಾಗಿದೆ. ಇನ್ನೊಂದು ವಿಷಯ. ಅನೇಕ ಅನಾವಶ್ಯಕವಾದಂಥ ಇಲಾಖೆಗಳು ಕಾರಣಾಂತರದಿಂದ ಉಳಿದಿವೆ. ಅವಿನ್ನೂ ಮುಂದುವರೆಯುತ್ತಲೇ ಇವೆ. ಅವನ್ನೆಲ್ಲಾ ಚೆನ್ನಾಗಿ ಪರಿಶೀಲಿಸಿ ಸಾಧ್ಯವಾದ ಮಟ್ಟಿಗೂ ಕೆಲವು ಇಲಾಖೆಗಳನ್ನು ರದ್ದುಮಾಡುವುದರ ಮೂಲಕ ಉಳಿಯುವ ಮೊಬಲಗನ್ನು ಸರ್ಕಾರದವರು ಕೃಷಿ ಇಲಾಖೆಗೆ ಮತ್ತು ಅದರ ಯೋಜನೆಗಳಿಗೆ, ಹಾಗೂ ನೀರಾವರಿ ಸೌಲಭ್ಯಗಳಿಗೆ, ಕರೆಂಟಿನ ಅನುಕೂಲಕ್ಕೆ ಒದಗಿಸಬೇಕಾದುದು ಅವಶ್ಯಕ. ಈಗ ನಮ್ಮ ಮಾನ್ಯ ಸ್ನೇಹಿತರು ಕೆಲವರು ಈ ವಿದ್ಯುಚ್ಛಕ್ತಿ ಇಲಾಖೆಯ ವಿಚಾರವಾಗಿ ಬಹಳ ಹೊತ್ತು ಮಾತನಾಡಿದ್ದಾರೆ. ಅನೇಕರು ಕೆಲವು ಸಲಹೆಗಳನ್ನೂ ಸಹ ಮಾಡಿದ್ದಾರೆ. ರೈತರಿಗೆ ಕೊಡುವುದು ಏನು ಪಂಪುಸೆಟ್ಟು ವಗೈರೆ ಇದೆ ಅದಕ್ಕೆ ಬೇಕಾಗುವ ಕರೆಂಟ್ ಸೌಲಭ್ಯವನ್ನು ಈಗಿರತಕ್ಕ ಮಟ್ಟಕ್ಕಿಂತ ಉತ್ತಮ ಪಡಿಸುವುದು ಅವಶ್ಯಕ. ಕರೆಂಟ್ ಉತ್ಪಾದನೆಯನ್ನು ಹೆಚ್ಚಿಗೆ ಮಾಡಬೇಕು ನಿಜ. ಹೊರ ಪ್ರಾಂತಗಳಿಗೆ ಕರೆಂಟ್ ಕೊಡುವ ಮನಸ್ಸು ಸರ್ಕಾರಕ್ಕೆ ಇದ್ದರೆ ನಮ್ಮ ದೇಶದ ಜನರಿಗೆ ನಮ್ಮಲ್ಲಿ ಉತ್ಪಾದನೆಯಾದಂಥ ಕರೆಂಟನ್ನು ಕಡಿಮೆ ಬೆಲೆಯಲ್ಲಿ ಕೊಡುವ ಒಂದು ಪ್ರೋತ್ಸಾಹವನ್ನು ಈಗ ಒದಗಿಸಬೇಕಾದುದು ಅಗತ್ಯ.

## ಎಸ್. ನಿಜಲಿಂಗಪ್ಪನವರಿಗೆ ಬೆಂಬಲ ನೀಡೋಣ

ಇನ್ನು ಮೈಸೂರು ರಾಜ್ಯದಲ್ಲಿ ನಮ್ಮ ಸ್ನೇಹಿತರು ಅನೇಕರು ಆಗಿಂದಾಗ್ಗೆ ಜನಗಳಿಂದ ಚುನಾಯಿತರಾಗಿ ಇಲ್ಲಿಗೆ ಬಂದಿದ್ದಾರೆ. ಅವರೆಲ್ಲರ ಬಗ್ಗೆ ನನಗೆ ಗೌರವವಿದೆ. ಅವರು ಬೇರೆ ಬೇರೆ ಪಕ್ಷಗಳಿಂದ ಇಲ್ಲಿಗೆ ಬಂದಿರಬಹುದು. ಕೆಲವರು ಮುಖ್ಯಮಂತ್ರಿಗಳ ವಿಚಾರದಲ್ಲಿ ಹೇಳುತ್ತಾ ಪದೇ ಪದೇ ಅವರು ರಾಜೀನಾಮೆ ಕೊಡಬೇಕು, ಮುಖ್ಯಮಂತ್ರಿಗಳ ಸ್ಥಾನಕ್ಕೆ ಅಥವಾ ಕಾಂಗ್ರೆಸ್ ಅಧ್ಯಕ್ಷ

ಸ್ಥಾನಕ್ಕೆ ರಾಜೀನಾಮೆ ಕೊಡಬೇಕು ಎಂಬುದಾಗಿ ಒಂದು ಸಲಹೆಯನ್ನು ನೀಡುತ್ತಿದ್ದಾರೆ. ಅವರಿಗೆ ನಾನು ಒಂದು ವಿಷಯವನ್ನು ಹೇಳಬೇಕಾಗಿದೆ. 4 ಕೋಟಿ ಜನರ ವಿಶ್ವಾಸವನ್ನು ಗಳಿಸಿದಂಥ ಮಾನ್ಯ ಮುಖ್ಯ ಮಂತ್ರಿಗಳು ಈಗ ನಮ್ಮೆಲ್ಲರ ಮತ್ತು ದೇಶದ ಬೆಂಬಲದಿಂದ 50 ಕೋಟಿ ಜನರ ನಾಯಕತ್ವವನ್ನು ವಹಿಸಿದ್ದಾರೆ. ಅದರ ಬಗ್ಗೆ ಯಾವುದೇ ಮನಸ್ಸಿನಲ್ಲಿ ವ್ಯತ್ಯಾಸವಿದ್ದರೂ ಕೂಡ ಯಾರೇ ಆಗಲಿ ನಮ್ಮ ಸಂತೋಷವನ್ನು ವ್ಯಕ್ತಪಡಿಸಬೇಕಾದುದು ಸಹಜ. ಹೇಗೆಂದರೆ ನಮ್ಮ ಪಕ್ಕದ ಮನೆಯ ಹುಡುಗನೇನಾದರೂ ಶ್ರೀಮಂತನಾದಾಗ ಅಥವಾ ಉತ್ತಮ ದರ್ಜೆಗೆ ಹೋದಾಗ ನಾವು ಸಂತೋಷವನ್ನು ವ್ಯಕ್ತಪಡಿಸುವುದು ಅವಶ್ಯಕ. ಆ ರೀತಿಯಾಗಿ ನಾವೆಲ್ಲರೂ ಅವರ ಬಗ್ಗೆ ನಮ್ಮ ಮೆಚ್ಚುಗೆಯನ್ನೂ ಹಾಗೂ ಸಂತೋಷವನ್ನೂ ವ್ಯಕ್ತಪಡಿಸಬೇಕಾದುದು ಸಹಜವಾಗಿದೆ. ಈ ದೇಶದಲ್ಲಿ ಹೆಚ್ಚಿನ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿರುವಾಗ, ಅದರಲ್ಲಿಯೂ ದೇಶ ಪ್ರಗತಿಯಾಗಿ ಮುಂದೆ ಬರುತ್ತಿರುವ ಕಾಲದಲ್ಲಿ ಇಂಥವರ ಮಾರ್ಗದರ್ಶನ ಮತ್ತು ನಾಯಕತ್ವ ನಮಗೆ ಅಗತ್ಯವಾಗಿದೆ. ಮಾನ್ಯ ಶ್ರೀ ನಿಜಲಿಂಗಪ್ಪನವರು ಸ್ವಾರ್ಥಕ್ಕಾಗಿ ಏನನ್ನೂ ಉಪಯೋಗಿಸುವುದಕ್ಕೆ ಅವಕಾಶವಿಲ್ಲ. ಏನು ಸೌಲಭ್ಯ ದೊರೆತರೂ ಅದು ಜನರಿಗೇ ಲಭಿಸುತ್ತದೆ. ಈಗ ಕೆಲವು ಕಾರಣಾಂತರಗಳಲ್ಲಿ ಅವರು ವಿಧಾನಸೌಧದಲ್ಲಿ ಮುಖ್ಯ ಮಂತ್ರಿಯಾಗಿಯೇ ಇರಬೇಕಾಗಿದೆ. ಏಕೆಂದರೆ, ಅನೇಕ ಕಷ್ಟ ಪರಂಪರೆಗಳು ಈಗ ದೇಶದಲ್ಲಿ ಉಂಟಾಗಿವೆ. ಆಹಾರ ಧಾನ್ಯಗಳ ಬಗ್ಗೆ ಜನಗಳಿಗೆ ರಕ್ಷಣೆ ಕೊಡುವ ಬಗ್ಗೆ ನಾವೂ ನೀವೂ ಚೆನ್ನಾಗಿ ಆಲೋಚನೆ ಮಡಬೇಕಾದ ಸಂದರ್ಭಗಳೂ ಇವೆ. ಅವುಗಳನ್ನು ಪರಿಹರಿಸುವ ಕಾರ್ಯ ಈಗ ಬಹಳ ಅಗತ್ಯವಾಗಿದೆ.

## ಆಡಳಿತ ಚುರುಕಾಗಲಿ, ಇಲಾಖೆಗಳು ಕಡಿಮೆ ಇರಲಿ

ನಾನು ಇನ್ನು ಹೆಚ್ಚು ಹೊತ್ತು ಸಭೆಯ ಕಾಲವನ್ನು ತೆಗೆದುಕೊಳ್ಳುವುದಕ್ಕೆ ಇಷ್ಟಪಡುವುದಿಲ್ಲ. ಒಂದು ವಿಷಯ ಮಾತ್ರ ಇಲ್ಲಿ ಹೇಳುತ್ತೇನೆ. ರೆವಿನ್ಯೂ ಸಬ್ ಡಿವಿಜನ್ಸ್ ಎಂದು ನಮ್ಮ ಸಂಸ್ಥಾನದಲ್ಲಿದೆ. ಅವುಗಳ ಅಗತ್ಯತೆ ಅಷ್ಟಾಗಿ ಇಲ್ಲ. ಏನಾದರೂ ಅರ್ಜಿಯನ್ನು ಕೊಟ್ಟರೆ, ಅದು ತಹಶೀಲ್ದಾರರಿಂದ ಅಮಲ್ದಾರರಿಗೆ ಅಮಲ್ದಾರರಿಂದ ಸಬ್ ಡಿವಿಜನ್ನಿಗೆ, ಪುನಃ ಸಬ್ ಡಿವಿಜನ್ನಿನಿಂದ ಡೆಪ್ಯೂಟಿ ಕಮೀಷನರಿಗೆ ತಲುಪುವುದಕ್ಕೆ ಎಷ್ಟೋ ನಿಧಾನವಾಗುತ್ತದೆ. ಸಬ್ ಡಿವಿಜನ್ನಿನಿಂದ ಅಧಿಕಾರಿಗಳು ನಿಜವಾಗಿ ಜಾಗ್ರತೆಯಾಗಿ ಕೆಲಸ ಮಾಡುತ್ತಾ ಇಲ್ಲ. ಈ ವಿಚಾರವನ್ನು

ನಾನು ಅನೇಕ ವರ್ಷಗಳಿಂದಲೂ ಹೇಳುತ್ತಿದ್ದೇನೆ. ರೆವಿನ್ಯೂ ಸಬ್ ಡಿವಿಜನ್ ಆಫೀಸುಗಳ ರದ್ದತಿಯ ವಿಚಾರದಲ್ಲಿ ನಾನು ಅನೇಕ ಸಾರಿ ಈ ಸಭೆಯಲ್ಲಿ ಪ್ರಾರ್ಥನೆ ಮಾಡಿದ್ದೇನೆ. ಈಗಲು ಸರ್ಕಾರದವರು ಇದನ್ನು ಆಲೋಚನೆ ಮಾಡಬೇಕಾದಂಥ ಅಂಶ. ಅನಾವಶ್ಯಕವಾದಂಥ ಅನೇಕ ಇಲಾಖೆಗಳನ್ನು ಸುಮ್ಮನೆ ಹೆಚ್ಚಿಸಿಕೊಂಡು ತನ್ಮೂಲಕ ಪ್ರಜೆಗಳ ಮೇಲೆ ಹೆಚ್ಚಿನ ಭಾರವನ್ನು ವಹಿಸತಕ್ಕದ್ದು ಸರಿಯಲ್ಲ. ಪ್ರಜೆಗಳ ರಕ್ಷಣೆ ಬಗ್ಗೆ ಸರ್ಕಾರ ನಿಯಮಿತವಾದಂಥ ವ್ಯವಸ್ಥೆಯನ್ನು ಆಲೋಚನೆ ಮಾಡಿ ಕಾರ್ಯೋನ್ಮುಖರಾಗಬೇಕಾದುದು ಅತ್ಯಾವಶ್ಯಕ, ನಾನು ನಿನ್ನೆ ಭಾನುವಾರ ಮದ್ರಾಸಿಗೆ ಹೋಗಿದ್ದಾಗ ಅಲ್ಲಿನ ಶಾಸಕರಿಗೆ ಭವನವನ್ನು ಏರ್ಪಾಡು ಮಾಡಿದ್ದಾರೆ. ಅಲ್ಲಿನ ಭವನದಂತೆ ನಮ್ಮಲ್ಲಿಯೂ ಕೂಡ ಒಬ್ಬೊಬ್ಬರಿಗೆ ಒಂದೊಂದು ಕೊಠಡಿಯಂತೆ ಎಲ್ಲರಿಗೂ ಪಕ್ಷಪಾತವಿಲ್ಲದೆ ಒಂದೇ ಸಮನಾಗಿ ಕೊಡುವ ವ್ಯವಸ್ಥೆ ಮಾಡಬೇಕೆಂದು ಅದಕ್ಕೆ ಸರ್ಕಾರದವರು ಕೂಡಲೇ ಮನಸ್ಸು ಮಾಡಬೇಕೆಂದು ಹೇಳುತ್ತೇನೆ, ಈ ಸಂದರ್ಭದಲ್ಲಿ ಸರ್ಕಾರವನ್ನು ಒತ್ತಾಯ ಮಾಡಿ ಹೇಳುವಂಥ ಅಂಶಗಳು ಇನ್ನೂ ಇದ್ದುವು. ಮುಂದೆ ಕಾಲಾವಕಾಶವನ್ನು ಕಲ್ಪಿಸಿಕೊಟ್ಟಾಗ ಅವನ್ನೆಲ್ಲಾ ಹೇಳುತ್ತೇನೆ. ಈಗ ಅಧ್ಯಕ್ಷರು ಇಷ್ಟು ಅವಕಾಶವನ್ನು ನನಗೆ ಕೊಟ್ಟಿದ್ದಕ್ಕಾಗಿ ಅವರಿಗೂ, ಬಡ್ಜೆಟ್ಟನ್ನು ತಯಾರು ಮಾಡಿದಂಥ ಒಳ್ಳೆಯ ದಕ್ಷರಾದ ನಮ್ಮ ಆರ್ಥಿಕ ಮಂತ್ರಿಗಳಿಗೂ, ಮಂತ್ರಿಮಂಡಲಕ್ಕೂ ಹಾಗೂ ಮಾನ್ಯ ಮುಖ್ಯ ಮಂತ್ರಿಗಳಿಗೂ ವಂದಿಸಿ ನನ್ನ ಮಾತನ್ನು ಮುಕ್ತಾಯ ಮಾಡುತ್ತೇನೆ.

ಜೈ ಹಿಂದ್.

## ವಿದ್ಯುತ್ ಸರಬರಾಜು

19ನೇ ಮಾರ್ಚ್ 1968

ಸನ್ಮಾನ್ಯ ಸಭಾಧ್ಯಕ್ಷರೇ, ಈ ದಿವಸ ನಮ್ಮ ಮುಂದೆ ಸರ್ಕಾರದವರು ಮಂಡಿಸಿರತಕ್ಕ ಲೋಕೋಪಯೋಗಿ ಇಲಾಖೆಯ ಡಿಮಾಂಡನ್ನು ನಾನು ಅನುಮೋದಿಸುತ್ತಾ ಕೆಲವು ಸಲಹೆಗಳನ್ನು ಕೊಡಲಿಕ್ಕೆ ತಮ್ಮ ಮುಂದೆ ನಿಂತಿದ್ದೇನೆ. ಈಗ ಮೈಸೂರು ಸಂಸ್ಥಾನದಲ್ಲಿ ಇದಕ್ಕೆ 93ಕೋಟಿ ರೂಪಾಯಿಗಳ ಒಂದು ಡಿಮ್ಯಾಂಡ್ ಇದ್ದಾಗ್ಯೂ ಕೂಡ ಮೈನರ್ ಕೆರೆಗಳ ಜೀರ್ಣೋದ್ಧಾರಕ್ಕೋಸ್ಕರ ಸ್ವಲ್ಪ ಹೆಚ್ಚಿನ ಹಣವನ್ನು ಮೀಸಲಾಗಿಡಬೇಕಾಗಿತ್ತು ಎಂದು ನನ್ನ ಭಾವನೆ. ಸರ್ಕಾರದವರು ಈ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ವಹಿಸಬೇಕು ಕಾರಣ ಇಷ್ಟೆ. ಮೈಸೂರು ಸಂಸ್ಥಾನದ

ನಾನಾ ಭಾಗಗಳಲ್ಲಿ ದೊಡ್ಡ ದೊಡ್ಡ ಜಲಾಶಯಗಳನ್ನು ನಿರ್ಮಾಣ ಮಾಡುವುದಕ್ಕೆ ಸರ್ಕಾರದವರು ಹೆಚ್ಚಿನ ಮೊತ್ತವನ್ನು ನಿಗದಿ ಮಡಿದ್ದಾರೆ, ಸಂತೋಷ. ಆದರೆ ಮೈನರ್ ಕೆರೆಗಳ ಜೋಣೋದ್ದಾರಕ್ಕೋಸ್ಕರ, ಸಾವಿರಾರು ವರ್ಷಗಳಿಂದ ರಾಜಮಹಾರಾಜರುಗಳು ಕಟ್ಟಿಸಿ ಹೋಗಿರತಕ್ಕ ಕೆರೆಗಳ ಜೀರ್ಣೋದ್ದಾರಕ್ಕೋಸ್ಕರ ಹೆಚ್ಚಿನ ಮಟ್ಟದಲ್ಲಿ ಹಣವನ್ನು ಮೀಸಲಾಗಿಡಬೇಕಾಗಿತ್ತು. ಎಂದು ನನ್ನ ಭಾವನೆ. ಈಗಾಗಲೇ ಅನೇಕ ವರ್ಷಗಳಿಂದ ಸರ್ಕಾರದವರು ಮೈನರ್ ಕೆರೆಗಳ ಜೀರ್ಣೋದ್ದಾರದ ಕಡೆಗೆ ತಮ್ಮ ಗಮನವನ್ನು ಹೆಚ್ಚು ಹರಿಸಿಲ್ಲ. ಎಲ್ಲಿಯವರೆಗೆ ಮೈನರ್ ಕೆರೆಗಳ ಜೀರ್ಣೋದ್ದಾರವಾಗುವುದಿಲ್ಲ ಅಲ್ಲಿಯವರೆಗೆ ಗ್ರಾಮಾಂತರ ಪ್ರದೇಶದ ಜನಗಳಿಗೆ, ಅದನ್ನೇ ನಂಬಿಕೊಂಡಿರತಕ್ಕ ಕೃಷಿ ರೈತರಿಗೆ ತುಂಬಾ ಕಷ್ಟವಾಗುತ್ತದೆನ್ನ ತಕ್ಕಂಥಾದ್ದನ್ನು ಸರ್ಕಾರದವರು ಮನಗಾಣಬೇಕು. ಯಾವಾಗಲೂ ದೊಡ್ಡ ಜಲಾಶಯಗಳನ್ನು ನಿರ್ಮಾಣ ಮಾಡತಕ್ಕದ್ದರಲ್ಲಿ ಸರ್ಕಾರದವರಿಗೆ ಎಷ್ಟು ಆಸಕ್ತಿ ಇದೆಯೋ ಅದೇ ರೀತಿ ಹಿಂದಿನಿಂದಲೂ ಬಂದಿರತಕ್ಕ ಮೈನರ್ ಕೆರೆಗಳ ಬಗ್ಗೆ ಅಷ್ಟೇ ಆಸಕ್ತಿ ವಹಿಸಿ ಅವುಗಳನ್ನು ಜೀರ್ಣೋದ್ದಾರ ಮಾಡಿ ರೈತರಿಗೆ ಸಹಾಯ ಮಾಡಬೇಕೆಂದು ನಾನು ಸಲಹೆ ಮಾಡುತ್ತೇನೆ.

ಇನ್ನು ದೊಡ್ಡ ದೊಡ್ಡ ಜಲಾಶಯಗಳಲ್ಲಿ ಜಮೀನುಗಳಿಗೆ ನೀರನ್ನು ಒದಗಿಸುವುದಕ್ಕೋಸ್ಕರ ತೋಟಿಗಳು ಇಲ್ಲ. ಹಿಂದೆ ಇದ್ದವರನ್ನೆಲ್ಲಾ ರದ್ದು ಮಾಡಿ ಅವರಿಗೆ ಇದ್ದಂತಹ ಜಮೀನನ್ನು ಅವರಿಗೇ ಕೊಟ್ಟಿದ್ದಾರೆ. 150 ಎಕರೆಗೆ ಮೇಲ್ಪಟ್ಟು ಇರತಕ್ಕಂಥ ಎಲ್ಲಾ ಕೆರೆಗಳ ಹಿಂಭಾಗಗಳಲ್ಲಿಯೂ ನೀರು ಪೋಲಾಗದಂತೆ ಸುರಕ್ಷಿತವಾಗಿ ಎಲ್ಲಾ ರೈತರಿಗೂ ನೀರನ್ನು ಒದಗಿಸುವಂತಹ ರೀತಿಯಲ್ಲಿ ವ್ಯವಸ್ಥೆ ಮಾಡುವುದಕ್ಕೆ ಒಂದು ಯೋಜನೆಯನ್ನು ತಯಾರು ಮಾಡಬೇಕೆಂಬ ಉದ್ದೇಶ ಸರ್ಕಾರಕ್ಕೆ ಇದೆ. ಆಬರೆ ಅದು ಕಾರ್ಯರೂಪಕ್ಕೆ ಬಂದಿಲ್ಲ. ಅದನ್ನು ಸರ್ಕಾರದವರು ಜಾಗ್ರತೆ ಕಾರ್ಯರೂಪಕ್ಕೆ ತಂದರೆ ಅದರಿಂದ ಎಲ್ಲಾ ರೈತರಿಗೂ ಸೌಲಭ್ಯ ದೊರೆಯುತ್ತದೆ. ಈಗ ಬಡ ಬಗ್ಗರಿಗೆ ಸರಿಯಾಗಿ ಜಮೀನುಗಳಿಗೆ ನೀರು ಸಿಕ್ಕದೆ ಬಡಬಗ್ಗರು ಕೆಳಮಟ್ಟಕ್ಕೆ ಹೋಗತಕ್ಕಂಥ ಪರಿಸ್ಥಿತಿ ಬಂದಿದೆ. ಈಗ ಒಂದು ವಿಷಯವನ್ನು ಹೇಳುತ್ತೇನೆ. ನನ್ನ ತಾಲ್ಲೂಕಾದ ಮಾಗಡಿ ತಾಲ್ಲೂಕಿನಲ್ಲಿ 225 ಮೈನರ್ ಮತ್ತು ಮೇಜರ್ ಕೆರೆಗಳು ಇವೆ. 150ಕ್ಕೆ ಮೇಲ್ಪಟ್ಟು ಮೈನರ್ ಕೆರೆಗಳ ಜೀರ್ಣೋದ್ದಾರವಾಗಿಲ್ಲ. ಮೈನರ್ ಕೆರೆಗಳು ಎಲ್ಲಿಯವರೆಗೆ ಜೀರ್ಣೋದ್ದಾರವಾಗುವುದಿಲ್ಲ ಅಲ್ಲಿಯವರೆಗೆ ಆಯಾ ಪ್ರಾಂತದ ಜನಗಳಿಗೆ

ಅನ್ಯಾಯವಾಗುತ್ತದೆ ಎನ್ನತಕ್ಕಂಥದ್ದನ್ನು ಸರ್ಕಾರದವರು ಮನಗಂಡು ಅದರ ಬಗ್ಗೆ ಸರ್ಕಾರದವರು ಪೂರ್ಣವಾದ ಆಸಕ್ತಿಯನ್ನು ವಹಿಸಬೇಕು ಎಂದು ನಾನು ವಿನಂತಿಸಿಕೊಳ್ಳುತ್ತೇನೆ. ಮೈನರ್ ಇರಿಗೇಷನ್ನಿಗೆ ಸಂಬಂಧಪಟ್ಟ ಹಾಗೆ ಒಂದು ಯೋಜನೆಯನ್ನು ಸರ್ಕಾರದವರು ಮಾಡಿದ್ದು ಸಹಜ. ದೇಶಾದ್ಯಂತ ಅದಕ್ಕಾಗಿ ಇಲಾಖೆಯವರು ಕೆಲವರನ್ನು ನೇಮಕ ಮಾಡಿ ಪ್ರತಿ ತಾಲ್ಲೂಕಿನಲ್ಲಿಯೂ ಯಾವ ಯವ ಕೆಲಸಗಳನ್ನು ತೆಗೆದುಕೊಳ್ಳಬೇಕು ಎನ್ನುವ ಬಗ್ಗೆ ರೆಕಾರ್ಡು ವ್ಯವಸ್ಥೆಯಾಗಿ ನಿಂತಿದೆ. ಆ ಕೆಲಸಗಳನ್ನು ಕೈಗೊಳ್ಳುವುದಕ್ಕೆ ಹಣದ ಅಭಾವದಿಂದಲೊ ಅಥವಾ ಮತ್ತೆ ಯಾವುದೋ ಕರಣದಿಂದಲೋ ಮೈನರ್ ಇರಿಗೇಷನ್ ಯೋಜನೆ ಮುಂದುವರೆದಿಲ್ಲ. ಈಗ ಈ ಮೈನರ್ ಇರಿಗೇಷನ್ ಬಗ್ಗೆ ಸರ್ಕಾರದವರು ಏನು ಒಂದು ಆಫೀಸನ್ನು ಮಾಡಿದ್ದಾರೋ ಅದನ್ನು ರದ್ದು ಮಾಡಿ ಈಗ ಇರತಕ್ಕಂಥ ಇಂಜಿನಿಯರಿಂಗ್ ಇಲಾಖೆಯವರೇ ಈ ಕೆಲಸವನ್ನು ಮಾಡುವ ಹಾಗೆ ಸಹಾಯ ಮಾಡಬೇಕೆಂದು ನಾನಾದರೂ ಸರ್ಕಾರದವರಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಮೈನರ್ ಇರಿಗೇಷನ್ನಿಗೆ ಸಂಬಂದಪಟ್ಟ ಹಾಗೆ ಕೆಲವು ರೆಕಾರ್ಡುಗಳನ್ನು ತಯಾರು ಮಾಡಿರುವುದು ಹಾಗೆಯೇ ನಿಂತಿದೆ. ಇದರ ಬಗ್ಗೆ ಸರ್ಕಾರದವರು ಹಣವನ್ನು ಒದಗಿಸಿ ಆ ಕಾರ್ಯಗಳನ್ನು ನೆರವೇರಿಸಿದ ಪಕ್ಷದಲ್ಲಿ ಅದರಿಂದ ಜನಗಳಿಗೆ ಹೆಚ್ಚಿನ ಲಾಭ ಆಗುತ್ತದೆ. ಆದ್ದರಿಂದ ಇನ್ನು ಮೇಲೆ ಮೈನರ್ ಇರಿಗೇಷನ್ ಕೆಲಸಗಳನ್ನು ಮಾಡುವುದಕ್ಕೋಸ್ಕರ ಓಪನ್ ಮಾಡಿದಂತಹ ಆಫೀಸುಗಳನ್ನು ರದ್ದು ಮಾಡಿ ಈಗ ಹಾಲಿ ಮೊದಲಿನಿಂದಲೂ ಇರತಕ್ಕ ಆ ಇಲಾಖೆಗಳವರಿಗೆ ಆ ಕೆಲಸವನ್ನು ಕೊಡತಕ್ಕದ್ದು ಸಹಜ. ಹಣ ಹೆಚ್ಚಾಗಿ ನೌಕರ ವರ್ಗಕ್ಕೆ ಪೋಲಾಗತಕ್ಕಂಥಾದ್ದಕ್ಕೆ ಅವಕಾಶವನ್ನು ಕೊಡಬಾರದು. ಈಗ ಮೈಸೂರು ಸಂಸ್ಥಾನದಲ್ಲಿ ಪ್ರತಿಯೊಂದು ತಾಲ್ಲೂಕಿನಲ್ಲಿಯೂ ಒಂದೊಂದು ಅಸಿಸ್ಟೆಂಟ್ ಇಂಜಿನಿಯರುಗಳ ಆಫೀಸುಗಳು ಏನಿರುತ್ತವೆಯೋ ಆ ಮೈನರ್ ಇರಿಗೇಷನ್ ಬ್ರಾಂಚು ಇರಬೇಕಾದ ಅವಶ್ಯಕತೆ ನನ್ನ ದೃಷ್ಟಿಯಲ್ಲಿ ಕಂಡು ಬರುವುದಿಲ್ಲ. ಆದ್ದರಿಂದ ಇದನ್ನು ರದ್ದುಗೊಳಿಸಬೇಕಾದ್ದು ಅವಶ್ಯಕ.

ಇನ್ನು ನಮ್ಮ ರಾಜ್ಯದಲ್ಲಿ ವಿದ್ಯುಚ್ಛಕ್ತಿ ಬಹಳ ಹೆಚ್ಚಿನ ಪ್ರಮಾಣದಲ್ಲಿ ಉತ್ಪತ್ತಿಯಾಗುತ್ತದೆ. ಇದಕ್ಕೆ ಸರ್ಕಾರದವರೂ ಕೂಡ ಕೋಟ್ಯಾಂತರ ರೂಪಾಯಿಯನ್ನು ಖರ್ಚು ಮಾಡಿದ್ದಾರೆ. ಶರಾವತಿಯಿಂದ ಬಹು ಚೆನ್ನಾಗಿ ಲಾಭವಾಗಿದೆ. ಹೆಚ್ಚು ವಿದ್ಯುಚ್ಛಕ್ತಿ ಉತ್ಪಾದನೆಯಾದರೂ ಕೂಡ ತಕ್ಷಣ ಇದರಲ್ಲಿ

ರೈತರ ಬಾವಿಗಳಿಗೆ ವಿದ್ಯುಚ್ಛಕ್ತಿಯನ್ನು ಒದಗಿಸುವುದರಲ್ಲಿ ಕೆಲವು ತೊಂದರೆಗಳು ಇವೆ. ಕೆಲವು ಅಗತ್ಯವಾದ ಸಾಮಾನುಗಳು ತಕ್ಷಣ ಒದಗದೇ, ಕಂಬಗಳನ್ನು ಹಾಕುವುದು ನಿಧಾನವಾಗಿ ರೈತರು ತಮ್ಮ ಕೆಲಸಗಳನ್ನು ಮಾಡಿಕೊಳ್ಳುವುದಕ್ಕೆ ಕಷ್ಟವಾಗಿದೆ. ಈ ಸಂದರ್ಭದಲ್ಲಿ ನಾನು ಒಂದು ವಿಷಯವನ್ನು ಹೇಳಬೇಕಾಗಿದೆ. ಯಾವಾಗಲೂ ಮೊದಲು ನಮ್ಮ ಸಂಸಾರವನ್ನು ಭದ್ರಮಾಡಿಕೊಂಡು ಇತರ ವಿಷಯಗಳಿಗೆ ಗಮನ ಕೊಡಬೇಕಾದ್ದು ಸಹಜ ಇದೆ. ಆದ್ದರಿಂದ ವಿದ್ಯುಚ್ಛಕ್ತಿ ಇಲಾಖೆಯವರು ಮೊದಲು ನಮ್ಮ ದೇಶದ ಜನಗಳಿಗೆ, ಗ್ರಾಮಾಂತರ ಪ್ರದೇಶದ ಜನಗಳಿಗೆ, ಬಾವಿಗಳಿಗೆ ವಿದ್ಯುಚ್ಛಕ್ತಿಯನ್ನು ಒದಗಿಸುವುದಕ್ಕೆ ಗಮನ ಕೊಡಬೇಕೆಂದು ನಾನಾದರೂ ಸಲಹೆ ಮಾಡುತ್ತೇನೆ.

ಇನ್ನು ರಸ್ತೆ ಕಾಮಗಾರಿಗಳ ವಿಷಯದಲ್ಲಿ ಒಂದು ಸಲಹೆಯನ್ನು ಕೊಡಬೇಕಾಗಿದೆ. ಮೈಸೂರು ಸಂಸ್ಥಾನದ ಪಿ.ಡಬ್ಲ್ಯು ಇಲಾಖೆಯವರು ದೊಡ್ಡ ಮನಸ್ಸು ಮಾಡಿ ತಾಲ್ಲೂಕು ಬೋರ್ಡಿನವರಿಗೆ ಇದ್ದಂತಹ ರಸ್ತೆಗಳನ್ನು ತಮ್ಮ ಇಲಾಖೆಗೆ ಸೇರಿಸಿ ಕೊಂಡಿದ್ದು ಬಹಳ ಸಂತೋಷ, ಸಾರಿಗೆ ವಿಚಾರದಲ್ಲಿ ಸರ್ಕಾರದವರು ಹೆಚ್ಚು ಆಸಕ್ತಿಯನ್ನು ವಹಿಸಿ ಕೆಲಸ ಮಾಡಿದ್ದಾರೆ. ಆದರೆ ರಸ್ತೆಗಳ ರಿಪೇರಿ ಮತ್ತು ಹೊಸ ರಸ್ತೆಗಳ ನಿರ್ಮಾಣದ ಬಗ್ಗೆ ಬಡ್ಜೆಟ್ಟಿನಲ್ಲಿ ಎಷ್ಟು ಹಣವನ್ನು ಒದಗಿಸಬೇಕಾಗಿತ್ತೋ ಅಷ್ಟು ಹಣವನ್ನು ಒದಗಿಸಿಲ್ಲ. ಈ ಇಲಾಖೆಯವರು ರಸ್ತೆಗಳನ್ನು ಚೆನ್ನಾಗಿ ಉತ್ತಮವಾದ ರಸ್ತೆಗಳನ್ನಾಗಿ ಮಾಡಿ ಜನಗಳಿಗೆ ಸಂಚಾರ ಮಾಡುವುದಕ್ಕೆ ಅನುಕೂಲ ಮಾಡಿಕೊಡಬೇಕು. ರೋಡ್ ಟ್ರಾನ್ಸ್‌ಪೋರ್ಟ್ ಇಲಾಖೆಯವರು ತಮ್ಮ ಸಾವಿರಾರು ಬಸ್ಸುಗಳನ್ನು ಎಲ್ಲಾ ಕಡೆಗೂ ಬಿಟ್ಟಿದ್ದಾರೆ. ಆದರೆ ಕೆಲವು ಕಡೆ ರಸ್ತೆಗಳು ಚೆನ್ನಾಗಿಲ್ಲದೆ ಇರುವುದರಿಂದ ಟೂರಿಸ್ಟ್‌ಗಳಿಗೆ ಮತ್ತು ಪ್ರಯಾಣಿಕರಿಗೆ ಅಪಾಯ ಉಂಟಾಗಿ ಹೆಚ್ಚಿನ ನಷ್ಟ ಸಂಭವಿಸುತ್ತಿರುವ ಸಂದರ್ಭ ಸರ್ಕಾರಕ್ಕೂ ಗೊತ್ತಿದೆ ರಸ್ತೆಗಳನ್ನು ಉತ್ತಮಪಡಿಸಿ ಅದರಿಂದ ಹೆಚ್ಚಿನ ಜನರಿಗೆ ಅನುಕೂಲವಾಗುವಂತೆ ಮಾಡುವುದು ಒಳ್ಳೆಯದು. ಅನೇಕ ಹಳ್ಳಿಗಳಲ್ಲಿ ಸೇತುವೆಗಳನ್ನು ಕಟ್ಟುವ ಬಗ್ಗೆ ಎಸ್ಟಿಮೇಟ್ ಮತ್ತು ಪ್ಲಾನ್‌ಗಳು ತಯಾರಾಗಿದ್ದರೂ ಸಹ ಇನ್ನೂ ಕೆಲಸಗಳು ಕಾರ್ಯಗತವಾಗಿಲ್ಲ. ಕೆಲವು ಸಲ ಟೆಂಡರ್ ಕರೆಯುವ ಸ್ಥಿತಿಗೆ ಬಂದು ಏನೋ ಕಾರಣಗಳಿಂದ ಕೆಲಸ ನಿಂತು

ಹೋಗಿದೆ. ಇಂತಹ ಕೆಲಸಗಳನ್ನು ಬಿಟ್ಟು ಬೇರೆ ಕಡೆ ಹೊಸ ಕೆಲಸಗಳನ್ನು ತೆಗೆದು ಕೊಂಡಿರತಕ್ಕಂಥ ಸಂದರ್ಭಗಳು ಎಷ್ಟೋ ಇವೆ. ನಾನು ಸರ್ಕಾರದವರಲ್ಲಿ ವಿನಂತಿ ಮಾಡಿಕೊಳ್ಳುವುದು ಇಷ್ಟೆ, ಸೂಪರಿಂಟೆಂಡಿಂಗ್ ಇಂಜಿನಿಯರ್ ಹತ್ತಿರ, ಎಕ್ಸಿಕ್ಯೂಟಿವ್ ಇಂಜಿನಿಯರ್ ಹತ್ತಿರ ಮತ್ತು ಅಸಿಸ್ಟೆಂಟ್ ಇಂಜಿನಿಯರ್ ಹತ್ತಿರ ಪ್ಲಾನ್ ಮತ್ತು ಎಸ್ಟಿಮೇಟ್ ತಯಾರಾಗಿ ಕೆಲಸವಾಗದೇ ನಿಂತಿರುವ ಎಲ್ಲಾ ರೆಕಾರ್ಡ್‌ಗಳನ್ನೂ ತರಿಸಿಕೊಂಡು ಬಹಳ ಕಾಲದಿಂದ ನಿಂತುಹೋಗಿರುವ ಕೆಲಸಗಳನ್ನು ಜಾಗ್ರತೆ ಮಾಡಿಸಿ ಅದರಿಂದ ಜನರಿಗೆ ಸೌಲಭ್ಯ ಸಿಗುವಂತೆ ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನು ನಮ್ಮ ಮಾನ್ಯ ಸರ್ಕಾರದವರು ಕಳೆದ 20 ವರ್ಷಗಳಿಂದೀಚೆಗೆ ಮೈಸೂರು ಸಂಸ್ಥಾನದಾದ್ಯಂತ ಹೆಚ್ಚಿನ ರಸ್ತೆಗಳನ್ನು ಮಾಡಿಸಿ ಜನರಿಗೆ ಸಂಚಾರ ಸೌಲಭ್ಯವನ್ನು ಒದಗಿಸಿಕೊಟ್ಟಿದ್ದಾರೆ, ಅದಕ್ಕಾಗಿ ಸರ್ಕಾರದವರನ್ನು ನಾನು ವಂದಿಸುತ್ತೇನೆ. ಇದೇ ರೀತಿ ಇನ್ನೂ ಉಳಿದಿರುವ ರಸ್ತೆಗಳನ್ನು ಸಹ ಜಾಗ್ರತೆ ಮಾಡಿಕೊಡಬೇಕೆಂದು ನಾನು ಸರ್ಕಾರಕ್ಕೆ ವಿನಂತಿಸುತ್ತೇನೆ.

ಇನ್ನು ವಿದ್ಯುಚ್ಛಕ್ತಿ ದರವನ್ನು ಈಗಿರುವುದಕ್ಕಿಂತ ಕಡಿಮೆ ಮಾಡಿ ರೈತರಿಗೆ ಅನುಕೂಲ ಮಾಡಿಕೊಡಬೇಕು. ರೈತರು ಕಷ್ಟಪಟ್ಟು ಬೆಳೆಯತಕ್ಕಂಥ ಆಹಾರ ಧಾನ್ಯವನ್ನು ಕೂಲಿಗಾರರಿಗೆ ಕೈಗಾರಿಕೆಗಳಲ್ಲಿ ಕೆಲಸ ಮಾಡತಕ್ಕಂಥವರಿಗೆ ಒದಗಿಸಬೇಕಾಗಿರುವುದರಿಂದ ಸರ್ಕಾರದವರು ರೈತರ ಬಗ್ಗೆ ಕನಿಕರ ತೋರಿಸಿ ಈಗಿರತಕ್ಕಂಥ ದರವನ್ನು ಕಡಿಮೆ ಮಾಡಿ ತನ್ಮೂಲಕ ರೈತರು ಹೆಚ್ಚು ಹೆಚ್ಚು ಆಹಾರ ಧಾನ್ಯವನ್ನು ಬೆಳೆಯುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು ಮೈನರ್ ಇರಿಗೇಷನ್ ವಿಚಾರದಲ್ಲಿ ನಾನು ಈಗಾಗಲೇ ಹೇಳಿದ್ದೇನೆ. ನಮ್ಮ ಭಾಗದಲ್ಲಿ ತಾಲ್ಲೂಕು ಬೋರ್ಡಿನವರಿಗೆ ಕೊಟ್ಟಿರತಕ್ಕಂಥ 16 ಸಾವಿರ ಎಕರೆ ಜಮೀನನ್ನು ಸರ್ಕಾರದವರು ವಾಪಸ್ ಪಡೆದುಕೊಂಡು ವ್ಯವಸಾಯ ಮಾಡಿಸುವುದು ಒಳ್ಳೆಯದೆಂದು ಹೇಳುತ್ತೇನೆ. ಏಕೆಂದರೆ, ತಾಲ್ಲೂಕ್ ಬೋರ್ಡಿನವರು ವ್ಯವಸಾಯ ಮಾಡಿಸಲು ಬೇಕಾದಂಥ ಸವಲತ್ತುಗಳನ್ನು ಸರ್ಕಾರದವರು ಒದಗಿಸಿಲ್ಲ. ಈಗ ತಾಲ್ಲೂಕ್ ಬೋರ್ಡಿನವರಿಗೆ ಮಾಡಿಸಲು ನಮ್ಮಲ್ಲಿ ಹಣವಿಲ್ಲ, ಸರ್ಕಾರದವರು ಸಹ ಹಣ ಒದಗಿಸುತ್ತಿಲ್ಲವೆಂದು ಹೇಳುತ್ತಾರೆ, ತಾಲ್ಲೂಕ್ ಬೋರ್ಡಿನ

ವಶದಲ್ಲಿರುವುದರಿಂದ ನಾವೇನು ಮಾಡುವುದಕ್ಕಾಗುವುದಿಲ್ಲವೆಂದು ಸರ್ಕಾರ ಹೇಳುತ್ತಾರೆ. ಈ ಕಾರಣಗಳಿಂದ ಆ ಭಾಗದ ವ್ಯವಸಾಯದ ಪ್ರಗತಿ ಕುಂಠಿತವಾಗಿದೆ. ಸರ್ಕಾರದವರ ಹತ್ತಿರ ಸಿಬ್ಬಂಧಿ ಹೆಚ್ಚು ಇದ್ದು, ಉನ್ನತ ಅಧಿಕಾರಿಗಳಿರುವುದರಿಂದ ಆ ಜಮೀನನ್ನು ಸರ್ಕಾರದವರೇ ವಹಿಸಿಕೊಂಡು ನಡೆಸುವುದು ಅತ್ಯಾವಶ್ಯಕವೆಂದು ಹೇಳುತ್ತೇನೆ.

ಇನ್ನು ನಮ್ಮ ಕಡೆ ಸಣ್ಣ ಸಣ್ಣ ಕೆರೆಗಳಲ್ಲಿ ಹೂಳು ತುಂಬಿ ಹೆಚ್ಚು ನೀರು ನಿಲುವುದಕ್ಕೆ ಅವಕಾಶವಾಗಿಲ್ಲ. ಆದ್ದರಿಂದ ಸರ್ಕಾರದವರು ಬುಲ್‌ಡೋಜರ್ ಮೂಲಕ ಮಣ್ಣನ್ನು ತೆಗೆಸಿ ಹೆಚ್ಚು ನೀರು ನಿಲ್ಲುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಇನ್ನು ವಿದ್ಯುಚ್ಛಕ್ತಿ ಠೇವಣಿ ಬಗ್ಗೆ ಹೇಳಬೇಕಾದರೆ, ಮಾನ್ಯ ಮಂತ್ರಿಗಳು ಒಂದು ಕಡೆ ಮಾತನಾಡುತ್ತಾ ಯಾರಿಗೆ ವಿದ್ಯುಚ್ಛಕ್ತಿಯ ಹೆಚ್ಚಿನ ಸೌಲಭ್ಯ ಬೇಕೋ ಅಂಥವರು ಒಂದು ಸಾವಿರ ರೂಪಾಯಿಗಳನ್ನು ಠೇವಣಿ ಮಾಡಿದರೆ ವಿದ್ಯುಚ್ಛಕ್ತಿ ಒದಗಿಸುವುದಕ್ಕೆ ಅನುಕೂಲವಾಗುತ್ತದೆಂದು, ಈಗ ಸರ್ಕಾರಕ್ಕೆ ಹೆಚ್ಚು ಹಣ ಬೇಕಾಗಿದೆಯೆಂದು ಹೇಳಿದ್ದಾರೆ. ಆದರೆ ಇವತ್ತಿನ ದಿವಸ ರೈತರು ಠೇವಣಿ ಕೊಟ್ಟು ವಿದ್ಯುಚ್ಛಕ್ತಿ ಪಡೆದು ತನ್ಮೂಲಕ ವ್ಯವಸಾಯವನ್ನು ವೃದ್ಧ ಮಾಡಿಕೊಳ್ಳುವುದಕ್ಕೆ ತಯಾರಾಗಿಲ್ಲ. ರೈತರಲ್ಲಿ ಅಷ್ಟೊಂದು ಹಣವಿಲ್ಲದಿರುವುದರಿಂದ ಸರ್ಕಾರದವರು ರೈತರ ಬಗ್ಗೆ ಕನಿಕರ ತೋರಿಸಿ ಠೇವಣಿಯನ್ನು ರದ್ದು ಮಾಡಬೇಕು. ಈಗಾಗಲೆ ಮಾನ್ಯ ಮುಖ್ಯಮಂತ್ರಿಗಳಾದ ನಿಜಲಿಂಗಪ್ಪನವರು ಮೂರು ರೂಪಾಯಿ ಬಡ್ಡಿಯಂತೆ 10 ಕೋಟಿ ರೂಪಾಯಿಗಳನ್ನು ಡೆವಲಪ್‌ಮೆಂಟ್ ಬ್ಯಾಂಕ್ ಮೂಲಕ ಕೊಟ್ಟು ಉಪಕಾರ ಮಾಡದ್ದಾರೆ, ಇದು ಸ್ತುತ್ಯಾರ್ಹವಾದುದು. ನಾನು ಸಹ ಬ್ಯಾಂಕ್‌ನ ಚೇರ್‌ಮನ್ ಆಗಿದ್ದೇನೆ. ರೈತರ ಕಷ್ಟ ಸುಖ ಗೊತ್ತಿದೆ. ನಮ್ಮ ಮಾಗಡಿ ತಾಲ್ಲೂಕಿಗೆ ಹತ್ತು ಲಕ್ಷ ರೂಪಾಯಿಗಳನ್ನು ಬಾವಿ ತೋಡಿಸಲು ಸರ್ಕಾರದವರು ಕೊಟ್ಟು. ವ್ಯವಸಾಯದಲ್ಲಿ ರೈತರು ಒಂದು ಉತ್ತಮ ಸ್ಥಿತಿಗೆ ಬರುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ. ಆದಕಾರಣ ಬಾವಿಗಳಿಗೆ ಸರ್ಕಾರದವರೇ ವಿದ್ಯುಚ್ಛಕ್ತಿಯನ್ನು ಒದಗಿಸಬೇಕಾದುದು ಅಗತ್ಯವೆಂದು ಹೇಳುತ್ತೇನೆ.

ಇನ್ನು ಮೈಸೂರು ಸಂಸ್ಥಾನದಲ್ಲಿ ಎಲೆಕ್ಟ್ರಿಕಲ್ ಮತ್ತು ಸಿವಿಲ್ ಸೂಪರ್‌ವೈಸರ್‌ಗಳು ಸುಮಾರು 4 ಸಾವಿರ ಜನ 1963 ರಿಂದ ಇಂದಿನವರೆಗೆ

ಕೆಲಸವಿಲ್ಲದೆ, ಇವರಿಗೆ ಸರ್ಕಾರದಿಂದ ಕೆಲಸ ಸಿಗದೆ, ಅವರ ತಂದೆ ತಾಯಿಗಳಿಗೆ ತೊಂದರೆಯಾಗುತ್ತಿದೆ. ಇದು ಸರ್ಕಾರಕ್ಕೂ ಸಹ ಗೊತ್ತಿದೆ. ಆದ್ದರಿಂದ ಇವರಿಗೆ ಕೊನೆಯಪಕ್ಷ ಮೇಸ್ತ್ರಿ ಕೆಲಸವನ್ನಾದರೂ ಒದಗಿಸಿ ಆ ಮೂಲಕ ಅವರಿಗೆ ಒಂದು ಆಶಾಮನೋಭಾವ ಉಂಟಾಗುವಂತೆ ಮಾಡಿ ಅವರ ಕುಟುಂಬಗಳು ಮುಂದುವರಿಯುವುದಕ್ಕೆ ಅವಕಾಶ ಕಲ್ಪಿಸಿಕೊಡಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ಇದೇ ರೀತಿ ಜೂನಿಯರ್ ಇಂಜಿನಿಯರ್‌ಗಳು ತಮ್ಮ ಸಂಬಳ ಹೆಚ್ಚು ಮಾಡಬೇಕೆಂದು ಮೊನ್ನೆ ಹಠಾತ್ತಾಗಿ ರಾಜೀನಾಮೆ ಕೊಟ್ಟು ತಮ್ಮ ನಿರ್ಧಾರವನ್ನು ಮುಖ್ಯಮಂತ್ರಿಗಳಿಗೆ ತಿಳಿಸಿದಾಗ, ಮುಖ್ಯ ಮಂತ್ರಿಗಳು ಆ ಬಗ್ಗೆ ಒಂದು ಭರವಸೆ ಕೊಟ್ಟ ಮೇಲೆ ತಮ್ಮ ಹುದ್ದೆಗಳಲ್ಲಿ ಮುಂದುವರೆದಿದ್ದಾರೆ. ಆದರೆ ಇದುವರೆಗೆ ಆ ಭರವಸೆಯನ್ನು ಸರ್ಕಾರದವರು ಈಡೇರಿಸಿಲ್ಲ. ಸರ್ಕಾರದವರು ಕೊಟ್ಟ ಭರವಸೆಯನ್ನು ಜಾಗ್ರತೆ ಮಾನ್ಯ ಮಾಡಿ ತಾತ್ಕಾಲಿಕವಾಗಿಯಾದರೂ ಅವರ ಮನಸ್ಸಿಗೆ ತೃಪ್ತಿ ಮಾಡಿ, ಆ ಮೂಲಕ ಅವರಿಂದ ರೈತರಿಗೆ ಅನುಕೂಲವಾಗುವಂತೆ ಏರ್ಪಾಡು ಮಾಡಬೇಕೆಂದು ಈ ಸಂದರ್ಭದಲ್ಲಿ ಕೇಳಿಕೊಳ್ಳುತ್ತೇನೆ. ಮುಖ್ಯ ಮಂತ್ರಿಗಳು ಮತ್ತು ಸಂಬಂಧಪಟ್ಟ ಮಂತ್ರಿಗಳು ಕ್ಯಾಬಿನೆಟ್‌ನಲ್ಲಿ ಕುಳಿತು ಈ ಬಗ್ಗೆ ಚರ್ಚೆ ಮಾಡಿ, ಅವರು ಕೇಳಿರತಕ್ಕಂಥ ಬೇಡಿಕೆಗಳನ್ನು ಈಡೇರಿಸುವುದು ಸರ್ಕಾರದವರ ಕರ್ತವ್ಯವೆಂದು ಹೇಳುತ್ತೇನೆ. ಹಿಂದೆ ನಾನೂ ಕೂಡ ಬಹುಕಾಲದವರೆಗೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯನಾಗಿದ್ದೆ. ಆಗಿನ ಕಾಲಕ್ಕೆ ಮೈಸೂರು ಸಂಸ್ಥಾನದ ಒಟ್ಟು ಬಡ್ಜೆಟ್ 4 ಕೋಟಿ ರೂಪಾಯಿಗಳಿತ್ತು. ಈಗ ವಿದ್ಯುಚ್ಛಕ್ತಿ ನೀರಾವರಿ ಯೋಜನೆ ಮತ್ತು ರಸ್ತೆಗಳು ಇವುಗಳಿಗಾಗಿಯೇ 98 ಕೋಟಿ ರೂಪಾಯಿಗಳ ಡಿಮ್ಯಾಂಡ್‌ನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಇಂತಹ ಒಂದು ಸೌಲಭ್ಯವನ್ನು ಪಡೆದಿರತಕ್ಕಂಥ ನಮ್ಮ ಮೈಸೂರು ಸಂಸ್ಥಾನದ ಜನರೇ ಪುಣ್ಯವಂತರು. ಲೋಕೋಪಯೋಗಿ ಇಲಾಖೆಯ ಮಂತ್ರಿಗಳು ಉನ್ನತ ಮಟ್ಟದಲ್ಲಿ ಕೆಲಸ ಮಾಡುತ್ತಿರುವುದೇ ಇದಕ್ಕೆ ಕಾರಣವೆಂದು ಹೇಳಬಹುದು. ಈ ಇಲಾಖೆಗೆ ಸಂಬಂಧಪಟ್ಟಂತೆ ಇರುವ ಅನುಕೂಲಗಳನ್ನು ಯಾವ ಭಾಗದ ಜನರಿಗೆ ಒದಗಿಸಿಲ್ಲ, ಅಂತಹ ಭಾಗಗಳಲ್ಲಿ ಒದಗಿಸಿ ಕೊಡಬೇಕಾದುದು ಸರ್ಕಾರದ ಕರ್ತವ್ಯ. ಇನ್ನು ಮೈನರ್ ಇರಿಗೇಷನ್‌ಗಳನ್ನು ನಮ್ಮ ತಾಲ್ಲೂಕ್‌ನಲ್ಲಿ ಇದುವರೆಗೆ ಬಾಕಿಯಿರುವುದನ್ನು ಸೇರಿಸಿಕೊಂಡು ಹೆಚ್ಚು ಹೆಚ್ಚು ಮಾಡಿಸಿಕೊಡಬೇಕೆಂದು ಕೇಳಿ ಕೊಳ್ಳುತ್ತೇನೆ. ಒಂದು ಕಡೆ ಕಣ್ವಾ ನದಿ ಮತ್ತೊಂದು ಕಡೆ ತಿಪ್ಪಗೊಂಡನಹಳ್ಳಿ ಜಲಾಶಯ, ಇವೆರಡರ

ಮಧ್ಯೆ ನಮ್ಮ ಮಾಗಡಿ ತಾಲ್ಲೂಕ್ ಇದೆ. ನಮ್ಮ ತಾಲ್ಲೂಕ್‌ನಲ್ಲಿ ಸುಮಾರು 2 ಲಕ್ಷ ಜನಸಂಖ್ಯೆಯಿದೆ. ಮೊದಲು ಸುಮಾರು 7 ಸಾವಿರ ಎಕರೆ ಜಮೀನು ಇದ್ದರೆ, ಈಗ ಮತ್ತೆ 6 ಸಾವಿರ ಎಕರೆ ವ್ಯವಸಾಯದ ಜಮೀನು ಜಾಸ್ತಿಯಾಗಿದೆ. ಅಂದರೆ ನಮ್ಮ ಭಾಗದಲ್ಲಿ 13 ಸಾವಿರ ಎಕರೆ ತರೀ ಜಮೀನು ಇದ್ದರೆ ಕೇವಲ ಒಂದು ಸಾವಿರ ಎಕರೆ ಮಾತ್ರ ಖುಷ್ಕಿ ಜಮೀನು ಇದೆ. ಎಲ್ಲೆಲ್ಲಿ ನೀರಿನ ಸೌಲಭ್ಯವನ್ನು ಒದಗಿಸಿಕೊಡುವುದಕ್ಕೆ ಸಾಧ್ಯವಿದೆಯೋ ಅಲ್ಲೆಲ್ಲಾ ಒದಗಿಸಿಕೊಟ್ಟರೆ ತನ್ಮೂಲಕ ರೈತರು ಹೆಚ್ಚು ಆಹಾರವನ್ನು ಬೆಳೆದು ಮಿಲ್‌ಗಳಲ್ಲಿ, ಕೈಗಾರಿಕೆಗಳಲ್ಲಿ ಕೆಲಸ ಮಾಡತಕ್ಕಂಥ ಜನರಿಗೆ ಒದಗಿಸಿಕೊಡುವುದಕ್ಕೆ ಅನುಕೂಲವಾಗುತ್ತದೆ.

ಕೊನೆಯದಾಗಿ ಸರ್ಕಾರದವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುವುದೇನೆಂದರೆ, ಪ್ರತಿಯೊಂದು ಕೆಲಸವನ್ನು ತೆಗೆದುಕೊಳ್ಳುವಾಗ ಅದರಿಂದ ನಮ್ಮ ಭಾಗಕ್ಕೂ ಲಾಭವಾಗುವಂತೆ ಕೆಲಸಗಳನ್ನು ಮಾಡಿಸಿ ಆ ಒಂದು ದಿಶೆಯಲ್ಲಿ ಕಾರ್ಯೋನ್ಮುಖರಾಗಬೇಕೆಂದು ಕೇಳಿಕೊಂಡು, ನನಗೆ ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ. ನನ್ನ ಮಾತನ್ನು ಮುಗಿಸುತ್ತೇನೆ.

## ತಾಲ್ಲೂಕು ಬೋರ್ಡ್ ಗ್ರಾಮಪಂಚಾಯ್ತಿ

**15ನೇ ಏಪ್ರಿಲ್ 1965**

ಸನ್ಮಾನ್ಯ ಸಭಾಪತಿಗಳೇ: ಈ ದಿವಸ ನಮ್ಮ ಮುಂದೆ ಇಟ್ಟಿರತಕ್ಕ ಡಿಮ್ಯಾಂಡುಗಳನ್ನು ನಾನು ಸ್ವಾಗತಿಸುತ್ತಾ ಸರ್ಕಾರಕ್ಕೆ ಅಧ್ಯಕ್ಷರ ಮೂಲಕ ಕೆಲವು ಸಲಹೆಗಳನ್ನು ಮಾಡಬೇಕೆಂದು ನಾನು ತಮ್ಮ ಮುಂದೆ ನಿಂತಿದ್ದೇನೆ. ನಾವು ಈ ದಿವಸ ಇಲ್ಲಿ ಕೊಡತಕ್ಕ ಸಲಹೆಗಳನ್ನು ಸರ್ಕಾರದವರು ಕಾರ್ಯರೂಪಕ್ಕೆ ತರದಿದ್ದರೆ ಆ ಸಲಹೆಗಳನ್ನು ಕೊಟ್ಟವರಿಗೆ ಬಹಳ ನೋವಾಗುತ್ತದೆ. ವ್ಯಸನವಾಗುತ್ತದೆ. ಈಗಾಗಲೇ ಸರ್ಕಾರದವರು ಆ ತಾಲ್ಲೋಕ್ ಬೋರ್ಡ್‌ಗಳಿಗೆ ಎರಡಾವರ್ತಿ ಪ್ರಮೋಷನ್ ಕೊಟ್ಟಾಯಿತು. ಇನ್ನು ಹಾಗೆ ಪ್ರಮೋಷನ್ ಕೊಡುವುದಕ್ಕೆ ಕಾಲಾವಕಾಶವಿಲ್ಲ. ನಾವು ಇದೇ ಅಧಿವೇಶನದಲ್ಲಿ ಕೊಂಡಜ್ಜಿ ಬಸಪ್ಪನವರ. ರಿಪೋರ್ಟ್ ಚರ್ಚೆಗೆ ಬರುತ್ತದೆಂದು ನಿರೀಕ್ಷಣೆ ಮಾಡಿಕೊಂಡಿದ್ದೆವು. ಆದರೆ ಆ ರಿಪೋರ್ಟ್ ನಮ್ಮ ಮುಂದೆ ಚರ್ಚೆಗೆ ಬರುತ್ತದೆಯೋ ಇಲ್ಲವೋ ಎನ್ನತಕ್ಕ ಒಂದು ಸಂದೇಹ ಉಂಟಾಗಿದೆ. ಆದುದರಿಂದ ಸರ್ಕಾರದವರು ಈ ವಿಚಾರದಲ್ಲಿ ಹೆಚ್ಚಿನ ಆಸಕ್ತಿ ವಹಿಸಿ ಇದನ್ನು ಕಾರ್ಯರೂಪಕ್ಕೆ ತರಬೇಕೆಂದು ವಿನಂತಿ

1753-9

ಮಾಡಿಕೊಳ್ಳುತ್ತೇನೆ. ಈ ತಾಲ್ಲೂಕ್ ಬೋರ್ಡ್‌ಗಳ ರಚನೆಯ ಬಗ್ಗೆ ಈಗಾಗಲೆ ಸಾಕಷ್ಟು ಕಾಲ ವಿಳಂಬವಾಗಿದೆ. ನಾವು ಸಮುದ್ರದಲ್ಲಿರತಕ್ಕ ನೀರಿನಷ್ಟು ಹಣವನ್ನು ಖರ್ಚುಮಾಡಿದಾಗ್ಯೂ ಪ್ರಯೋಜನವೇನೂ ಕಂಡು ಬರುವುದಿಲ್ಲ. ಆದರೆ ಅಲ್ಲಿಯ ಕೆಲಸಕಾರ್ಯಗಳನ್ನು ಮಾಡುವಾಗ ಕೆಲವು ಅನಿವಾರ್ಯಗಳು ಉಂಟಾಗಿರಬಹುದು. ಆದರೆ ಮಾನ್ಯ ಮಂತ್ರಿಗಳು ಉತ್ತರ ಕೊಡತಕ್ಕ ಕಾಲದಲ್ಲಿ ಈ ಚುನಾವಣೆಗಳು ಏಕೆ ವಿಳಂಬವಾಗಿದೆ ಎನ್ನುವುದರ ಬಗ್ಗೆ ವಿವರಣೆ ಕೊಡುತ್ತಾರೆಂದು ನಂಬಿದ್ದೇನೆ. ಇನ್ನು ಗ್ರಾಮ ಪಂಚಾಯಿತಿಗಳು ಕಾರ್ಯ ರೂಪಕ್ಕೆ ಬಂದು 6–7 ವರ್ಷಗಳಾಯಿತು. ಇವುಗಳಿಗೆ ಸೆಕ್ರೆಟರಿಗಳನ್ನು ನೇಮಕ ಮಾಡುವ ಕೆಲಸ ಇನ್ನೂ ಆಗಿಲ್ಲ, ಹಿಂದೆ ಶ್ರೀ ಎಂ.ವಿ. ಕೃಷ್ಣಪ್ಪನವರು ಇದ್ದಾಗಲೇ ಅದನ್ನು ಅನೌನ್ಸ್ ಮಾಡುತ್ತೇವೆಂದು ಹೇಳಿದ್ದರು. ಆದರೆ ಅದಿನ್ನೂ ಆಗಲಿಲ್ಲ. ಇದರಿಂದ ಈ ದಿವಸ ಸರ್ಕಾರಕ್ಕೆ ಕಂದಾಯದ ರೂಪದಲ್ಲಿ ಬರಬೇಕಾದ ಕೋಟ್ಯಾಂತರ ರೂಪಾಯಿಗಳು ಬಾಕಿ ಬಿದ್ದಿವೆ. ಹಣ ವಸೂಲಾಗಿಲ್ಲ. ಸರ್ಕಾರದವರು ಹೀಗೆ ಅಲಕ್ಷ್ಯ ಮಾಡುತ್ತಾ ಹೋದರೆ ಮುಂದೆ ಬಹಳ ಕಷ್ಟವಾಗುತ್ತೆ. ಆ ಹಣ ಈ ದಿವಸ ಸರ್ಕಾರದವರಲ್ಲಿ ಇದ್ದಿದ್ದರೆ ಅದನ್ನು ಸಹಕಾರ ಸಂಸ್ಥೆಗಳಿಗೆ ಸಾಲ ಕೊಡಬಹುದಾಗಿತ್ತು. ಇಲ್ಲವೇ ರಾಜ್ಯದಲ್ಲಿ ನೀರಾವರಿ ಇತ್ಯಾದಿ ಅಭಿವೃದ್ಧಿಯ ಕಾಂಗಾರಿಗಳನ್ನು ನಡೆಸಬಹುದಾಗಿತ್ತು. ಸರ್ಕಾರ ಈ ವಿಚಾರಕ್ಕೆ ಗಮನ ಕೊಡದಿರುವುದು ಬಹಳ ಶೋಚನೀಯ. ನನ್ನ ಅಭಿಪ್ರಾಯದಲ್ಲಿ ಈ ಒಂದು ತೊಂದರೆಯುಂಟಾಗುವುದಕ್ಕೆ ಕಾರಣ ಏನಿರಬಹುದು ಎಂಬುದನ್ನು ನೋಡಿದ್ದರಲ್ಲಿ ಈ ದಿವಸ ಪಂಚಾಯಿತಿ ರಾಜ್ಯ ಮತ್ತು ಸಹಕಾರ ಈ ಎರಡು ಶಾಖೆಗಳಿಗೂ ಒಬ್ಬರೇ ಸಚಿವರು ಇರುವುದರಿಂದ ಹೀಗಾಗಿರಬಹದು ಅನಿಸುತ್ತದೆ. ಆದ್ದರಿಂದ ಸರ್ಕಾರದವರು ಈ ವಿಚಾರವನ್ನು ತೀವ್ರವಾಗಿ ಆಲೋಚನೆ ಮಾಡಿ ಇವುಗಳಿಗೆ ಪ್ರತ್ಯೇಕ ಮಂತ್ರಿಗಳು ಇರುವಂತೆ ಒಂದು ವ್ಯವಸ್ಥೆ ಮಾಡಬೇಕೆಂದು ಸಲಹೆ ಮಾಡುತ್ತೇನೆ. ದೇಶದಲ್ಲಿ ಈ ತಾಲ್ಲೂಕ್ ಬೋರ್ಡ್‌ಗಳು ಮತ್ತು ಪಂಚಾಯಿತಿಗಳು ರಚನೆಯಾದ ಮೇಲೆ ಇವುಗಳಿಗೆ ಸರ್ಕಾರದವರು ಕೊಡುತ್ತಿರುವ ಹಣ ಸಾಲದು. ಇದರಿಂದ ಅನೇಕ ಕೆಲಸಗಳು ಹಾಗೆ ಉಳಿದಿದೆ. ಅಲ್ಲಿಗೆ ಹೆಚ್ಚಿನ ಹಣವನ್ನು ಕೊಟ್ಟರೆ ಗ್ರಾಮಾಂತರ ಪ್ರದೇಶದಲ್ಲಿ ಹೆಚ್ಚಿನ ಕೆಲಸಗಳಿಗಾಗಿ ಜನಕ್ಕೆ ಹೆಚ್ಚಿನ ಅನುಕೂಲತೆಗಳೊದಗುವುದೇ ಅಲ್ಲದೆ ಅದರಿಂದ ಸರ್ಕಾರಕ್ಕೂ ಲಾಭವಾಗುವುದು. ದೇಶವು ಅಭ್ಯುದಯವಾಗುವುದು ಆದುದರಿಂದ ಆ ಸಂಸ್ಥೆಗಳಿಗೆ ಹೆಚ್ಚಿನ ಗ್ರಾಂಟನ್ನು ಒದಗಿಸಬೇಕೆಂದು ಕೇಳಿಕೊಳ್ಳುತ್ತೇನೆ. ಇದಕ್ಕೆ ಒಂದು ಸಣ್ಣ

ಉದಾಹರಣೆಯಾಗಿ ಹೇಳುವುದಾದರೆ ಈ ದಿವಸ ರಾಜ್ಯದಲ್ಲಿರತಕ್ಕ ಅನೇಕ ಸಣ್ಣ ಸಣ್ಣ ಕೆರೆಗಳ ಜೀರ್ಣೋದ್ಧಾರ ಕೆಲಸವನ್ನು ಈ ತಾಲ್ಲೂಕ್ ಬೋರ್ಡುಗಳಿಗೆ ವಹಿಸಿದ್ದಾರೆ. ಅವರಿಗೆ ಅದಕ್ಕಾಗಿ ಬೇಕಾಗುವ ಹಣವನ್ನು ಒದಗಿಸಿಲ್ಲ. ಇವರು ಪ್ರತಿಯೊಂದು ತಾಲ್ಲೂಕಿಗೂ 2–3 ಸಾವಿರ ರೂಪಾಯಿಗಳನ್ನು ಕೊಟ್ಟರೆ ಅದರಿಂದ ಯಾವ ಕೆರೆಯನ್ನು ಜೀರ್ಣೋದ್ಧಾರ ಮಾಡುವುದಕ್ಕೆ ಸಾಧ್ಯವಿದೆ ! ಈ ಅಂಶವನ್ನು ಸರ್ಕಾರದವರು ಮುಖ್ಯವಾಗಿ ಆಲೋಚನೆ ಮಾಡಬೇಕು. ಈ ಹಿಂದೆ ಈ ಎಲ್ಲಾ ಕೆರೆಗಳೂ ಪಿ.ಡಬ್ಲ್ಯು.ಡಿ. ಛಾರ್ಜಿನಲ್ಲಿದ್ದವು. ಅವುಗಳನ್ನು ಇತ್ತೀಚೆಗೆ ತಾಲ್ಲೂಕ್ ಬೋರ್ಡುಗಳಿಗೆ ವರ್ಗಮಾಡಿದರು. ಅವರಿಗೆ ವರ್ಗಾಯಿಸಿದ ಮೇಲೆ ಅವುಗಳಿಗೆ ಅಗತ್ಯವಾದ ಹಣವನ್ನು ಒದಗಿಸಿಬೇಕು ಇಲ್ಲವೇ ಅವನ್ನು ಮತ್ತೆ ಪಿ.ಡಬ್ಲ್ಯು.ಡಿಗೆ ಹಿಂದಕ್ಕೆ ಕೊಟ್ಟು ಅವುಗಳನ್ನು ಜೀರ್ಣೋದ್ಧಾರ ಮಾಡುವಂತೆ ಮಾಡಿ ತನ್ಮೂಲಕ ದೇಶದಲ್ಲಿ ಹೆಚ್ಚು ಆಹಾರವನ್ನು ಬೆಳೆಯುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ಸರ್ಕಾರದವರಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

7. ಪಿ.ಎಂ

ರಾಷ್ಟ್ರೀಯ ವಿಸ್ತರಣಾ ಯೋಜನೆಗೆ ಸಂಬಂಧಪಟ್ಟ ಹಾಗೆ ಮೊದಲನೆಯ ಪಂಚವಾರ್ಷಿಕ ಯೋಜನೆ, ಎರಡನೇ ಪಂಚವಾರ್ಷಿಕ ಯೋಜನೆ, ಮೂರನೇ ಪಂಚವಾರ್ಷಿಕ ಯೋಜನೆಗಳು ಮುಗಿದು ನಾಲ್ಕನೆಯ ಪಂಚವಾರ್ಷಿಕ ಯೋಜನೆಯು ಮುಂದುವರೆಯುತ್ತಾ ಇದೆ. ಆದರೆ ಸರ್ಕಾರದವರು ನಿರೀಕ್ಷಣೆ ಮಾಡಿದ ರೀತಿಯಲ್ಲಿ ರಾಷ್ಟ್ರೀಯ ವಿಸ್ತರಣಾ ಕಾರ್ಯಕ್ರಮದಿಂದ ಸಾಕಷ್ಟು ಅನುಕೂಲವನ್ನು ಹೊಂದಿಲ್ಲ. ಪ್ರಜೆಗಳಿಗೆ ಒದಗಿಸಬೇಕಾದ ಸೌಕರ್ಯಗಳನ್ನು ಒದಗಿಸಿಲ್ಲ. ಗ್ರಾಮ ಸೇವಕರು, ಗ್ರಾಮ ಸೇವಕಿಯರು ಮಾಡತಕ್ಕ ಕೆಲಸಗಳು ಕಾರ್ಯಕ್ರಮಗಳು ವ್ಯವಸ್ಥಿತವಾದ ಮಾರ್ಗಗಳಲ್ಲಿ ನಡೆಯುವುದಕ್ಕೆ ಭದ್ರವಾದ ಒಂದು ವ್ಯವಸ್ಥೆ ಇರಬೇಕಾಗಿತ್ತು. ಅದು ಇಲ್ಲ, ಈಗ ಉದಾಹರಣೆ ಹೇಳುವುದಾದರೆ ನನ್ನ ತಾಲ್ಲೂಕಿನ ವಿಷಯವನ್ನೇ ಹೇಳುವುದಾದರೆ ರಾಷ್ಟ್ರೀಯ ವಿಸ್ತರಣಾ ಯೋಜನೆ ನನ್ನ ತಾಲ್ಲೂಕಿಗೆ 1955ರಲ್ಲಿ ಬಂತು. ಎಂದರೆ ಇಲ್ಲಿಗೆ 13 ವರ್ಷಗಳಾದವು. ಈ ರಾಷ್ಟ್ರೀಯ ವಿಸ್ತರಣಾ ಯೋಜನೆಯಲ್ಲಿ ಏನೇನು ಕಾರ್ಯಕ್ರಮಗಳು ನಡೆದಿವೆ ಅವು ನಾವು ನಿರೀಕ್ಷಿಸಿದ ಮಟ್ಟದಲ್ಲಿ ನಡೆದಿಲ್ಲ. ನಾನು 1927ನೇ ಇಸವಿಯಿಂದ ಇಲ್ಲಿಯವರೆಗೂ ಶಾಸನದ ಸಭೆಯ ಸದಸ್ಯನಾಗಿ ಡಿಸ್ಟ್ರಿಕ್ಟ್ ಬೋರ್ಡು ಸದಸ್ಯನಾಗಿ ನೋಡಿದ್ದೇನೆ. ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿ ಕಾರ್ಯಗಳಿಗೆ ಸರ್ಕಾರದವರು

ಒದಗಿಸತಕ್ಕಂಥ ಹಣ ಏನಿದೆ ಅದನ್ನು ಸಮನ್ವಯ ಮಾಡಿ ಸಂಸ್ಥಾನದ ಎಲ್ಲಾ ಜಿಲ್ಲೆಗಳಿಗೂ, ಎಲ್ಲಾ ತಾಲ್ಲೂಕುಗಳಿಗೂ ಸಮನ್ವಯವಾಗುವ ರೀತಿಯಲ್ಲಿ ಹಣವನ್ನು ಖರ್ಚುಮಾಡಿದ್ದಾರೆ. ಆದ್ದರಿಂದ ಆ ರೀತಿಯಲ್ಲಿ ಸರ್ಕಾರದವರು ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿ ಕಾರ್ಯಗಳಿಗೆ ಹಣವನ್ನು ಒದಗಿಸಿ ಎಲ್ಲಾ ತಾಲ್ಲೂಕು ಮತ್ತು ಜಿಲ್ಲೆಗಳಿಗೂ ಸಮನ್ವಯವಾಗುವ ರೀತಿಯಲ್ಲಿ ಹಣವನ್ನು ಖರ್ಚು ಮಾಡಬೇಕು. ಮತ್ತು ಅಲ್ಲಿ ನಡೆಯಬೇಕಾಗಿರತಕ್ಕ ಕೆಲಸಕಾರ್ಯಗಳನ್ನು ಮಾಡಿಕೊಡಬೇಕು ಎಂದು ನಾನು ಹೇಳುತ್ತೇನೆ. ಆಮೇಲೆ ಶ್ರೀ ಕೊಂಡಜ್ಜಿ ಬಸಪ್ಪನವರ ವರದಿಯನ್ನು ಕಾರ್ಯರೂಪಕ್ಕೆ ತರುವುದಕ್ಕೆ ಸಾಧ್ಯವಿದೆಯೇ ಅಥವಾ ಸಾಧ್ಯವಿಲ್ಲವೇ ಎಂಬುದನ್ನು ಹೇಳಬೇಕು. ಸಹಕಾರ ಸಂಘಗಳ ಟ್ರಿಬ್ಯುನಲ್, ರೆವಿನ್ಯೂ ಟ್ರಿಬ್ಯುನಲ್ ಇವುಗಳನ್ನು ವಿಸ್ತರಿಸಬೇಕಾದ್ದು ಅವಶ್ಯಕ. ಟ್ರಿಬ್ಯುನಲ್ಲಿಗೆ ಹೆಚ್ಚಿನ ಕೇಸುಗಳು ಬಂದರೆ ಕಾರ್ಯಗಳು ನಿಧಾನವಾಗಿ ಆದರೆ, ಆಗ ಸಹಕಾರ ಸಂಘಗಳಿಗೆ ಅದರಿಂದ ತೀವ್ರಾಸಕ್ತಿ ಕಡಿಮೆಯಾಗುತ್ತದೆ. ಆದ್ದರಿಂದ ಸಹಕಾರ ಸಂಘಗಳಿಗೆ ಒಂದು ಟ್ರಿಬ್ಯೂನಲ್ ಕೋರ್ಟ್‌ಮಾಡಿ ಅದನ್ನು ರೆವಿನ್ಯೂ ಟ್ರಿಬ್ಯುನಲ್ ಬೋರ್ಡಿಗೆ ಸೇರಿಸಿ ಆ ಕಾರ್ಯ ಮುಂದುವರಿಯುವ ಹಾಗೆ ಮಡಬೇಕು. ಯಾವ ಹಣದ ವೆಚ್ಚವನ್ನು ಕಡಿಮೆ ಮಾಡುವುದರ ಮೂಲಕ ಜಾಗ್ರತೆಯಾಗಿ ಕಾರ್ಯವನ್ನು ಮುಗಿಸುವುದಕ್ಕೆ ಸಾಧ್ಯವಿಲ್ಲ ಎಂದು ನಾನು ಹೇಳುತ್ತೇನೆ.

## ಗ್ರಾಮ ಪಂಚಾಯಿತಿಗಳಿಗೆ ಕಾರ್ಯದರ್ಶಿಗಳನ್ನು ನೇಮಿಸಿ

ಇನ್ನು ನಮ್ಮ ಸಂಸ್ಥಾನದಲ್ಲಿ ಪ್ರತಿಯೊಂದು ಡಿಸ್ಟ್ರಿಕ್ಟಿಗೂ ಒಂದೊಂದು ಡೆವಲಪ್‌ಮೆಂಟ್ ಬ್ಯಾಂಕನ್ನು ಸ್ಥಾಪನೆ ಮಾಡಬೇಕು. ಈಗ ಡಿ.ಸಿ.ಸಿ ಬ್ಯಾಂಕ್ ಇರುವ ರೀತಿಯಲ್ಲಿ ಮಾಡಬೇಕು. ಸರ್ಕಾರದವರು ರೈತರಿಗೆ ಕೊಡತಕ್ಕಂಥ ಹಣ ಜಾಗ್ರತೆಯಾಗಿ ಅವರಿಗೆ ಮುಟ್ಟಿ ಅವರು ಬಾವಿಯನ್ನು ತೆಗೆದು ಜಮೀನು ಅಬಾದು ಮಾಡುವುದಕ್ಕೆ ಈಗ ತೊಂದರೆಯಾಗುತ್ತಿದೆ. ಆದ್ದರಿಂದ ಈ ಅಭಿವೃದ್ಧಿ ಬ್ಯಾಂಕುಗಳನ್ನು ಪ್ರತಿಯೊಂದು ಜಿಲ್ಲೆಗೆ ಸ್ಥಾಪನೆ ಮಾಡಿ ಅವುಗಳ ಮುಖಾಂತರ ರೈತರಿಗೆ ಹಣವನ್ನು ಕೊಡುವುದಾದರೆ ಅವರು ಜಾಗ್ರತೆಯಾಗಿ ಸರ್ಕಾರದಿಂದ ಬರತಕ್ಕಂಥ ಸಹಾಯವನ್ನು ಸಾಲವನ್ನು ಪಡೆದುಕೊಂಡು ರೈತರು ಆಯಾ ಕ್ಷೇತ್ರದಲ್ಲಿ ಅಭಿವೃದ್ಧಿ ಕೆಲಸಕಾರ್ಯಗಳನ್ನು ಮಾಡುವುದಕ್ಕೆ ಅನುಕೂಲವಾಗುತ್ತದೆ. ಇಷ್ಟೊಂದು ಹಣವನ್ನು ಸಹಕಾರ ಸಂಘಗಳು ಕಷ್ಟಪಟ್ಟು ರೈತರ ಏಳಿಗೆಗೋಸ್ಕರ ಖರ್ಚು

ಮಾಡಬೇಕಾದರೆ ಆ ಕೆಲಸಗಳು ಕಾರ್ಯಗತವಾಗಬೇಕಾಗುತ್ತದೆ ಅದರಿಂದ ಸರಿಯಾದಂತಹ ವ್ಯವಸ್ಥೆ ಇರಬೇಕಾದ್ದು ಅವಶ್ಯಕ.

ಇನ್ನು ಗ್ರಾಮ ಪಂಚಾಯಿತಿಗಳಿಗೆ ಸೆಕ್ರೆಟರಿಗಳನ್ನು ನೇಮಿಸತಕ್ಕದ್ದು ಜಾಗ್ರತೆಯಾಗಿ ಆಗಬೇಕು. ಶ್ಯಾನಭೋಗರು ಮತ್ತು ಪಟೇಲರುಗಳಿಗೆ ನಿವೃತ್ತಿ ವೇತನವನ್ನು ಜಾಗ್ರತೆಯಾಗಿ ಕೊಡಬೇಕು. ಕಾರಣ ಇಷ್ಟೆ ವಿಲೇಜ್ ಆಫೀಸರುಗಳನ್ನು ತೆಗೆಯುವ ಬಗ್ಗೆ ಸರ್ಕಾರದ ಆರ್ಡರ್ ಆದಮೇಲೆ ಅವರು ಕೆಲಸದಲ್ಲಿ ಇರತಕ್ಕದ್ದು ಕಷ್ಟ ಸಾಧ್ಯ. ಆದ್ದರಿಂದ ಗ್ರಾಮ ಪಂಚಾಯಿತಿಗಳಲ್ಲಿ ಕೆಲಸಗಳು ಸುಲಲಿತವಾಗಿ ಆಗಬೇಕಾಗಿದ್ದ ಪಕ್ಷದಲ್ಲಿ ಸರ್ಕಾರದ ನಿಯಮಕ್ಕೆ ಅನುಗುಣವಾಗಿ ಗ್ರಾಮ ಪಂಚಾಯಿತಿಯ ಸೆಕ್ರೆಟರಿಗಳನ್ನು ಜಾಗ್ರತೆಯಾಗಿ ನೇಮಿಸಬೇಕು. ಇಷ್ಟು ಹೇಳಿ ಕೆಲವು ವಿಷಯಗಳನ್ನು ಸರ್ಕಾರದ ಗಮನಕ್ಕೆ ತರುವುದಕ್ಕೆ ಮಾನ್ಯ ಅಧ್ಯಕ್ಷರು ನನಗೆ ಕಾಲಾವಕಾಶವನ್ನು ಕೊಟ್ಟದ್ದಕ್ಕಾಗಿ ಅವರಿಗೆ ವಂದಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

## ನ್ಯಾಯ ಬೆಲೆ ಅಂಗಡಿ

**9ನೇ ಸೆಪ್ಟೆಂಬರ್ 1968**

ಸನ್‌ಮಾನ್ಯ ಸಭಾಪತಿಗಳೇ, ಮೂರು ದಿವಸಗಳಿಂದಲೂ ಈ ವಿಚಾರವಾಗಿ ವಿಪುಲವಾದ ಚರ್ಚೆ ನಡೆದಿದೆ. ಇತರ ಕೆಲಸಗಳನ್ನು ಬದಿಗೊತ್ತಿ ಆಹಾರ ಸಮಸ್ಯೆ ಮತ್ತು ಕ್ಷಾಮದ ನಿವಾರಣೆ ಕಾರ್ಯವನ್ನು ಅತಿ ಅಮೂಲ್ಯವಾದ ಕಾರ್ಯವೆಂದು ಭಾವಿಸಿ ಪೂರ್ಣ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಮಂತ್ರಿಗಳು ಪ್ರವಾಸವನ್ನು ಕೈಕೊಂಡಾಗ ಪ್ರತಿ ಜಿಲ್ಲೆಯಲ್ಲೂ ನಿಯಮಿತವಾದ ಹಣ ಕೊಟ್ಟಿರುವುದು ಸರಿಯಾಗಿ ವಿನಿಯೋಗವಾಗಿದೆಯೇ, ಧಾನ್ಯ ಸರಿಯಾದ ರೀತಿಯಲ್ಲಿ ಹಂಚಿಕೆಯಾಗಿದೆಯೇ ಎಂಬುದನ್ನು ಆಯಾಯ ಜಿಲ್ಲಾಧಿಕಾರಿಗಳಿಂದ ತಿಳಿದುಕೊಂಡು ಎಲ್ಲ ರೀತಿಯಿಂದಲೂ ಸಮರ್ಪಕವಾದ ರೀತಿಯಲ್ಲಿ ಕೆಲಸ ಕಾರ್ಯಗಳು ನಡೆಯುವಂತೆ ಮಾಡಬೇಕು ಇಲ್ಲದೆ ಇದ್ದ ಪಕ್ಷದಲ್ಲಿ, ಕಷ್ಟಪಟ್ಟು ತಾವು ಒದಗಿಸಿರತಕ್ಕ ಹಣದ ಸೌಲಭ್ಯ ಜನಗಳಿಗೆ ಸಿಕ್ಕಿದಂತಾಗುತ್ತದೆ. ಈ ವಿಷಯವನ್ನು ಸರ್ಕಾರದವರು ಗಮನದಲ್ಲಿಟ್ಟುಕೊಂಡು ಆಹಾರ ಧಾನ್ಯಗಳನ್ನು ಈಗ ಕೊಡುತ್ತಾ ಇರುವ ಮಟ್ಟಕ್ಕಿಂತಲೂ ನಾಲ್ಕರಷ್ಟು ಹೆಚ್ಚಿಸಬೇಕೆಂದು ಸಲಹೆ ಮಾಡುತ್ತೇನೆ. ಇದಕ್ಕೆ

ಡಿಪೋಗಳಲ್ಲಿ ಸರಿಯಾದ ವ್ಯವಸ್ಥೆ ಇರಬೇಕು. ಅದರ ಮೇಲ್ವಿಚಾರಣೆಯನ್ನು ತಾಲ್ಲೂಕಿನ ತಹಶೀಲ್ದಾರರು ಮತ್ತು ಬಿ.ಡಿ. ಓ ಗಳು ಅಲ್ಲದೆ ಇತರ ಅಧಿಕಾರಿಗಳು ಮಾಡಬೇಕು ಮತ್ತು ಡಿಪೋಗಳಲ್ಲಿ ತಾವು ಒದಗಿಸತಕ್ಕ ಧಾನ್ಯ ಸರಿಯಾಗಿ ವಿನಿಯೋಗವಾಗುತ್ತ ಇದೆಯೇ ಇಲ್ಲವೇ ಎಂಬುದನ್ನು ಗಮನಿಸಬೇಕು. ಸರ್ಕಾರದವರು ಬಹಳ ಶ್ರಮಪಟ್ಟು ಒದಗಿಸತಕ್ಕ ಧಾನ್ಯ ಜನರ ಕೈ ಸೇರುತ್ತಿಲ್ಲ. ನಾನೂ ಕೂಡ ಡಿಸ್ಟ್ರಿಕ್ಟ್ ಫುಡ್ ಕೌನ್ಸಿಲ್‌ನಲ್ಲಿ ಮತ್ತು ತಾಲ್ಲೂಕು ಫುಡ್ ಕೌನ್ಸಿಲ್‌ನಲ್ಲಿ ಇದ್ದೇನೆ. ನಮಗೆ ಬರತಕ್ಕ ಕೂಗು ಏನೆಂದರೆ ಆಹಾರ ಧಾನ್ಯ ಸರಿಯಾಗಿ ವಿನಿಯೋಗವಾಗುತ್ತಾ ಇಲ್ಲ ಎಂಬುದೇ ಆಗಿದೆ. ರಿಲೀಫ್ ಕಾಂಗಾರಿಗಳನ್ನು ಕೈಕೊಂಡಾಗ ಅವರಿಗೆ ಕೊಡತಕ್ಕ ಕೂಲಿಯನ್ನು ಹಣದ ರೂಪದಲ್ಲಿ ಕೊಡುವುದಕ್ಕೆ ಬದಲಾಗಿ ಧಾನ್ಯವನ್ನು ಆಯಾಯಾ ಸ್ಥಳದಲ್ಲಿಯೇ ಕೊಟ್ಟರೆ ಬಹಳ ಅನುಕೂಲವಾಗುತ್ತದೆ. ಆ ರೀತಿ ಬಡಜನರಿಗೆ ಅನುಕೂಲವಾಗತಕ್ಕ ಕಾರ್ಯಕ್ರಮವನ್ನು ಸರ್ಕಾರದವರು ಹೊಸದಾಗಿ ರೂಪಿಸಿಕೊಳ್ಳಬೇಕೆಂದು ಸಲಹೆ ಮಾಡುತ್ತೇನೆ. ಸಾಯಂಕಾಲದ ಮೇಲೆ ಹಣ ಕೊಡುವುದು, ಅವರು ಅಲ್ಲಿಂದ ಡಿಪೋಗೆ ಹೋಗಿ ಧಾನ್ಯವನ್ನು ತಂದು ಊಟ ಮಾಡುವುದು, ಮತ್ತೆ ಪುನಃ ಬೆಳಿಗ್ಗೆ ಎದ್ದು ಕೆಲಸಕ್ಕೆ ಹೋಗುವುದು ಎಂದರೆ ಅವರಿಗೆ ಬಹಳ ಕಷ್ಟವಾಗುತ್ತದೆ. ಇಂತಹ ಕಷ್ಟ ಕಾಲ ಸುಮಾರು 50-60 ವರ್ಷಗಳಿಂದಲೂ ಕೂಡ ನಮಗೆ ಗೊತ್ತಿರಲೇ ಇಲ್ಲ. ದುರ್ದೈವವಶಾತ್ 3-4 ವರ್ಷಗಳಿಂದ ಸರಿಯಾಗಿ ಮಳೆ ಬರದೇ ಈ ವರ್ಷವೂ ಕೂಡ ಮಳೆ ಬರದೆ ದೇವರು ನಮ್ಮನ್ನು ಕೈಬಿಟ್ಟಿದ್ದಾನೆ. ಇದಕ್ಕೆ ಕಾರಣವೇನು ಎಂಬುದನ್ನು ತಾವೇ ಅರಿತುಕೊಳ್ಳಬೇಕು. ಮಾನ್ಯರೇ, ಈಗ ತಮ್ಮಲ್ಲಿ ವಿನಂತಿಸಿಕೊಳ್ಳುವುದೇನೆಂದರೆ, ಈಗ ಈ ಕ್ಷಾಮ ನಿವಾರಣೆಗೆ ಒದಗಿಸಿರತಕ್ಕ ಹಣ ಏನೇನೂ ಸಾಲದು. ಇದನ್ನು ಹೆಚ್ಚಿನ ಮಟ್ಟದಲ್ಲಿ ಒದಗಿಸಬೇಕು. ಇಂಜಿನಿಯರಿಂಗ್ ಇಲಾಖೆಯವರು ಈ ಹಣ ಒದಗಿಸಿರುವುದನ್ನು ತಾಲ್ಲೂಕು ಅಮಲ್ದಾರರುಗಳಿಂದ ವಿಷಯ ಸಂಗ್ರಹಣೆ ಮಾಡಿ ಸರಿಯಾದ ಕ್ರಮವನ್ನು ಅನುಸರಿಸಿ ಕೆಲಸ ಕಾರ್ಯಗಳನ್ನು ಮಾಡಬೇಕೆಂದು ಆಜ್ಞೆ ಹೊರಡಿಸಿದ್ದಾರೆ, ಇದು ಬಹಳ ಸ್ತುತ್ಯವಾದ ವಿಚಾರ. ಈ ಆಜ್ಞೆಯನ್ನು ಮುಂದುವರಿಸಿ ಆಯಾಯಾ ತಾಲ್ಲೂಕಿನಲ್ಲಿ ಪಿ.ಡಬ್ಲ್ಯೂ. ಡಿ ಇಲಾಖೆಯಲ್ಲಿ ಕಾರ್ಯವಾಗದೇ ನಿಂತಿರತಕ್ಕ ಕೆರೆಗಳು, ಕೋಡಿಗಳು, ತೂಬುಗಳು ಇವುಗಳ ಕೆಲಸ ಕಾರ್ಯಗಳನ್ನು ಕೈ ಕೊಳ್ಳಬೇಕೆಂದು ಹೇಳುತ್ತೇನೆ. ಇಂತಹ ಕೆಲಸ ಕಾರ್ಯಗಳೂ ಕೂಡ ಆಗಬೇಕು. ಕ್ಷಾಮ ನಿವಾರಣೆಯ ಬಗ್ಗೆಯೂ ಆಗಬೇಕು ಮತ್ತು ಭದ್ರತೆಯ ಕೆಲಸ ಕಾರ್ಯಗಳೂ ಕೂಡ ಆಗಬೇಕು.

ಈಗ ಎರಡು ಮೂರು ದಿವಸಗಳಿಂದ ದೇವರು ಮಳೆಯನ್ನು ದಯಪಾಲಿಸುತ್ತಾ ಇದ್ದಾನೆ. ಕಾರಣ ಸರ್ಕಾರದವರು ಒಂದು ಸ್ಟೇಟ್‌ಮೆಂಟ್ ಮಾಡಿ ದೇಶಾದ್ಯಂತ ಇರತಕ್ಕ ಎಲ್ಲ ದೇವಾಲಯಗಳಲ್ಲೂ ಪೂಜೆ, ಪುನಸ್ಕಾರಗಳು ನಡೆದು, ನಾವು ಮಾಡಿರತಕ್ಕ ಅಪರಾಧಗಳಿಗೆ ಕ್ಷಮಾಪಣೆಯನ್ನು ಕೇಳಿಕೊಂಡ ಪ್ರಯುಕ್ತ ಮಳೆ ಬರುತ್ತಾ ಇದೆ. ಈಗ ದೇಶದಲ್ಲಿ ಉಂಟಾಗಿರತಕ್ಕ ಕಷ್ಟವನ್ನು ಸರ್ಕಾರದವರು ಪರಿಹಾರ ಮಾಡಬೇಕಾಗಿದ್ದರೆ ಕೇಂದ್ರ ಸರ್ಕಾರದಿಂದ ಹಣ ಸಹಾಯವನ್ನು ಪಡೆದು ಈ ಕ್ಷಾಮ ನಿವಾರಣೆಯನ್ನು ಮಾಡಬೇಕು. ಹಿಂದೆ 1926 ರಿಂದ 41ರ ವರೆಗೂ ನಮ್ಮ ಸರ್ಕಾರದಲ್ಲಿ ರಿಸರ್ವ್‌ಫಂಡ್ ಅಂತ ಹೇಳಿ ಇಟ್ಟು ಅದಕ್ಕೆ ಯಾವಾಗಲೂ ಕೈ ಹಾಕದೇ ಇಡುತ್ತಾ ಇದ್ದರು, ಈಗ ಆ ರಿಸರ್ವ್‌ಫಂಡ್ ಇದೆಯೋ ಇಲ್ಲವೋ ಗೊತ್ತಿಲ್ಲ. ಅನೇಕ ದೇಶಗಳಲ್ಲಿ ಬರಗಾಲ ಬಂದಿದೆ. ಇದು ಜನಗಳಿಗೆ ಮಾತ್ರವಲ್ಲ ಜಾನುವಾರುಗಳಿಗೂ ಕೂಡ ಇದರ ಪರಿತಾಪವುಂಟಾಗಿದೆ. ಅವುಗಳಿಗೆ ಹುಲ್ಲು ಇಲ್ಲ, ಹುರುಳಿ ಇಲ್ಲ. ಸಕಾಲದಲ್ಲಿ ಕುಡಿಯುವುದಕ್ಕೆ ನೀರು ಇಲ್ಲ. ಇಂತಹ ಒಂದು ಭೀಕರ ಕ್ಷಾಮವನ್ನು ಭಗವಂತ ಒದಗಿಸಿ ಸರ್ಕಾರಕ್ಕೂ ಮತ್ತು ಮಹಾಜನಗಳಿಗೂ ಕಷ್ಟವನ್ನು ತಂದೊಡ್ಡಿದ್ದಾನೆ, ಇದರ ಬಗ್ಗೆ ನಾವು ಭಗವಂತನನ್ನು ಆರಾಧಿಸುವುದರ ಜೊತೆಗೆ ನಮ್ಮ ಕಾರ್ಯದಲ್ಲಿ ಸತ್ಯ ಧರ್ಮಕ್ಕೆ ಒಳಪಟ್ಟು ಕಾರ್ಯವನ್ನು ನೆರವೇರಿಸುತ್ತಾ ದೇಶದಲ್ಲಿ ಸಂಪ್ರದಾಯವಾಗಿ, ನೀತಿ ಬದ್ಧವಾಗಿ, ನ್ಯಾಯಬದ್ಧವಾಗಿ ನಡೆಯತಕ್ಕ ಕಡೆಗೆ ಹೆಚ್ಚು ಗಮನ ಕೊಟ್ಟರೆ ದೇಶದ ಅಭ್ಯುದಯಕ್ಕೆ ದೇಶದಲ್ಲಿ ಉಂಟಾಗಿರತಕ್ಕ ಕಷ್ಟ ಪರಂಪರೆಯ ನಿವಾರಣೆಗೆ ಸಹಾಯಕವಾಗುತ್ತದೆ. ಎಂದು ನಂಬಿದ್ದೇನೆ.

ಕಂದಾಯದ ವಿಷಯ. 5 ಎಕರೆ ಮೇಲೆ ಇರತಕ್ಕ ಜಮೀನ್ದಾರರಿಗೆ ರೆಮಿಷನ್ ಕೊಡಬೇಕು ಎಂದು ಹೇಳಿ ನಾವು ಈ ಶಾಸನ ಸಭೆಯಲ್ಲಿ ಹೇಳಿದ್ದೇವೆ. ಡೆಪ್ಯೂಟಿ ಕಮೀಷನರಿಂದ ಸರ್ಕಾರದವರಿಗೆ ರಿಪೋರ್ಟು ಬಂದಿದೆ. ಇದುವರೆಗೂ ಕೂಡ ಏನೂ ಆಗಿಲ್ಲ, ಬರಗಾಲ ಬಂದಿದೆ, ಬೆಳೆ 4 ಅಣೆಗಿಂತ ಕಡಿಮೆಯಾಗಿರತಕ್ಕ ಪ್ರದೇಶಗಳಲ್ಲಿ ರೆಮಿಷನ್ ಕೊಡಬೇಕೆಂದು ಸರ್ಕಾರದ ಆಜ್ಞೆಯಾಗಿದ್ದರೂ ಅದು ಕಾರ್ಯಗತವಾಗಿಲ್ಲ. ಅದನ್ನು ಮಾಡಿಕೊಟ್ಟು ಜನಗಳಿಗೆ ಈಗ ಬಂದಿರುವ ಈ ಕಷ್ಟ ಕಾರ್ಪಣ್ಯಗಳನ್ನು ನಿವಾರಣೆ ಮಾಡಿಕೊಡಬೇಕೆಂದು ಹೇಳುತ್ತೇನೆ. ನಾನು ಮೂರು ದಿವಸಗಳಿಂದಲೂ ಮಾತನಾಡಬೇಕೆಂದು ಇದ್ದೆ, ದೇವರ ಇಚ್ಛೆ, ಈಗ ಮಾತನಾಡುವುದಕ್ಕೆ ಅವಕಾಶ ಸಿಕ್ಕಿತು. ನನ್ನ ಪ್ರಾರ್ಥನೆ ಸರ್ಕಾರದವರಲ್ಲಿ ಇಷ್ಟೆ,

ಇದಕ್ಕಿಂತಲೂ ಕಷ್ಟ ಕಾಲ ಇನ್ನು ಬರುವುದಿಲ್ಲ, ಶಾಸಕರು ಏನೇನು ಸಲಹೆ ಮಾಡುತ್ತಾರೋ ಅದನ್ನೆಲ್ಲಾ ಸರ್ಕಾರದವರು ಮಾನ್ಯ ಮಾಡಿ ಜನಗಳು ಬರಗಾಲದಲ್ಲಿ ಎಲ್ಲೂ ಸಾಯಲಿಲ್ಲ ಎನ್ನತಕ್ಕ ರೀತಿಯಲ್ಲಿ ಈ ಕಾರ್ಯವನ್ನು ಯಶಸ್ವೀಯಾಗಿ ನೆರವೇರಿಸಿ ಸರ್ಕಾರದವರು ಒಂದು ಗೌರವವನ್ನು ಪಡೆಯಬೇಕೆಂದು ಹೇಳಿ ಸರ್ಕಾರದವರಲ್ಲಿ ಬಿನ್ನಹ ಮಾಡಿ ನನಗೆ ಮಾತನಾಡಲು ಕಾಲವನ್ನು ಕೊಟ್ಟಂಥ ಸ್ಪೀಕರ್‌ರವರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

**ಜೈ ಹಿಂದ್.**

## ಸಹಕಾರ ಇಲಾಖೆ ಸರಿಪಡಿಸಿ.

**24 ನೇ ಮಾರ್ಚ್ 1969**

ಸನ್ಮಾನ್ಯ ಸಭಾಧ್ಯಕ್ಷರೇ, ಈ ದಿವಸ ಗ್ರಾಮ ಪಂಚಾಯಿತಿ, ಸಹಕಾರ ಮತ್ತು ರಾಷ್ಟ್ರೀಯ ವಿಸ್ತರಣೆ ಯೋಜನೆಯ ವಿಚಾರವಾಗಿ ಮಂಡಿಸಿರತಕ್ಕಂಥ ಬೇಡಿಕೆಗಳನ್ನು ನಾನು ಪೂರ್ಣವಾಗಿ ಸಮರ್ಥನೆ ಮಾಡುತ್ತಾ ಕೆಲವು ವಿಷಯಗಳನ್ನು ಈ ಸರ್ಕಾರದ ಗಮನಕ್ಕೆ ತರುವುದಕ್ಕೆ ಪ್ರಯತ್ನ ಮಾಡುತ್ತೇನೆ.

ಮೊಟ್ಟ ಮೊದಲನೆಯದಾಗಿ, ಗ್ರಾಮ ಪಂಚಾಯಿತಿಗಳನ್ನು ದೇಶಾದ್ಯಂತ ವ್ಯವಸ್ಥೆ ಮಾಡಬೇಕೆಂದು ಹೇಳಿ ಗ್ರಾಮಪಂಚಾಯತಿಗಳ ಕರ್ತವ್ಯದಲ್ಲಿ ತೀರಾ ಅನ್ಯಾಯಗಳಾಗಿ ಗ್ರಾಮ ಪಂಚಾಯತಿಗಳು ವರ್ಷಾನುಗಟ್ಟಲೆ ಪಂಚಾಯತಿ ಮೀಟಿಂಗ್‌ಗಳನ್ನೇ ನಡೆಸಲಿಲ್ಲ. ಮಹಾತ್ಮ ಗಾಂಧಿಯವರ ಶತಾಬ್ಧಿ ವರ್ಷದಲ್ಲಿ ಪ್ರತಿಯೊಂದು ಗ್ರಾಮದಲ್ಲಿಯೂ ಕೆಲವು ಬಾವಿಗಳನ್ನು ತೆಗೆಸುವ ನಿರ್ಧಾರವೇನೋ ಆಗಿದೆ. ಆದರೆ ಇದುವರೆಗೂ ಅದು ಕಾರ್ಯಗತವಾಗುವ ಸಂಭವವೇ ಬಂದಿಲ್ಲ. ಆಗಲೇ ಕೆಲವು ತಿಂಗಳುಗಳು ಕಳೆಯಿತು. ಇನ್ನು ಕೆಲವೇ ತಿಂಗಳುಗಳಿವೆ. ಸರ್ಕಾರ ಈಗಾಗಲೇ ಹೇಳಿರತಕ್ಕ ಕಾರ್ಯಗಳನ್ನು ಕಾರ್ಯಗತ ಮಾಡದಿದ್ದರೆ ಜನಗಳಲ್ಲಿ ನಂಬಿಕೆ ಕಡಿಮೆಯಾಗುವ ಸಂದರ್ಭ ಉಂಟಾಗುತ್ತದೆಂದು ನಾನು ಹೇಳಲಿಚ್ಛಿಸುತ್ತೇನೆ.

ಇನ್ನು ಸಹಕಾರ ತತ್ವದ ಬಗ್ಗೆ ನನ್ನ ಅನೇಕ ಸ್ನೇಹಿತರು ಅದರಲ್ಲಿರತಕ್ಕ ಲೋಪದೋಷಗಳನ್ನು ಎತ್ತಿ ಹಿಡಿದು ಈ ಸಭೆಗೆ ತಿಳಿಸಿದ್ದಾರೆ. ನಾವು ಈಗ

ಹೇಳತಕ್ಕ ಕಾರ್ಯಗಳನ್ನು ಮುಂದೆ ಬರತಕ್ಕ ಬಡ್ಜೆಟ್ ಮೀಟಂಗಿನೊಳಗೆ ಮಾಡಲು ಮತ್ತು ಆ ದೋಷಗಳನ್ನು ನಿವಾರಣೆ ಮಾಡುವುದಕ್ಕೆ ಸಂಬಂಧಪಟ್ಟ ಇಲಾಖೆಯವರು ಕೂಡಲೇ ಕಾರ್ಯ ತತ್ಪರರಾಗಬೇಕು. ಇಲ್ಲದೇ ಹೋದರೆ ಏನೂ ಪ್ರಯೋಜನವಾಗುವುದಿಲ್ಲ. ಈ ವಿಚಾರವನ್ನು ನಾನು ಪ್ರತಿಯೊಂದು ಬಡ್ಜೆಟ್ ಅಧಿವೇಶನದಲ್ಲಿಯೂ ಹೇಳಿದ್ದರೂ ಅದು ಇನ್ನೂ ಕಾರ್ಯಗತವಾಗದಿದ್ದರೆ, ಇಷ್ಟು ಹಣವನ್ನು ವೆಚ್ಚ ಮಾಡಿ ನಡೆಸುವಂಥ ಈ ಸಭೆಯ ಕಾರ್ಯಕಲಾಪಗಳು ಏನೂ ಪ್ರಯೋಜನವಿಲ್ಲದಂತಾಗುತ್ತದೆ. ಅದರಲ್ಲಿ ಇರತಕ್ಕ ಅನೇಕ ಲೋಪದೋಷಗಳನ್ನು ನನ್ನ ಸ್ನೇಹಿತರಲ್ಲಿ ಕೆಲವರು ಹೇಳಿದ್ದಾರೆ. ಆದರೆ ಅದರ ಲಾಭ ದೇಶಕ್ಕೆ ಅದರಿಂದಾಗತಕ್ಕ ಫಲ. ಮತ್ತು ಸಹಕಾರ ಸಂಸ್ಥೆಗಳು ಈ ದೇಶದಲ್ಲಿ ಯಾವ ರೀತಿಯಲ್ಲ ಕೆಲಸ ಮಾಡುತ್ತಿವೆ ಎನ್ನುವುದನ್ನು ಮಾತ್ರ ಯಾವ ಸ್ನೇಹಿತರೂ ಹೇಳುವುದಕ್ಕೆ ಮನಸ್ಸು ಮಾಡಿಲ್ಲ. 1904ರಲ್ಲಿ ಸಹಕಾರ ಸಂಸ್ಥೆಗಳು ಹಿಂದಿನ ಮಹಾರಾಜರುಗಳ ಕಾಲದಲ್ಲಿ ಹೇಗಿತ್ತು ಎಂಬುದನ್ನು ನೋಡಬೇಕು. ಮಾನ್ಯ ಶ್ರೀ ಕೆ. ಎಚ್, ರಾಮಯ್ಯನವರೇ ಮೊದಲು ರಿಜಿಸ್ಟ್ರಾರ್ ಆಗಿದ್ದರು 65 ವರ್ಷಗಳಾದುವು. ಈಗ ದೇಶದಲ್ಲಿ 20 ಸಾವಿರ ಸಹಕಾರ ಸಂಸ್ಥೆಗಳಾಗಿವೆ. ತನ್ಮೂಲಕ ಆಹಾರೋತ್ಪತ್ತಿ ಜಾಸ್ತಿಯಾಗಿದೆ. ಈಗ ಎರಡು ವರ್ಷಗಳ ಮುಂಚೆ ಬಾವಿಗಳನ್ನು ತೋಡುವುದಕ್ಕೋಸ್ಕರವಾಗಿ ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕ್ 174 ತಾಲ್ಲೂಕುಗಳಿಗೆ ಹಣವನ್ನು ಕೊಟ್ಟರು. ಈ ಮೂಲಕವಾಗಿ ಧಾನ್ಯ ಹೆಚ್ಚು ಬೆಳೆದು 2 ವರ್ಷಗಳಿಂದ ರೈತರು ದೇಶದ ಕಷ್ಟವನ್ನು ಕಡಿಮೆ ಮಾಡಿಕೊಟ್ಟಿದ್ದಾರೆ. ಅದು ಸರ್ಕಾರಕ್ಕೂ ಗೊತ್ತು. ಮಹಾಜನಗಳಿಗೂ ಗೊತ್ತು. ಆಗಿರತಕ್ಕ ಪ್ರಯೋಜನಗಳನ್ನು ಸರ್ಕಾರಕ್ಕೆ ತಿಳಿಸುವುದು ನಮ್ಮ ಧರ್ಮ. ಸರ್ಕಾರದವರು ಬಹಳ ಪ್ರಯತ್ನ ಮಾಡಿ ಈ ಸೊಸೈಟಿಗಳನ್ನು ಉತ್ತಮಗೊಳಿಸಿದ್ದಾರೆ. ತಂದೆಗೆ 5 ಜನ ಮಕ್ಕಳು ಹುಟ್ಟಿದಾಗ ಒಬ್ಬೊಬ್ಬರೂ ಅಂಜಿಕೊಂಡು, ಭಯಭಕ್ತಿಯಿಂದ ಇದ್ದುಕೊಂಡು ಒಂದು ದೊಡ್ಡ ಸಂಸಾರವನ್ನಾಗಿ ಮಾಡಿಕೊಂಡು ಹೋಗುವುದು ಧರ್ಮ, ಆದರೆ ಇಲ್ಲಿ 20 ಸಾವಿರ ಸಹಕಾರ ಸಂಘಗಳನ್ನು ಮಂತ್ರಿಗಳು ನೋಡಿದ ಮೇಲೆ ಏಕೋ ಕಾಲ ಬಹಳ ಕಷ್ಟವಾಗುತ್ತದೆಯೆಂಬುದಾಗಿ ಹೇಳಬಹುದು. ಸಹಕಾರ ಇಲಾಖೆಯಲ್ಲಿ ಉತ್ತಮವಾದಂಥ ಹಾಗೂ ದಕ್ಷರಾದ ಆಡಳಿತಗಾರರು ಇದ್ದಾರೆ. ಆದರೆ ಎಲ್ಲರೂ ನೀತಿ ಅಥವಾ ಅನೀತಿಯಿಂದ ಇದ್ದಾರೆಂದು ಹೇಳುವುದಕ್ಕೆ ಹೋಗುವುದಿಲ್ಲ. ನಾನು 1943 ರಿಂದ 1969 ರವರೆಗೆ ಎಂದರೆ ಸುಮಾರು 26 ವರ್ಷಗಳಿಂದಲೂ ಮಾಗಡಿ ತಾಲ್ಲೂಕಿನ ಹಾಗೂ ಪ್ರೈಮರಿ ತಾಲ್ಲೂಕು ಬ್ಯಾಂಕಿಗೆ

ಅಧ್ಯಕ್ಷನಾಗಿದ್ದು ಅಲ್ಲಿಂದ 40 ಲಕ್ಷ ರೂಪಾಯಿಗಳನ್ನು ಬಾವಿ ತೋಡಿಸಲಿಕ್ಕೆ ಕೊಡಿಸಿದ್ದೇನೆ. ಆದರೆ ಅವನ್ನು ತೆಗೆದುಕೊಂಡು ಹೋದ ರೈತರು ವಾಪಸ್ಸು ಕೊಟ್ಟಿದ್ದಾರೆ. ಈಗ ಮೂರು ವರ್ಷಗಳಿಂದ ಮಳೆಬೆಳೆ ಕಡಿಮೆಯಾಗಿ ಸ್ವಲ್ಪ ಕಷ್ಟಕ್ಕೆ ಸಿಕ್ಕಿದ್ದಾರೆ. ಕೆಲವು ಪ್ರದೇಶಗಳಲ್ಲಿ ಮಳೆ ಸರಿಯಾಗಿ ಆಗದೇ ಇರುವ ದೆಸೆಯಿಂದ, ಸರ್ಕಾರದವರು ಸಹಕಾರ ಸಂಘಗಳ ಮೂಲಕ ರೈತರಿಗೆ ಹಣವನ್ನು ಕೊಡುತ್ತಿದ್ದಾರೆ. ತೆಂಗು. ಅಡಿಕೆ ಬೆಳೆ ಅಭಿವೃದ್ಧಿ ಮಾಡುವುದಕ್ಕೆ ಹಾಗೂ ಭೂಮಿಯನ್ನು ಸಮ ಮಾಡುವ ಕಾರ್ಯಕ್ರಮಕ್ಕೆ ಹೆಚ್ಚಿಗೆ ಹಣವನ್ನು ಸರ್ಕಾರದವರು ಕೊಟ್ಟಿದ್ದಾರೆ. ಈ ಮೈಸೂರು ಸಂಸ್ಥಾನದಲ್ಲಿ ಸಹಕಾರ ಸಂಘಗಳ ಮೂಲಕ ಆಗಿರತಕ್ಕ ಒಂದು ದೊಡ್ಡ ಪ್ರಯೋಜನವನ್ನು ಈ ಸಭೆಯಲ್ಲಿ ನನ್ನ ಮಾನ್ಯ ಸ್ನೇಹಿತರು ಹೇಳದೇ ಹೋದರಲ್ಲಾ ಎಂದು ನನಗೆ ವ್ಯಸನವಾಗುತ್ತದೆ. ದೋಷಗಳನ್ನು ನಿವಾರಣೆ ಮಾಡುವುದು ಸ್ವಭಾವ. ಈಗ ಗ್ರಾಮ ಪಂಚಾಯತಿಗಳನ್ನು ಬದಲಾಯಿಸಿ ಫೆಡರೇಷನ್ ಮಾಡಬೇಕೆಂದು ಹೇಳಿದ್ದಾರೆ. ಯಾವ ಗ್ರೂಪ್‌ನಲ್ಲಿ ಯಾವ ಹಳ್ಳಿಯಲ್ಲಿಯೂ ಉದ್ಧಾರವಾಗಿಲ್ಲ. ಅಕ್ವಿಸಿಷನ್ ಪ್ರೊಸೀಡಿಂಗ್ಸ್ ಹೆಚ್ಚು ಕಡಿಮೆ ಸರಿಯಾಗಿ ಮಾಡಲಿಲ್ಲ. ಯಾವ ಜಮೀನನ್ನು ಗೋಮಾಳಕ್ಕಾಗಿ ಗ್ರಾಮ ಪಂಚಾಯಿತಿಗೆ ಒದಗಿಸಿದ್ದರೋ ಅದರ ಲಾಭ ಆಗಲಿಲ್ಲ. ಸುಮ್ಮನೆ ಕಾನೂನುಗಳನ್ನು ಮಾಡುವುದು, ಸಂಸ್ಥೆಗಳನ್ನು ವ್ಯವಸ್ಥೆ ಮಾಡುವುದು, ಅಧಿಕಾರಿಗಳನ್ನು ನೇಮಿಸುವುದು ಈ ಕಾರ್ಯದಲ್ಲಿ ನಾವು ನಿಪುಣರು ಆಗಿದ್ದೇವೆಯೇ ಹೊರತು ಈ ಸಂಸ್ಥೆಗಳು ತನ್ನ ಕರ್ತವ್ಯವನ್ನು ಎಷ್ಟರ ಮಟ್ಟಿಗೆ ಸಾಧಿಸಿವೆ. ಜನಗಳಿಗೆ ಎಷ್ಟು ಲಭ್ಯವಾಗಿದೆ ಎನ್ನುವ ಕಡೆ ಗಮನ ಹರಿಸುತ್ತಿಲ್ಲ. ಸರಿಯಾದ ಕಾರ್ಯಕ್ರಮವನ್ನು ಹಾಕಿಕೊಂಡು ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳು ಮತ್ತು ಮಂತ್ರಿಗಳು ಇದನ್ನು ವಿಚಾರ ಮಾಡಬೇಕು. ಗ್ರಾಮ ಪಂಚಾಯತಿಗಳಿಗೆ ಸೆಕ್ರೆಟರಿಗಳನ್ನು ನೇಮಿಸುವ ಸಂಭವವೇ ಇಲ್ಲ. ಈಗ 6 ಪಂಚಾಯತಿಗಳು ಮಾಗಡಿ ತಾಲ್ಲೂಕಿನಲ್ಲಿವೆ. ಅದರ ಸೆಕ್ರೆಟರಿಗಳಿಗೆ ಟ್ರೈನಿಂಗ್ ಆಯಿತೇ ಹೊರತು ಅಲ್ಲಿಗೆ ನೇಮಕವಾಗಿಲ್ಲ. ಅಲ್ಲಿನ ಕಾರ್ಯ ಮಾಡುವುದು ಹೀಗಿದೆ. ಈ ಗ್ರಾಮಪಂಚಾಯತಿ ಹಣವನ್ನು ವಸೂಲು ಮಾಡುವವರು ಯಾರು? ಇದೆಲ್ಲ ಸರಿಪಡಿಸಬೇಕು. ಮನೆ ಕಟ್ಟಿದ ಮೇಲೆ ಬಾಗಿಲು ಇರಬೇಕು. ಆ ಬಾಗಿಲಿಗೆ ಬೀಗ ಇರಬೇಕು. ಅದೇ ಇಲ್ಲದಿದ್ದರೆ ಇನ್ನು ಮನೆ ಎಲ್ಲಿರುತ್ತದೆ? ಅದೆಲ್ಲಿ ಉಳಿಯುತ್ತದೆ? ಈ ರೀತಿ ಆಗಬಾರದು. ಸರ್ಕಾರದವರು ಸಹಕಾರ ಸಂಘಗಳ ಮೂಲಕ ಅಭಾವ ಇರುವ ಪ್ರದೇಶಗಳಲ್ಲಿ ಈ ದಿವಸ ಆಹಾರ ಹಂಚುವಿಕೆಗೆ ಏರ್ಪಾಡು ಮಾಡಿದ್ದಾರೆ. ಧಾರಣಿವಾಸಿಗಳು

ಕಡಿಮೆ ಆಗಿರುವುದರಿಂದ ಜನಗಳು ತೃಪ್ತಿಗೊಂಡಿದ್ದಾರೆ. ಈ ಒಂದು ಕಾರಣದಿಂದ ಸಹಕಾರ ಸಂಘಗಳಲ್ಲಿ ದೋಷವಿಲ್ಲವೆಂದು ನಾನು ಹೇಳುವುದಿಲ್ಲ, ದೋಷಗಳೂ ಇವೆ. ದೊಡ್ಡ ದೊಡ್ಡ ಸಂಘಗಳಲ್ಲಿ ಅಕ್ರಮ, ಅನ್ಯಾಯ ಕೆಲಸಗಳು ಬೇಕಾದಷ್ಟು ನಡೆಯುತ್ತಿವೆ. ಸೊಸೈಟಿಗಳಲ್ಲಿ ಜನರಲ್‌ಬಾಡಿ ಮೀಟಿಂಗ್ ವರ್ಷಕ್ಕೊಂದು ಸಾರಿ ಆಗಬೇಕು. ಸಹಕಾರ ತತ್ವ ಕಾರ್ಯರೂಪಕ್ಕೆ ಬರಬೇಕು. ಈ ಬುನಾದಿ ಸರಿಹೋಗುವವರೆಗೆ ಸಹಕಾರ ಸಂಘಗಳ ಕಾರ್ಯ ವ್ಯಾಪ್ತಿ ದೋಷ ನಿವಾರಣೆಯಾಗುವ ಸಂದರ್ಭವಿಲ್ಲ. ಆದ್ದರಿಂದ ಸರ್ಕಾರದವರು ಈ ಸಹಕಾರ ತತ್ವದ ಮಾರ್ಗವನ್ನು ವಿಸ್ತರಣೆ ಮಾಡುವ ಜೊತೆಗೆ ಅದರಲ್ಲಿನ ಲೋಪದೋಷಗಳನ್ನು ಸರಿಮಾಡಿ ಈ ಸಭೆಯಲ್ಲಿ ಏನು ದೋಷಗಳನ್ನು ಮಹಾಜನರು ಎತ್ತಿ ತೋರಿಸಿದ್ದಾರೋ ಅವುಗಳ ನಿವಾರಣೆಗೆ ಇಲಾಖೆಯ ಅಧಿಕಾರಿಗಳು ಅದಕ್ಕೆ ಸಂಬಂಧಪಟ್ಟ ಮಂತ್ರಿಗಳು ಜವಾಬ್ದಾರಿ ವಹಿಸಿ ಅದಕ್ಕೆ ಸಂಬಂಧಪಟ್ಟ ಮಂತ್ರಿಗಳು ಜವಾಬ್ದಾರಿ ವಹಿಸಿ ಅದಕ್ಕೆ ತಕ್ಕ ಕ್ರಮಗಳನ್ನು ತೆಗೆದುಕೊಳ್ಳಬೇಕು.

## ನಿಯಂತ್ರಿತ ಮಾರುಕಟ್ಟೆ

ಇನ್ನು ರೆಗ್ಯುಲೇಟೆಡ್ ಮಾರ್ಕೆಟ್ಟನ್ನು ದೇಶಾದ್ಯಂತ ಮಾಡಿದ್ದಾರೆ. ಬೆಂಗಳೂರು ರೆಗ್ಯುಲೇಟೆಡ್ ಮಾರ್ಕೆಟ್ಟಿನಲ್ಲಿ ನಾನು ಒಬ್ಬ ಡೈರೆಕ್ಟರ್ ಅಲ್ಲಿ 6 ಲಕ್ಷ ರೂಪಾಯಿಗಳ ವರಮಾನ ಬರುತ್ತದೆ. ಆ ಕಮಿಟಿಯಲ್ಲಿ ರೈತ ಇರುವುದಿಲ್ಲ. ವರ್ತಕರಿಗೇ ಅಲ್ಲಿನ ಸ್ಥಾನಗಳು ಹೋಗುತ್ತವೆ. ರೆಗ್ಯುಲೇಟೆಡ್ ಮಾರ್ಕೆಟ್ ನಿರ್ಮಾಣದಿಂದ ಸೊಸೈಟಿಗಳಿಗೆ ಮತ್ತು ಸರ್ಕಾರಕ್ಕೆ ಎಷ್ಟು ಲಾಭವಾಗಿವೆ ಎನ್ನುವ ಮಾತನ್ನು ಮಾನ್ಯ ಸ್ನೇಹಿತರು ಒಬ್ಬರೂ ಹೇಳಲಿಲ್ಲ. ಅನೇಕರು ವಿರೋಧವಾಗಿಯೇ ಮಾತನಾಡುತ್ತಿದ್ದಾರೆ. ಮಾನ್ಯ ಶ್ರೀರಾಜಯ್ಯ ಶೆಟ್ಟಿ ಅವರಿಗೆ ಅದರ ಅನುಭವ ಇದೆ. ವರ್ತಕರು ಬೇರೆ ಸಂಸ್ಥೆಗಳಲ್ಲಿಯೂ ಇದ್ದಾರೆ. ಒಳ್ಳೆಯದನ್ನು ಒಳ್ಳೆಯವರು ಎಂದು ಹೇಳುವುದಕ್ಕೆ ಏನೂ ಕಷ್ಟವಿಲ್ಲ.

7–30 ಪಿ.ಎಂ.

## ಕೆಟ್ಟದ್ದನ್ನು ಕೆಟ್ಟದ್ದು ಎಂದು ಹೇಳುವ ಹಕ್ಕು ಮಾನವನಿಗೆ ಸೇರಿದೆ

ಕೆಟ್ಟದ್ದು ಕೆಟ್ಟದ್ದೆಂದು ಹೇಳತಕ್ಕದ್ದು ಮಾನವನಿಗೆ ಸೇರಿದ ಹಕ್ಕು. ಇವತ್ತು ಕೊಂಡಜ್ಜಿ ಬಸಪ್ಪನವರ ರಿಪೋರ್ಟು ಏನಿದೆ, ಅದನ್ನು ಬಹುಕಷ್ಟಪಟ್ಟು ತಯಾರು ಮಾಡಿದ್ದು ಏಕೆ? ಅದರ ವ್ಯಾಪ್ತಿಯನ್ನು ಮುಂದಿನ ವರ್ಷದಲ್ಲಿ ಆದರೂ ಮಾಡುವುದಾದರೆ ಮಾಡುತ್ತೇವೆಂದು ಹೇಳಿ, ಇಲ್ಲದಿದ್ದರೆ, ಇಲ್ಲವೆಂದು ಹೇಳಿ. ಮುಗುಮ್ಮಾಗಿ ಇರತಕ್ಕದ್ದು ಸರಿಯಲ್ಲ. ಇವತ್ತು ಈ ಸಂಸ್ಥೆಗಳ ಮೂಲಕ ಜನರಿಗೆ ಅನುಕೂಲಗಳನ್ನು ಮಾಡಬೇಕು. ಬಾವಿ ಮತ್ತು ಇತರ ಅಭಿವೃದ್ಧಿ ಕಾರ್ಯಗಳಿಗೆ ಕೊಟ್ಟಿರತಕ್ಕ ಹಣ ಸಾಲದು. ಮಹಾತ್ಮಾ ಗಾಂಧೀಜಿಯವರ ಹೆಸರಿನಲ್ಲಿ ದೇಶಾದ್ಯಂತ ಕಲ್ಯಾಣವಾಗಬೇಕಾದರೆ, ಅದಕ್ಕೆ ತಕ್ಕಷ್ಟು ಹಣ ಬೇಕು. ಅದನ್ನು ಸರ್ಕಾರದವರು ಒದಗಿಸಬೇಕು. ತನ್ಮೂಲಕ ಕುಡಿಯುವ ನೀರಿನ ಬಾವಿಯನ್ನು ಪ್ರತಿಯೊಂದು ಗ್ರಾಮದಲ್ಲೂ ಮಾಡಿ, ದೇಶದ ಎಲ್ಲಾ ಜನರಿಗೆ ಅದರ ನೆರವನ್ನು ನೀಡಿ ಮುಂದುವರೆಯಬೇಕು. ಇದನ್ನು ಎಲ್ಲಿಯವರೆಗೆ ಈಡೇರಿಸದೆ, ನಿಧಾನ ಮಾಡುವುದಾದರೆ, ಸರ್ಕಾರಕ್ಕೆ ಸಂತೋಷವಾಗುವುದಿಲ್ಲ, ನಮಗೂ ಜನರಿಗೂ ಸಂತೋಷವಾಗುವುದಿಲ್ಲ, ನಾವು ಇವತ್ತು ಲಕ್ಷಾಂತರ ಜನರಿಗೆ ನಮ್ಮ ನಮ್ಮ ಕ್ಷೇತ್ರಗಳಲ್ಲಿ ಭರವಸೆಯನ್ನು ಕೊಟ್ಟು ಬಂದಿರುತ್ತೇವೆ. ಅದರ ಪೈಕಿ ಕೆಲವನ್ನಾದರೂ ಕಾರ್ಯಗತ ಮಾಡಬೇಕು. ಅದರಿಂದ ದೇಶಕ್ಕೂ ಸಂತೋಷ ಮತ್ತು ಆಹಾರ ಧಾನ್ಯಗಳನ್ನು ಉತ್ಪತ್ತಿ ಮಾಡಿ, ಈ ಸಹಕಾರಿ ಸಂಘಗಳನ್ನು ಜೀರ್ಣೋದ್ಧಾರ ಮಾಡಿ, ಜನರಿಗೆ ಅನುಕೂಲ ಮಾಡಿಕೊಡಬೇಕೆಂದು ಹೇಳಿ, ಅಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಮೂಲತಃ ಕೃಷಿಕ ಕುಟುಂಬದ ಹಿನ್ನೆಲೆಯಿದ್ದ ಸೋಲೂರು ಸಿದ್ದಪ್ಪನವರಿಗೆ ಆಹಾರದ ವಿಷಯದಲ್ಲಿ ದೇಶ ಸ್ವಾವಲಂಬಿಯಾಗಬೇಕು ಎಂಬ ಆಶಯವಿತ್ತು. ಹೊರ ದೇಶಗಳಿಂದ ಆಹಾರ ಆಮದು ಮಾಡಿಕೊಳ್ಳುವುದು ದೇಶದ ಜಾಯಮಾನಕ್ಕೆ ಸರಿ ಬಾರದೆಂದು ತಿಳಿದಿದ್ದರು. ಬೇಸಾಯವೇ ದೇಶದ ಬೆನ್ನೆಲುಬಾದ್ದರಿಂದ ಆಹಾರ ಧಾನ್ಯಗಳನ್ನು ಆಮದು ಮಾಡಿ ಕೊಳ್ಳುವುದು ಯಾಕೆ? ಕೃಷಿಗೆ ಬೇಕಾದ್ದು ನೀರು. ನೀರಿನ ಸಂಗ್ರಹವಾದರೆ ಆಹಾರದ ಸಮಸ್ಯೆಯೇ ಇರುವುದಿಲ್ಲ. ದೊಡ್ಡ ದೊಡ್ಡ ಜಲಾಶಯಗಳ ಜೊತ ಜೊತೆಯಲ್ಲಿಯೇ ಸಣ್ಣ ಪುಟ್ಟ ಕೆರೆಗಳ ನಿರ್ಮಾಣ

ಮತ್ತು ದುರಸ್ತುಗಳು ನಡೆಯಬೇಕು ಎಂದು ಸರ್ಕಾರಕ್ಕೆ ಮನವಿ ಮಾಡಿದರು. ಮಾಗಡಿ ತಾಲ್ಲೂಕಿನಲ್ಲಿರುವ ಕೆರೆಗಳ ದುರಸ್ತಿ ಹಾಗೂ ಹೊಸ ಕೆರೆಗಳ ನಿರ್ಮಾಣ ಮಾಡಿಸುವಂತೆ ವಿನಂತಿ ಮಾಡಿಕೊಂಡರು. ಬೇಸಾಯಕ್ಕೆ ನೀರು, ಸಂಚಾರಕ್ಕೆ ರಸ್ತೆ ಇವೆರಡೂ ಅಗತ್ಯವೆಂಬ ವಿಷಯವನ್ನು ಹಕ್ಕೊತ್ತಾಯ ಮಾಡಿಯೇ ಹೇಳಿದರು.

"ಎಂದಿನವರೆಗೆ ಈ ನೀರಾವರಿ ಕಾಮಗಾರಿಗಳನ್ನು ಮಾಡುವುದಕ್ಕೆ ಏರ್ಪಾಟು ಮಾಡುವುದಿಲ್ಲವೋ ಅಂದಿನವರೆಗೆ ಈ ಪ್ರಜೆಗಳಿಗೆ ಸುಖ ಮತ್ತು ಸಂತೋಷ ಉಂಟಾಗುವುದಿಲ್ಲ"

## ಜಲಾಶಯಗಳು, ಮೈನರ್ ಕೆರೆಗಳು ಮತ್ತು ರಸ್ತೆ ಕಾಮಗಾರಿ

**5ನೇ ಮಾರ್ಚ್ 1969**

ಸನ್ಮಾನ್ಯ ಸಭಾಪತಿಗಳೇ, ನಮ್ಮ ಮುಂದೆ ಇಟ್ಟಿರುವ ಡಿಮ್ಯಾಂಡ್‌ಗಳನ್ನು ಅನುಮೋದಿಸುತ್ತಾ ಸರ್ಕಾರದ ಗಮನಕ್ಕೆ ಕೆಲವು ವಿಷಯಗಳನ್ನು ತರಲು ಇಷ್ಟ ಪಡುತ್ತೇನೆ. ಈಗ ಶ್ರೀಮಾನ್ ಶಿವಪ್ಪನವರು ಕೆಲವು ವಿಚಾರಗಳನ್ನು ವಿರೋಧಿಸಿ ಮತನಾಡಿದರು. ದೇಶದಲ್ಲಿ ನಡೆದಿರತಕ್ಕಂಥ ಕಾಮಗಾರಿ ಕೆಲಸಗಳ ಬಗ್ಗೆ ಸಂತೋಷ ಪಡಬೇಕೇ ವಿನಃ ಟೀಕೆ ಮಾಡುವ ಹಾಗಿಲ್ಲ. ಅವರ ಮಾತನಾಡುವ ಶೈಲಿ ನೋಡಿದರೆ ಅವರು ಮೊದಲಿದ್ದ ಮಾರ್ಗವನ್ನೇ ಅನುಸರಿಸುತ್ತಿದ್ದಾರೆ. ಸರ್ಕಾರದವರು ಮಾಡಿರತಕ್ಕ ಕೆಲಸ ಕಾರ್ಯಗಳಿಗೆ ಅನುಕಂಪವನ್ನು ತೋರಿಸುವುದು ಸೂಕ್ತ. ಮೈಸೂರು ಸಂಸ್ಥಾನದಲ್ಲಿ ದೊಡ್ಡ ದೊಡ್ಡ ಜಲಾನಯನಗಳನ್ನು ಕೈಗೊಂಡಿದ್ದಾರೆ. ಇನ್ನೂ ಹೆಚ್ಚು ಆಗಬೇಕಾಗಿರುವ ಕೆಲಸ ಕಾರ್ಯಗಳು ಇವೆ. ಅದಕ್ಕೆ ಹೆಚ್ಚಿನ ದುಡ್ಡು ಅಗತ್ಯವಾಗಿರುವುದರಿಂದ ಮುಖ್ಯ ಮಂತ್ರಿಗಳು ಹೆಚ್ಚಾಗಿ ಒದಗಿಸುವುದಕ್ಕೆ ಪ್ರಯತ್ನ ಮಾಡಬೇಕೆಂದು ನಾನು ಹೇಳುತ್ತೇನೆ.

ಇನ್ನು ಜಲಮಂಡಲಿಗಳನ್ನು ಜಾಗ್ರತೆ ಕೈಗೊಳ್ಳದೇ ಇದ್ದ ಪಕ್ಷದಲ್ಲಿ ದೇಶದಲ್ಲಿ ಸರ್ವತೋಮುಖವಾದ ಬೆಳವಣಿಗೆ ಆಗುವುದಿಲ್ಲ. ಮೈಸೂರು ಸಂಸ್ಥಾನದಲ್ಲಿ ದೊಡ್ಡ ದೊಡ್ಡ ಪ್ರಾಜೆಕ್ಟ್‌ಗಳನ್ನು ತೆಗೆದುಕೊಂಡು ಆಹಾರ ಪದಾರ್ಥಗಳ ಅಭಾವವನ್ನು ನೀಗುವಂತೆ ಮಾಡಬೇಕು. ಆಹಾರ ಪದಾರ್ಥಗಳನ್ನು ಬೇರೆ ದೇಶದವರಿಂದ ತರಿಸದೆ ನಮ್ಮ ಕಾಲಮೇಲೆ ನಿಂತು ಆಹಾರ ಪದಾರ್ಥವನ್ನು ಒದಗಿಸುವಂಥಾ ಸ್ಟೇಜಿಗೆ ಬರಬೇಕು. ಇನ್ನು ಕಾಮಗಾರಿಗಳ ಬಗ್ಗೆ ಹೇಳುವುದಾದರೆ ಅನೇಕ

ಎಸ್ಟಿಮೇಟ್‌ಗಳು ಹಾಗೆಯೇ ನಿಂತಿವೆ. ಅದಕ್ಕೆ ಒಂದು ಅಭಿಪ್ರಾಯ ಕೊಡುತ್ತೇನೆ. ನನ್ನ ಕ್ಷೇತ್ರದ ವಿಚಾರವನ್ನು ತೆಗೆದುಕೊಳ್ಳುವುದಾದರೆ ಮಾಗಡಿ ತಾಲ್ಲೂಕಿನಲ್ಲಿ ತಾವರೆಕೆರೆ, ಕೆಂಚನಪುರ, ಚಿಕ್ಕೂರು, ಮಾಯಸಂದ್ರ, ದೊಡ್ಡೇರಿ ಪಿಕ್‌ಅಪ್ ಇವುಗಳನ್ನು ಮಾಡಬೇಕೆಂದು ಅನೇಕ ಸಾರಿ ಮನವಿ ಮಾಡಿಕೊಂಡಿದ್ದೇನೆ. ಇವುಗಳಿಗೆ ಸುಮಾರು 8–10 ಲಕ್ಷ ರೂಪಾಯಿ ಖರ್ಚು ಮಾಡಿದರೆ ಆ ಪ್ರಾಂತದ ರೈತರುಸ ಹೆಚ್ಚು ಆಹಾರ ಧಾನ್ಯಗಳನ್ನು ಬೆಳೆಯುವುದಕ್ಕೆ ಸರ್ಕಾರದವರು ಸಹಕಾರ ಮಾಡಬೇಕೆಂದು ಹೇಳುತ್ತೇನೆ. ಮಾಗಡಿ ತಾಲ್ಲೂಕಿನಲ್ಲಿ 200 ಮೈನರ್ ಕೆರೆಗಳು, 25 ಮೇಜರ್ ಕೆರೆಗಳು ಇವೆ. 10 ಲಕ್ಷ ರೂಪಾಯಿ ಒಳಪಟ್ಟಂಥ ಮೈನರ್ ಕೆರೆಗಳನ್ನು ತಾಲ್ಲೂಕು ಬೋರ್ಡಿಗೆ ವಹಿಸಿದ್ದೀರಿ. ತಾಲ್ಲೂಕು ಬೋರ್ಡಿಗೆ ಕೊಡತಕ್ಕಂಥ ಹಣ ಸಾಲದು. ಆದರಿಂಧ ಅವುಗಳ ಜೀರ್ಣೋದ್ಧಾರದ ಕೆಲಸಗಳು ಸರಿಯಾಗಿ ನಡೆಯುತ್ತಾ ಇಲ್ಲ. ಆದುದರಿಂದ ಹಿಂದೆ ಇದ್ದ ಪದ್ಧತಿಯಂತೆ ಪಿ.ಡಬ್ಲ್ಯು.ಡಿ. ಇಲಾಖೆಗೆ ಸೇರಿಸುವುದು ನ್ಯಾಯವಾಗಿದೆ. ಪಿ.ಡಬ್ಲ್ಯು.ಡಿ ನಲ್ಲಿರುವಂತೆ ಸಬ್–ಓವರ್‌ಸೀಯರ್ ಆಗಲಿ, ಇಂಜಿನೀಯರ್ಸ್ ಆಗಲಿ ತಾಲ್ಲೂಕು ಬೋರ್ಡಿನಲ್ಲಿ ಇಲ್ಲ. ಆ ಪ್ರಾಂತದಲ್ಲಿ 8 ಎಕರೆ, 9 ಎಕರೆ, 10 ಎಕರೆ ಇರುವಂಥ ಜನರಿಗೆ ಈ ಕೆರೆಗಳನ್ನು ಜೀರ್ಣೋದ್ಧಾರ ಮಾಡದೆ ಇರುವುದರಿಂದ ಬಹಳ ಕಷ್ಟವಾಗಿದೆ. ಆದುದರಿಂದ ಹಿಂದೆ ಇದ್ದಂತೆ ಪಿ.ಡಬ್ಲ್ಯು.ಡಿ ಇಲಾಖೆಗೆ ಒಳಪಡಿಸಿ ಕಾಮಗಾರಿಗಳನ್ನು ಕೈಗೊಳ್ಳಬೇಕೆಂದು ಸರ್ಕಾರಕ್ಕೆ ಮನವಿ ಮಾಡಿಕೊಳ್ಳುತ್ತೇನೆ. ಎಂದಿನವರೆಗೆ ಈ ನೀರಾವರಿ ಕಾಮಗಾರಿಗಳನ್ನು ಮಾಡುವುದಕ್ಕೆ ಏರ್ಪಾಡು ಮಾಡುವುದಿಲ್ಲವೋ ಅಂದಿನವರೆಗೆ ಈ ಪ್ರಜೆಗಳಿಗೆ ಸುಖ ಮತ್ತು ಸಂತೋಷ ಉಂಟಾಗುವುದಿಲ್ಲ. ಇದೇ ರೀತಿ ಅನೇಕ ಕಾಮಗಾರಿಗಳು ಹಾಗೆಯೇ ಉಳಿದಿವೆ. ಈ ಮೈನರ್ ಕೆರೆಗಳನ್ನು ಪಿ.ಡಬ್ಲ್ಯು.ಡಿ. ಇಲಾಖೆ ಸೇರಿಸಿ, ಬೇಕಾದ್ದಂತ ಮೈನರ್ ಕೆರೆಗಳ ಎಸ್ಟಿಮೇಟನ್ನು ತಯಾರು ಮಾಡಿ ಕಾರ್ಯಗತ ಮಾಡಬೇಕು. ಗ್ರಾಮಾಂತರ ಪ್ರದೇಶದಲ್ಲಿರತಕ್ಕಂಥ ಬಯಲು ಪ್ರದೇಶದಲ್ಲಿ ದೊಡ್ಡ ದೊಡ್ಡ ಜಲಾಶಯಗಳು ಇಲ್ಲದೇ ಇರುವ ಕಡೆಗಳಲ್ಲಿ ಸಣ್ಣ ಸಣ್ಣ ಜಲಾಶಯಗಳನ್ನಾದರೂ ಮಾಡಿ ನೀರನ್ನು ಒದಗಿಸಬೇಕಾದ್ದು ಅತ್ಯಾವಶ್ಯಕ. ನನ್ನ ಕ್ಷೇತ್ರದಲ್ಲಿ ಹೇಳುವುದಾದರೆ 6 ಹೋಬಳಿಗಳಲ್ಲಿ 2 ಲಕ್ಷ ಜನಸಂಖ್ಯೆ ಇರುವ ಕಡೆ 13 ಸಾವಿರ ಎಕರೆ ತರಿ ಜಮೀನು ಇದೆ. ಆ ಪ್ರದೇಶದಲ್ಲಿ ಇಂತಹ ಕೆಲಸ ಮಾಡದೇ ಇದ್ದುದರಿಂದ ಆ ಪ್ರದೇಶದ ಜನರು ಉತ್ತಮ ಸ್ಥಿತಿಗೆ ಬರಲು ಕಷ್ಟವಾಗಿದೆ. ಮಾಗಡಿ ತಾಲ್ಲೂಕು ತಿಪ್ಪಗೊಂಡನಹಳ್ಳಿ

ಜಲಾಶಯದ ಕಾರ್ಯವನ್ನು 35 ವರ್ಷದಿಂದಲೂ ನೋಡುತ್ತಿದ್ದೇನೆ. ಇಂದಿನವರೆಗೂ ಅಲ್ಲಿ ಪಿಕ್ ಅಪ್‌ಗಳನ್ನು ಮಾಡತಕ್ಕಂಥ ಕಾರ್ಯ ಹಾಗೆಯೇ ನಿಂತಿವೆ ಏತಕ್ಕೆಂದರೆ, ತಿಪ್ಪಗೊಂಡನಹಳ್ಳಿ ಜಲಾಶಯದಿಂದ ಬರತಕ್ಕಂಥ ನೀರನ್ನು ಯೋಜನೆಗಳಿಗೆ ಕೊಟ್ಟರೆ ಅಪಾಯವಾಗುತ್ತದೆ ಎಂದು ಇಲಾಖೆಯವರು ಯಾವ ವಿಧವಾದ ಕಾರ್ಯವನ್ನು ಕೈಗೊಂಡಿಲ್ಲ. ಅದನ್ನು ಕೈಗೊಳ್ಳಬೇಕಾದರೆ ಕಾವೇರಿ ನೀರಿನ ಸರಬರಾಜಿನ ಯೋಜನೆಯನ್ನು ಕೈಗೊಳ್ಳಬೇಕಾಗುತ್ತದೆ ಆ ಕೆಲಸವೂ ಸಹ 3 ವರ್ಷದಿಂದಲೂ ಹಾಗೆಯೇ ನಿಂತಿರುವುದರಿಂದ ಅನ್ನದ ಅಭಾವ ಮುಂದುವರೆಯುತ್ತಾ ಇದೆ. ಅದನ್ನು ತೆಗೆದುಕೊಂಡಿದ್ದರೆ ತಾಲ್ಲೂಕಿನ ತಿಪ್ಪೇಗೌಡನಹಳ್ಳಿ ಜಲಾನಯನಕ್ಕೂ ನೀರನ್ನು ಒದಗಿಸಿ ಅಲ್ಲಿನ ರೈತರನ್ನು ಮುಂದುವರಿಸುವುದಕ್ಕೆ ಅವಕಾಶವಾಗುತ್ತಿತ್ತು. ಆದುದರಿಂದ ಈ ತಾಲ್ಲೂಕಿನಲ್ಲಿ ಎಸ್ಟಿಮೇಟ್ ಆಗಿ ನಿಂತಿರತಕ್ಕ ಕೆರೆಗಳ ಬಗ್ಗೆ ಇಲಾಖೆಯವರು ಹೆಚ್ಚು ಗಮನಕೊಟ್ಟು ಸಂಬಂಧಪಟ್ಟ ಮಂತ್ರಿಗಳು ತೀವ್ರ ಕ್ರಮ ತೆಗೆದುಕೊಳ್ಳಬೇಕಾದ್ದು ಅಗತ್ಯ ಎಂದು ಹೇಳುತ್ತೇನೆ. ಈ ಪಿಕಪ್‌ಗಳ ಕೆಲಸ ಬಿಸಿಲು ಕಾಲದಲ್ಲಿ ಆಗುವುದಿಲ್ಲ. ಡಿಸೆಂಬರ್‌ನಿಂದ ಮೇ ಅಂತ್ಯದವರೆಗೆ ಕೆಲಸ ಮಾಡಲು ಸಾಧ್ಯ. ಅಲ್ಲಿನವರೆಗೆ ಇಲಾಖೆಯವರು ಹಣವನ್ನು ಒದಗಿಸಿ ಸಂಬಂಧಪಟ್ಟ ಮಂತ್ರಿಗಳು ಆ ಕಾರ್ಯವನ್ನು ನಿರ್ವಹಿಸುವಂತೆ ನೋಡಬೇಕಾದುದು ಅವರ ಕರ್ತವ್ಯ ಎಂದು ಹೇಳುತ್ತೇನೆ. ಮುಖ್ಯವಾಗಿ ಅಸಿಸ್ಟೆಂಟ್ ಇಂಜಿನಿಯರ್ ಮತ್ತು ಎಕ್ಸಿಕ್ಯೂಟೀವ್ ಇಂಜಿನೀಯರ್ ಈ ಕೆಲಸಗಳನ್ನು ತೆಗೆದುಕೊಂಡು ಮುಗಿಸುವಂತೆ ಅಪ್ಪಣೆ ಮಾಡಬೇಕು. ಉದಾಹರಣೆಗೆ ಹೇಳುವುದಾದರೆ ಶ್ರೀಮಾನ್ ಚನ್ನಬಸಪ್ಪನವರ ಕಾಲದಲ್ಲಿ ಕೆಲವು ರಸ್ತೆಗಳನ್ನು ಮಾಡಿದರು. ಸರ್ಕಾರಕ್ಕೆ ಸುಮಾರು 8 ಕೋಟಿ ರೂಪಾಯಿಗಳಷ್ಟು ಖರ್ಚು ಆಯಿತು. ಇವೊತ್ತು ಹೋಗಿ ನೋಡಿದರೆ ಅವೆಲ್ಲಾ ಹಾಳಾಗಿ ಬಿದ್ದಿವೆ. ಆದುದರಿಂದ ಅವರುಗಳು ಹೆಚ್ಚಿನ ಗಮನ ಕೊಡಬೇಕು. ಯಾವಾಗಲೂ ಸರ್ಕಾರದವರು ಒಂದು ಸಂಪ್ರದಾಯವನ್ನು ಅನುಸರಿಸಿ ಕೆರೆಗಳ ರಿಪೇರಿ ಮಾಡುವುದು, ಪಿಕ್‌ಅಪ್‌ಗಳನ್ನು ಮಾಡಿಸುವುದು, ರಸ್ತೆಗಳನ್ನು ದುರಸ್ತು ಮಾಡಿಸುವುದು ಇವುಗಳ ಕಡೆ ಸರ್ಕಾರದವರು ಹೆಚ್ಚಿನ ಗಮನ ಕೊಡಬೇಕು. ದೊಡ್ಡ ಮನಸ್ಸು ಮಾಡಿ ಅನೇಕ ರಸ್ತೆಗಳನ್ನು ಉತ್ತಮ ರಸ್ತೆಗಳನ್ನಾಗಿ ಮಾಡಿದ್ದಾರೆ. ಬೆಂಗಳೂರಿನಿಂದ ಬೆಳಗಾಂಗೆ ಹೋಗಬೇಕಾದ ಭಾಗದಲ್ಲಿ ಲಾರಿಗಳ ಸಂಚಾರ ಹೆಚ್ಚಿದೆ. ಹೀಗೆ ಲಾರಿ, ಕಾರು, ಟ್ಯಾಕ್ಸಿಗಳ ಸಂಚಾರ ಹೆಚ್ಚಿರುವುದರಿಂದ ದಿನವಹಿ ಅಕ್ಸಿಡೆಂಟ್ ಆಗಿ

ಸಾಯುವ ಪ್ರಸಂಗ ವರದಿ ಸರ್ಕಾರಕ್ಕೆ ಬರುತ್ತಾ ಇದೆ. ಇದಕ್ಕೆ ಕಾರಣ ಪ್ರಾಯಶಃ ಪ್ರಯಾಣ ಮಾಡುವವರ ಸಂಖ್ಯೆ ಜಾಸ್ತಿ ಮತ್ತು ಎಲ್ಲ ಸಾಮಾನುಗಳೂ ಲಾರಿಗಳ ಮೂಲಕವೇ ಹೋಗಬೇಕಾಗಿರುವುದು. ಲಾರಿಗಳವರು ಬೆಂಗಳೂರಿನಿಂದ ಬೆಳಗಾಂಗೆ ಹೋಗಬೇಕಾಗಿದ್ದರೆ ಯಾರಿಗೂ ದಾರಿ ಬಿಡದೆ ಮಧ್ಯೆ ರಸ್ತೆಯಲ್ಲಿ ಹೋಗುತ್ತಿರುತ್ತಾರೆ. ಆದ್ದರಿಂದ ಬೆಂಗಳೂರು-ಬೆಳಗಾಂ ರಸ್ತೆಯನ್ನು ಡಬಲ್ ರೋಡ್ ಮಾಡಬೇಕು. ಅದೇ ರೀತಿಯಲ್ಲಿ ಬೆಂಗಳೂರು-ಮಂಗಳೂರು ಮಾರ್ಗವನ್ನು ಡಬಲ್ ರೋಡ್ ಮಾಡಬೇಕು. ಹೀಗೆ ಮಾಡಿ ಜನಗಳಿಗೆ ಇರುವ ಪ್ರಾಣಾಪಾಯವನ್ನು ತಪ್ಪಿಸಿ ವಾಹನಗಳ ಓಡಾಟಕ್ಕೂ ಅನುಕೂಲ ಮಾಡಬೇಕು.

ಶರಾವತಿಯಿಂದ ವಿದ್ಯುಚ್ಛಕ್ತಿ ಉತ್ಪಾದನೆ ಜಾಸ್ತಿಯಾಗುತ್ತಿದ್ದು ಅದರಿಂದ ದೇಶಕ್ಕೆ ತುಂಬ ಅನುಕೂಲವಾಗಿದೆ. ಆದರೆ ಇಲಾಖೆಯಲ್ಲಿ ವಿದ್ಯುತ್ತನ್ನು ಒದಗಿಸಲುಬೇಕಾದ ಕಂಬ ತಂತಿ ಮುಂತಾದ ಸಾಮಾನುಗಳಿಲ್ಲದೆ ಜನಗಳಿಗೆ ತೊಂದರೆಯಾಗಿದೆ. ಯಾವ ಕೆಲಸವನ್ನೂ ಅವರು ಕಾರ್ಯಗತ ಮಾಡುತ್ತಿಲ್ಲ. ಇದರ ಬಗ್ಗೆ ಸರ್ಕಾರದವರು ಗಮನ ಕೊಡಬೇಕೆಂದೂ ಕೇಳಿಕೊಳ್ಳುತ್ತೇನೆ. ಮದ್ರಾಸ್ ವಗೈರೆ ರಾಷ್ಟ್ರಗಳಿಗೆ ನಮ್ಮ ರಾಜ್ಯದಿಂದ ವಿದ್ಯುತ್ತನ್ನು ಕೊಡುತ್ತಿದ್ದಾರೆ. ಅದರಿಂದ ನಮಗೆ ಸ್ವಲ್ಪ ಹಣವೂ ಬರುತ್ತಿದೆ. ಅವರಿಗೆ ನಾವು ಮುಕ್ಕಟೆಯಾಗಿ ಕೊಡುತ್ತಿಲ್ಲ. ಆದರೂ ನಾವು ವಿದ್ಯುಚ್ಛಕ್ತಿಯ ಪ್ರಯೋಜನವನ್ನು ಹೆಚ್ಚಿನ ಮಟ್ಟದಲ್ಲಿ ಹೊಂದುವುದಕ್ಕೆ ಸರ್ಕಾರದವರು ಸಂಬಂಧಪಟ್ಟ ಇಲಾಖೆಯವರಿಗೆ ಒದಗಿಸಬೇಕಾದ ಕಂಬ, ತಂತಿ ಮುಂತಾದ ಸಾಮಾನುಗಳನ್ನು ಒದಗಿಸಿ ತನ್ಮೂಲಕ ರೈತನು ಹೆಚ್ಚು ಧಾನ್ಯ ಬೆಳೆದು ಪ್ರಗತಿ ಹೊಂದುವಂತೆ ಮಾಡಬೇಕೆಂದು ಹೇಳುತ್ತೇನೆ. ಎಲ್ಲೆಲ್ಲಿ ಸರ್ಕಾರದವರು ದೊಡ್ಡ ದೊಡ್ಡ ಜಲಾಶಯಗಳನ್ನು ನಿರ್ಮಾಣ ಮಾಡಿದ್ದಾರೆ ಅಲ್ಲಿ ನೀರಗಂಟಿಗಳನ್ನು ಸರ್ಕಾರದವರೇ ನೇಮಕ ಮಾಡಬೇಕು, ಇಲ್ಲದೆ ಇದ್ದರೆ ನೀರು ಬಳಕೆಯಲ್ಲಿ ಅನ್ಯಾಯವಾಗತಕ್ಕ ಸಂದರ್ಭವಿದೆ. ಹಿಂದೆ ರೈತರು ನೀರಗಂಟಿಗಳಿಗೆ ಧಾನ್ಯ ಕೊಡುತ್ತಿದ್ದರು. ಈಗ ಆ ಪದ್ಧತಿ ಹೋಗಿರುವುದರಿಂದ ನೀರು ಪೋಲಾಗುವುದನ್ನು ತಪ್ಪಿಸಲು ದೊಡ್ಡ ದೊಡ್ಡ ಜಲಾಶಯಗಳಿಗೆ ನೀರಗಂಟಿಗಳನ್ನು ನೇಮಕ ಮಾಡಿ ಬೇಸಿಗೆ ಕಾಲದಲ್ಲಿ ಮಳೆಗಾಲದಲ್ಲಿ ನೀರು ಕೊರತೆಯಾಗದಂತೆ ಬಿಡಲು ಅನುಕೂಲ ಮಾಡಿಕೊಡಬೇಕು. ಈ ವಿಷಯವನ್ನು ನಾನು ಅನೇಕ ಸಲ ಹೇಳಿದ್ದರೂ ಇನ್ನೂ ಕಾರ್ಯಗತವಾಗಿಲ್ಲ. ಅದನ್ನು ಮಾಡಿಸಿಕೊಡಬೇಕು.

ಎಲ್ಲೆಲ್ಲಿ ಸರ್ಕಾರ ರಸ್ತೆಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿದೆಯೋ ಆ ರಸ್ತೆಗಳನ್ನು ಉತ್ತಮ ಪಡಿಸುವುದಲ್ಲದೆ ಅಲ್ಲಲ್ಲಿ ಹೋಗಿರತಕ್ಕ ಸೇತುವೆಗಳನ್ನೂ ಉತ್ತಮಪಡಿಸಿ ಸಂಚಾರಕ್ಕೆ ಯೋಗ್ಯ ವಾಗಿರುವಂತೆ ಮಾಡಿಕೊಡಬೇಕು. ಬೆಂಗಳೂರು-ತುಮಕೂರು ರಸ್ತೆಯಲ್ಲಿ ದೊಡ್ಡೇರಿ ಬಳಿ ಒಂದು ಸೇತುವೆಯು ಬಹಳ ಅಪಾಯಕ್ಕೆ ಈಡಾಗಿದೆ. ಇಂಥವು ಸಂಸ್ಥಾನದಲ್ಲಿ ಅನೇಕ ಕಡೆ ಇರುತ್ತವೆ. ಸರ್ಕಾರದವರು ಹೊಸ ಕೆಲಸಗಳನ್ನು ತೆಗೆದುಕೊಳ್ಳತಕ್ಕ ಉದ್ದೇಶವಿದ್ದರೂ ಉಳಿದಿರತಕ್ಕ ಕೆಲಸಗಳನ್ನು ಪೂರೈಸುವುದಕ್ಕೆ ಪ್ರಯತ್ನ ಮಾಡಬೇಕು.

ನೀರಾವರಿ ವಿಚಾರದಲ್ಲಿ ಸರ್ಕಾರದವರು ತುಂಬ ಮಾನ್ಯತೆಯನ್ನು ಪಡೆದಿದ್ದಾರೆ. ಕೇಂದ್ರದ ನೀರಾವರಿ ಮಂತ್ರಿಗಳು ಹಿಂದೆ ಬಂದಿದ್ದಾಗ ಎರಡು ತಿಂಗಳಿನಲ್ಲಿ ಮಂಚನಬೆಲೆ ಯೋಜನೆಯನ್ನು ತೆಗೆದುಕೊಳ್ಳುತ್ತೇವೆಂದು ಹೇಳಿದರು. ತಹಲ್‌ವರೆಗೂ ಅವರು ಹೇಳಿದ್ದನ್ನು ನೆರವೇರಿಸಿಲ್ಲ, ಅದರ ಬಗ್ಗೆ ಆಸಕ್ತಿಯನ್ನು ತೋರಿಸಿಲ್ಲ. ಎಲ್ಲಿಯವರೆಗೆ ನಮ್ಮ ರಾಜ್ಯದಲ್ಲಿ ನೀರಾವರಿ ಕಾಮಗಾರಿಗಳು ಉಪಯುಕ್ತವಾಗಿ ಆಗಿ ದೊಡ್ಡ ಜಲಾಶಯಗಳಾಗಲೀ, ಸಣ್ಣ ಜಲಾಶಯಗಳಾಗಲೀ ಆಗುವುದಿಲ್ಲವೋ ಅಲ್ಲಿಯವರೆಗೆ ನಾವು ಆಹಾರಕ್ಕೆ ಬೇರೆಯವರನ್ನು ಅವಲಂಭಿಸಿ ಕೊಂಡಿರುವುದು ತಪ್ಪುವುದಿಲ್ಲ. ಸರ್ಕಾರದವರು ಎಷ್ಟು ಹಣವನ್ನು ಸಾಲ ಮಾಡಿದರೂ ಚಿಂತೆ ಇಲ್ಲ, ನೀರಾವರಿ ಯೋಜನೆಗಳನ್ನು ಮಾಡಿಕೊಡಬೇಕೆಂದು ಹೇಳುತ್ತೇನೆ.

ರಾಜ್ಯದಲ್ಲಿ ನಾಲ್ಕು ಸಾವಿರಕ್ಕಿಂತ ಹೆಚ್ಚು ಸಿವಿಲ್ ಇಂಜಿನಿಯರಿಂಗ್ ಡಿಪ್ಲೋಮಾ ಪಡೆದಿರುವವರು ನೌಕರಿ ಇಲ್ಲದೆ ಪರಿತಪಿಸುತ್ತಿದ್ದಾರೆ. ಇನ್ನು ಮೇಲಾದರೂ ಕೆಲವು ಕಾಲ ಸಂಬಂಧಪಟ್ಟ ಶಿಕ್ಷಣ ಕೊಡುವುದನ್ನು ನಿಲ್ಲಿಸಿ, ಉದ್ಯೋಗವಿಲ್ಲದೆ ಇರುವವರಿಗೆ ಬೇರೆ ಇಲಾಖೆಗಳಲ್ಲಿಯಾದರೂ ಕೆಲಸವನ್ನು ಕೊಟ್ಟು ಅವರ ನಿರುದ್ಯೋಗವನ್ನು ತಪ್ಪಿಸಬೇಕು.

ನೀರಾವರಿ ಯೋಜನೆಗಳ ವಿಷಯದಲ್ಲಿ ಆಸಕ್ತಿಯನ್ನು ವಹಿಸಿರುವ ನಮ್ಮ ಮುಖ್ಯಮಂತ್ರಿಗಳಿಗೆ ಇನ್ನೂ ಹೆಚ್ಚು ಆಸಕ್ತಿ ಬಂದು ದೇಶದ ಪ್ರಗತಿಯನ್ನು ಈಗ ಹೆಚ್ಚಿಸಿರುವುದರ ಜೊತೆಗೆ ಮತ್ತು ಹೆಚ್ಚಿಸಿ ದೇಶದ ಕಲ್ಯಾಣವನ್ನು ಮಾಡಿಕೊಡಬೇಕು ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

1753-10

# ರೆವಿನ್ಯೂ ಸಬ್‌ಡಿವಿಜನ್ ಆಫೀಸರುಗಳ ಅಗತ್ಯವಿಲ್ಲ

5ನೇ ಮಾರ್ಚ್ 1970

ಈ ದಿವಸ ನಮ್ಮ ಮುಂದೆ ಮಂಡಿಸಿರತಕ್ಕ ಆಯವ್ಯಯ ಪಟ್ಟಿಯನ್ನು ನಾನು ಅನುಮೋದಿಸುತ್ತ ಕೆಲವು ಕೊರತೆಗಳನ್ನು ತಮ್ಮ ಮುಂದೆ ಇಡಲು ಎದ್ದಿದ್ದೇನೆ. ಮೈಸೂರು ಸಂಸ್ಥಾನದಲ್ಲಿ ಪಂಚವಾರ್ಷಿಕ ಯೋಜನೆಗಳು ಆಗಿದ್ದರೂ ಅದರ ಪೂರ್ಣ ಪರಿಣಾಮವಾಗಿಲ್ಲ ಮೂರು ಯೋಜನೆಗಳು ಮುಗಿದು ನಾಲ್ಕನೆ ಯೋಜನೆ ಪ್ರಾರಂಭವಾಗಬೇಕಾಗಿದೆ. ಮೊದಲ ಮೂರು ಯೋಜನೆಗಳ ಕಾರ್ಯಕ್ರಮ ಪಟ್ಟಿಯನ್ನು ನಾವು ಪರಿಶೀಲನೆ ಮಾಡುವಾಗ ಅದಕ್ಕೋಸ್ಕರವಾಗಿ ವೆಚ್ಚವಾದಂಥ ಹಣ, ಅದರಿಂದ ಬಂದಂಥ ಲಾಭ ಇವನ್ನೆಲ್ಲ ಗಮನಿಸಿದರೆ ಯಾವ ಉದ್ದೇಶದಿಂದ ಸರ್ಕಾರ ಈ ಯೋಜನೆಗಳನ್ನು ಕಾರ್ಯಗತ ಮಾಡಿತೋ ಅದರ ಪ್ರಯೋಜನವನ್ನು ಪಡೆಯತಕ್ಕ ಜನತೆಗೆ ಸಂತೃಪ್ತಿಯಾಗಿಲ್ಲ. ಲಾಭವಾಗಿಲ್ಲ, ಯೋಜನೆಗಳನ್ನು ಮಾಡತಕ್ಕ ಸರ್ಕಾರ ವ್ಯಾಪ್ತಿ, ಅದರ ಪ್ರಯೋಜನ ಜನಗಳಿಗೆ ಲಾಭವಾಗಿದೆಯೋ ಇಲ್ಲವೋ ಎನ್ನುವದರ ಕಡೆಗೆ ಗಮನಿಸಬೇಕಾದ್ದು ಅತ್ಯಾವಶ್ಯಕ. ಮಹಾರಾಜರ ಕಾಲದಲ್ಲಿ ಸರ್ಕಾರದಲ್ಲಿ ಯಾವ ಪದ್ಧತಿ ಇತ್ತೊ ಆ ಪದ್ಧತಿಯನ್ನು ಮಾರ್ಪಾಟು ಮಾಡಿ ಕೆರೆಗಳನ್ನು ಕಟ್ಟುವುದಕ್ಕೆ, ಬಾವಿಗಳನ್ನು ತೋಡುವುದಕ್ಕೆ, ರಸ್ತೆಗಳನ್ನು ಮಾಡುವುದಕ್ಕೆ ಪ್ರತ್ಯೇಕ ಇಲಾಖೆಗಳನ್ನು ಮಾಡಿದ್ದಾರೆಯೇ ಹೊರತು ಸರ್ಕಾರದಿಂದ ಯಾವ ರೀತಿಯ ಪ್ರಯೋಜನ ಲಭ್ಯವಾಗಬೇಕಾಗಿತ್ತೋ ಅದು ತಹಲ್‌ವರೆಗೂ ಆಗಿಲ್ಲ. ಯೋಜನೆಗಳನ್ನು ಕಾರ್ಯಗತ ಮಾಡುವ ಶಕ್ತಿ ಕಡಿಮೆ ಇದ್ದರೆ, ಈಗಿರುವ ಪದ್ಧತಿಯನ್ನು ಬದಲಾವಣೆ ಮಾಡಿ ಆಯಾ ತಾಲ್ಲೂಕುಗಳಿಗೆ ಅದರ ರೂಪರೇಖೆಗಳನ್ನು ಬದಲಾಯಿಸುವುದರ ಮೂಲಕ, ಪೋಲಾಗತಕ್ಕ ಹಣವನ್ನು ಶೇಖರಿಸಿ ಕೆಲಸಕಾರ್ಯಗಳಿಗೆ ಉಪಯೋಗಿಸತಕ್ಕದು ನ್ಯಾಯವಾಗಿದೆ. ರೆವಿನ್ಯೂ ಸಬ್ ಡಿವಿಜನ್ ಆಫೀಸರುಗಳ ಅಗತ್ಯವಿಲ್ಲ, ಅದು ಬರೀ ಟಪ್ಪಾಲು ಆಫೀಸಾಗಿದೆ, ಸಂಸ್ಥಾನಾಮಳೆ ಅದನ್ನು ತೆಗೆದುಹಾಕಿ ಎಂದು ಅನೇಕ ಸಲ ಈ ವೇದಿಕೆಯಿಂದ ನಾನು ಮತ್ತು ನನ್ನ ಸ್ನೇಹಿತರ ನೇಕರು ಹೇಳಿದ್ದೇವೆ. ಇದರಿಂದ ಲಾಭ ಅಥವಾ ಪ್ರಯೋಜನ ಎಷ್ಟರ ಮಟ್ಟಿಗೆ ಆಗಿದೆ ಎನ್ನುವುದನ್ನು ಮಾನ್ಯ ರೆವಿನ್ಯೂ ಮಂತ್ರಿಗಳು ಪರಿಶೀಲನೆ ಮಾಡಿ ಇನ್ನು ಮುಂದಾದರೂ ಆ ಹುದ್ದೆಗಳನ್ನು ತೆಗೆದುಹಾಕಿ, ಅನಾವಶ್ಯಕವಾಗಿ ಕಾಗದ ಪತ್ರಗಳ ವಿಲೇವಾರಿಯಲ್ಲಿ ಆಗುತ್ತಿರುವ ವಿಳಂಬವನ್ನು ತಪ್ಪಿಸಬೇಕು. ಸರ್ಕಾರ ಈ ಬಗ್ಗೆ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದು ಹೇಳುತ್ತೇನೆ.

ಅದೇ ರೀತಿಯಲ್ಲಿ ಡಿವಿಜನಲ್ ಕಮಿಷನರ ಹುದ್ದೆಗಳ ವಿಷಯದಲ್ಲಿಯೂ ಹೋದ ಸಾರಿ ಕೂಡ ಹೇಳಿದೆವು. ಮೊದಲು ಇದ್ದ ಪದ್ಧತಿಯನ್ನು ಪುನಃ ಜಾರಿಗೆ ತರಬೇಕು, ಡಿವಿಜನಲ್ ಕಮಿಷನರ್ ವ್ಯಾಪ್ತಿಯಲ್ಲಿ ನಾಲ್ಕು ಅಥವಾ ಐದು ಜಿಲ್ಲೆಗಳಿರುತ್ತವೆ. ಅವರಿಗೆ ಕೊಡತಕ್ಕ ಹಣ ಸರಿಯಾಗಿ ವಿನಿಯೋಗವಾಗುವುದಿಲ್ಲ ಎನ್ನುವುದನ್ನು ನಾನು ಮನಗಂಡಿದ್ದೇನೆ. ನನ್ನ ಮಾನ್ಯ ಸ್ನೇಹಿತರು ಅನೇಕರು ಈ ಸಭೆಯಲ್ಲಿ ಈ ಬಗ್ಗೆ ಹೇಳಿರಬಹುದು ಎಂದು ಭಾವಿಸುತ್ತೇನೆ. ಇನ್ನು ಮೇಲಾದರೂ ಈಗಿರುವ ಡಿವಿಜಿನಲ್ ಕಮಿಷನರ್ ಆಫೀಸುಗಳನ್ನು ತೆಗೆದು ಹಾಕಿ ಮೊದಲು ಇದ್ದ ರೀತಿಯಲ್ಲಿ ಮಾಡಿದರೆ ಜನತೆಗೆ ಲಾಭವಾಗುತ್ತದೆ.

ಸ್ವಾಮಿ, ಯೋಜನೆಗಳನ್ನು ಮಾಡಿ ಅಧಿಕಾರಿಗಳ ಸಂಖ್ಯೆಯನ್ನು ಹೆಚ್ಚಿಸಿ ಸರ್ಕಾರಕ್ಕೆ ಅನಾವಶ್ಯಕವಾಗಿ ಹಣ ವೆಚ್ಚವಾಗುತ್ತಿದೆಯೇ ಹೊರತು ಕಾರ್ಯ ಮಾತ್ರ ಮೊದಲು ಇದ್ದ ಹಾಗೆಯೇ ಇದೆ. ನಾನು ಸುಮಾರು 30–40 ವರ್ಷಗಳಿಂದಲೂ ಶಾಸಕನಾಗಿ, ಪ್ರಜಾಪ್ರತಿನಿಧಿ ಸಭೆಯ ಸದಸ್ಯನಾಗಿ, ಕೆಲಸ– ಮಾಡಿ ಜನತೆಯ ಜೊತೆಗೆ ಮತ್ತು ಸರ್ಕಾರದಿಂದ ಪ್ರಯೋಜನವಾಗತಕ್ಕ ಅನೇಕ ಇಲಾಖೆಗಳ ಜೊತೆಯಲ್ಲಿ ಇದ್ದು, ಅದರ ಲಾಭ ಜನತೆಗೆ, ಆಗಬೇಕು ಎನ್ನುವ ಉದ್ದೇಶ ಪ್ರಯತ್ನ ಮಾಡಿದರೂ, ಸರ್ಕಾರ ಎಷ್ಟು ಕಷ್ಟ ಪಟ್ಟರೂ ಲಾಭ ಮಾತ್ರ ಜನತೆಗೆ ಆಗಿಲ್ಲ. ಡಿವಿಜಿನಲ್ ಕಮಿಷನರ ಹುದ್ದೆ, ಸಬ್ ಡಿವಿಜಿನಲ್ ಕಮಿಷನರ ಹುದ್ದೆ ಮತ್ತು ರಾಷ್ಟ್ರೀಯ ವಿಸ್ತರಣಾ ಯೋಜನೆ ಎಂದು ಏನು ಮಾಡಿದ್ದಾರೆ ಅದನ್ನು ತೆಗೆದು ಹಾಕಬೇಕೆಂದು ಹೇಳಿದ್ದರೂ ಅವೆಲ್ಲ ಹಾಗೆಯೇ ಉಳಿದಿವೆ. ಬಾವಿ ತೋಡತಕ್ಕ ಕೆಲಸ, ರಸ್ತೆ ಮಾಡಿಸತಕ್ಕ ಕೆಲಸ ಇಂಥವನ್ನೆಲ್ಲ ತಾಲ್ಲೂಕು ಬೋರ್ಡಿಗೆ ಒಪ್ಪಿಸಿದ್ದಾರೆ. ಹೀಗಿರುವಾಗ ರಾಷ್ಟ್ರೀಯ ವಿಸ್ತರಣಾ ಯೋಜನೆಯಿಂದ ಆಗಬೇಕಾದ ಕಾರ್ಯಗಳು ಯಾವುವು, ಅದರ ಬಗ್ಗೆ ಎಷ್ಟು ಹಣ ಖರ್ಚಾಗಿದೆ, ಏನೇನು ಕೆಲಸ ಕಾರ್ಯಗಳಾಗಿವೆ ಎನ್ನುವುದನ್ನು ನೋಡುವುದಾದರೆ ಖರ್ಚು ಮಾತ್ರ ಹೆಚ್ಚಾಗಿ ಆಗಿದೆಯೇ ಹೊರತು ಜನತೆಗೆ ಲಾಭ ಮಾತ್ರ ಆಗಿಲ್ಲ ಎಂದು ಹೇಳಬಯಸುತ್ತೇನೆ. ಇಂಥಾ ಅನಾವಶ್ಯಕವಾದ ಇಲಾಖೆಗಳನ್ನು ಮತ್ತು ನೌಕರರನ್ನು ಇಟ್ಟುಕೊಂಡು ಸಂಬಳ ರೂಪದಲ್ಲಿ ವಿಶೇಷವಾಗಿ ಹಣವನ್ನು ಖರ್ಚುಮಾಡುವುದರಲ್ಲಿ ನಾವು ಮಗ್ನರಾಗಿದ್ದೇವೆ. ಇನ್ನಾದರೂ ಸರ್ಕಾರದವರು ಇದನ್ನೆಲ್ಲಾ ಕೂಲಂಕುಷವಾಗಿ ವಿಚಾರ ಮಾಡಿ ಅನಾವಶ್ಯಕವಾದ ಇಲಾಖೆಗಳ ಹಾಗೂ ನೌಕರರ ಸಂಖ್ಯೆಗಳನ್ನು ರದ್ದು ಮಾಡಬೇಕೆಂದು ಹೇಳುತ್ತೇನೆ.

# ಉನ್ನತ ಶಿಕ್ಷಣ

ಇನ್ನು ವಿದ್ಯಾ ಇಲಾಖೆಗೆ ಬಂದರೆ ಇಂಜಿನಿಯರಿಂಗ್ ವಿದ್ಯಾಭ್ಯಾಸ ಮಾಡಿ ಪದವೀಧರರಾಗಿರುವಂಥ 4–5 ಸಾವಿರ ಜನರು ಕೆಲಸಗಳಿಲ್ಲದೆ ದೇಶದಲ್ಲಿ ಅಲೆಯುತ್ತಿದ್ದಾರೆ, ಅವರಿಗೆ ಮಾಡುವುದಕ್ಕೆ ಮನೆಯಲ್ಲೂ ಕೆಲಸವಿಲ್ಲ, ಸರ್ಕಾರದವರಲ್ಲೂ ಕೆಲಸಗಳಿಲ್ಲ. ಅಂದರೆ ಅವರು ಆ ಓದನ್ನು ಓದಿ ಏನು ಮಾಡಬೇಕು? ಅವರ ವಿದ್ಯಾಭ್ಯಾಸದ ಬಗ್ಗೆ ಅವರ ತಂದೆ ತಾಯಿಗಳು ಮಾಡಿದ ಸಾಲ ಸೋಲಗಳನ್ನು ಇವರು ತೀರಿಸುವುದಾದರೂ ಹೇಗೆ? ಇವರು ಬಹಳ ಕಷ್ಟದ ಪರಿಸ್ಥಿತಿಯಲ್ಲಿದ್ದಾರೆಂದು ನಮ್ಮ ಮಾನ್ಯ ಮುಖ್ಯಮಂತ್ರಿಗಳು ಕೂಡ ಹೇಳಿದ್ದಾರೆ. ಆದುದರಿಂದ ನಮ್ಮ ವಿದ್ಯಾಭ್ಯಾಸ ಪದ್ಧತಿಯನ್ನು ನಮ್ಮ ದೇಶಕ್ಕೆ ಅನುಕೂಲವಾಗತಕ್ಕ ರೀತಿಯಲ್ಲಿ ಮಾರ್ಪಾಡನ್ನು ಮಾಡಬೇಕಾದ್ದು ಅಗತ್ಯ. ನಮ್ಮ ದೇಶ ಮುಖ್ಯವಾಗಿ ವ್ಯವಸಾಯ ಪ್ರಧಾನವಾದದ್ದು ನಮ್ಮ ದೇಶದ ಮಕ್ಕಳಿಗೆ ಈ ವಿಷಯದಲ್ಲಿ ಹೆಚ್ಚಿನ ಪರಿಶ್ರಮವಿರಬೇಕಾದ್ದು ಅಗತ್ಯ. ಆದುದರಿಂದ ಸರ್ಕಾರದವರು ನಮ್ಮ ದೇಶದ ಮಕ್ಕಳಿಗೆ ಯಾವ ಭೂಮಿಗೆ ಯಾವ ಗೊಬ್ಬರಬೇಕು, ಯಾವ ಬೆಳೆಯನ್ನು ಯಾವ ಭೂಮಿಯಲ್ಲಿ ಇಟ್ಟರೆ ಉತ್ತಮ ಬೆಳೆಯಾಗುತ್ತದೆ. ಎಂಬ ವಿದ್ಯೆಯನ್ನು ಬೋಧಿಸಬೇಕಾದ್ದು ಅಗತ್ಯ ಮತ್ತು ಸಾಧುವಾದದ್ದು.

ಇನ್ನು ಮೆಡಿಕಲ್ ವಿದ್ಯಾಭ್ಯಾಸಕ್ಕೆ ಬಂದರೆ ಇಲ್ಲಿ ಸರ್ಕಾರದವರು ಕೊಡತಕ್ಕ ಉಚಿತ ವಿದ್ಯಾಭ್ಯಾಸವನ್ನು ಪಡೆದು ವೈದ್ಯ ಪರೀಕ್ಷೆಗಳಲ್ಲಿ ಉತ್ತೀರ್ಣರಾದ ಕೂಡಲೆ ಪರದೇಶಕ್ಕೆ ಹೋಗಿ ಅಲ್ಲಿ ಹೆಚ್ಚಿನ ವ್ಯಾಸಂಗ ಮಾಡಿ ಅವರು ತಮ್ಮ ಆದಾಯವನ್ನು ಹೆಚ್ಚು ಮಾಡಿಕೊಳ್ಳುವ ಉದ್ದೇಶದಿಂದ ಪರದೇಶಗಳಲ್ಲೇ ಉಳಿದು ಬಿಡುತ್ತಾರೆ. ಇದರಿಂದ ರಾಜ್ಯಕ್ಕೆ ಬಹಳ ನಷ್ಟವಾಗುತ್ತಿದೆ. ಇಲ್ಲಿ ಸರ್ಕಾರದವರು ಗ್ರಾಮಾಂತರ ಪ್ರದೇಶಗಳಿಗೆ ಹೆಚ್ಚು ವೈದ್ಯಕೀಯ ಸೌಲಭ್ಯಗಳನ್ನು ಒದಗಿಸಿದಾಗ್ಯೂ ಅಲ್ಲಿ ಕೆಲಸ ಮಾಡುವುದಕ್ಕೆ ಡಾಕ್ಟರುಗಳೇ ಇರುವುದಿಲ್ಲ. ಇಂಥ ತೊಂದರೆಗಳನ್ನು ನಾವು ಸರ್ಕಾರದವರ ಗಮನಕ್ಕೆ ಪದೇ ಪದೇ ತರುತ್ತಲೇ ಇದ್ದೇವೆ. ಆದ್ದರಿಂದ ಸರ್ಕಾರದವರು ಈ ವಿಚಾರದಲ್ಲಿ ತುಂಬಾ ಎಚ್ಚರಿಕೆಯನ್ನು ವಹಿಸಬೇಕೆಂದು ಸೂಚನೆ ಮಾಡುತ್ತೇನೆ.

# ನ್ಯಾಯಾಲಯ ಬೇಕು

ಇನ್ನು ರಾಜ್ಯದಲ್ಲಿ ಕೋರ್ಟುಗಳ ವಿಚಾರಕ್ಕೆ ಬಂದರೆ ನಾವು ಮಾಗಡಿ ತಾಲ್ಲೂಕಿಗೆ ಒಂದು ಮುನಿಸಿಫ್ ಮ್ಯಾಜಿಸ್ಟ್ರೇಟರ ಕೋರ್ಟ್ ಬೇಕೆಂದು ಬಹಳ ಹಿಂದಿನಿಂದಲೂ ಸರ್ಕಾರಕ್ಕೆ ಒತ್ತಾಯ ಮಾಡುತ್ತಲೇ ಬಂದಿದ್ದೇವೆ. ಇದೇ ಸಂಬಂಧದಲ್ಲಿ ಹಿಂದೆ ಸರ್ಕಾರದವರು ಜಸ್ಟೀಸ್ ಮಲ್ಲಪ್ಪ ಕಮಿಟಿಯೊಂದನ್ನು ಮಾಡಿದ್ದರು. ಅದು ಸರ್ಕಾರಕ್ಕೆ ತನ್ನ ವರದಿಯನ್ನು ಒಪ್ಪಿಸಿ ಬಹಳ ಕಾಲವಾಯಿತು. ಆದರೆ ಆ ವರದಿಯ ಪ್ರಕಾರ ಮಾಗಡಿಗಿನ್ನೂ ಕೋರ್ಟು ಬರಲಿಲ್ಲ. ಆದರೆ ಅದರ ಪಕ್ಕದ ಕುಣಿಗಲ್ ತಾಲ್ಲೂಕಿಗೆ ಅಲ್ಲಿ ಅದರ ಅಗತ್ಯ ಇತ್ತೇ ಇಲ್ಲವೇ ಎಂಬುದನ್ನೂ ಕೂಡ ವಿಚಾರ ಮಾಡದೆ ಅಲ್ಲಿಗೆ ಕೋರ್ಟನ್ನು ಮಂಜೂರು ಮಾಡಿದ್ದಾರೆ. ಆ ವರದಿಯಲ್ಲಿ ನಿರ್ದಿಷ್ಟವಾಗಿ ಇಂಥಿಂಥ ಕಡೆಗಳಲ್ಲೇ ಕೋರ್ಟುಗಳನ್ನು ಸ್ಥಾಪಿಸಬೇಕೆಂದು ಹೇಳಿದ್ದರೂ ಸರ್ಕಾರದವರು ಅದಕ್ಕೆ ಗಮನ ಕೊಡದೆ ಕೆಲಸ ಮಾಡುತ್ತಿದ್ದಾರೆ. ಮಾಗಡಿ ತಾಲ್ಲೂಕಿನಲ್ಲಿ 2 ಲಕ್ಷ ಜನಸಂಖ್ಯೆ ಇದೆ. ಅಲ್ಲಿ 2 ಚುನಾವಣಾ ಕ್ಷೇತ್ರಗಳಿವೆ. ಆದರೆ ಈಗ ಆ ಮಾಗಡಿಯ ಜನರು ಕೆಲವು ಕೇಸುಗಳಿಗೆ ರಾಮನಗರಕ್ಕೂ ಇನ್ನು ಒಂದು ಬಗೆಯ ಕೇಸುಗಳಿಗೆ ಅಂದರೆ ಸಿವಿಲ್ ಸ್ವಭಾವದ ಕೇಸುಗಳಿಗೆ ಬೆಂಗಳೂರಿಗೂ ಬರಬೇಕಾಗಿದೆ. ಇದರಿಂದ ರೈತರಿಗೆ ಬಹಳ ತೊಂದರೆಯಾಗಿದೆ. ಸರ್ಕಾರದವರು ಈ ವಿಚಾರವನ್ನು ಪರಿಶೀಲನೆ ಮಾಡಿ ಮಾಗಡಿ ಜನರ ಬಹುದಿನಗಳ ಬೇಡಿಕೆಯನ್ನು ಈಡೇರಿಸುತ್ತಾರೆಂದು ನಾನು ನಂಬಿದ್ದೇನೆ.

ಅಧ್ಯಕ್ಷರು – ನಿಮ್ಮ ವೇಳೆ ಮುಗಿಯುತ್ತಾ ಬಂದಿದೆ . . . .

**ಶ್ರೀ ಸೋಲೂರು ಸಿದ್ದಪ್ಪ** : ನಾನು ಇಲ್ಲಿ ಕಳೆದ 12 ದಿನಗಳಿಂದಲೂ ತಪಸ್ಸನ್ನು ಮಾಡುತ್ತ ಕುಳಿತಿದ್ದೇನೆ. ನನಗೆ ಸಾಕಷ್ಟು ಅವಕಾಶವನ್ನು ತಾವು ಕೊಡಬೇಕು ಇಲ್ಲದಿದ್ದರೆ ನನ್ನ ತಪಸ್ಸಿನ ಫಲ ತಮಗೆ ಪ್ರೀತಿಯಾಗಬೇಕು.

ಈ ಕೋರ್ಟಿನ ವಿಚಾರದಲ್ಲಿ ಅನ್ಯಾಯ ಮಾಡಿದಂತೆ ಮಾರ್ಕೆಟಿಂಗ್ ವಿಚಾರದಲ್ಲೂ ಹಾಗೇ ಮಾಡಿದ್ದಾರೆ. ಮಾಗಡಿಗೆ ಬರಬೇಕಾಗಿದ್ದ ರೆಗ್ಯುಲೇಟೆಡ್ ಮಾರ್ಕೆಟ್ಟನ್ನು ಮತ್ತೆ ಕುಣಿಗಲ್‌ಗೇ ಕೊಟ್ಟಿದ್ದಾರೆ. ಅದೇನೂ ಒಂದು ದೊಡ್ಡ ವ್ಯಾಪಾರ ಕೇಂದ್ರವಲ್ಲ. ನಮ್ಮ ತಾಲ್ಲೂಕ್ ಬೆಂಗಳೂರು ತಾಲ್ಲೂಕಿಗೆ ಬಹಳ

ಸಮೀಪದಲ್ಲಿದೆ. ಬೆಂಗಳೂರು ನಗರಕ್ಕೆ 10 ಮೈಲಿ ಫಾಸಲೆಯಲ್ಲೇ ನಮ್ಮ ತಾಲ್ಲೂಕ್ ಗಡೀ ಪ್ರಾರಂಭವಾಗುತ್ತದೆ. ಆದ್ದರಿಂದ ಈ ವಿಚಾರದಲ್ಲೂ ಸರ್ಕಾರದವರು ಪುನರ್ವಿಮರ್ಶೆ ಮಾಡಬೇಕೆಂದು ಅರಿಕೆ ಮಾಡಿಕೊಳ್ಳುತ್ತೇನೆ. ನಾನು ಈ ವಿಚಾರದಲ್ಲಿ ಮಾನ್ಯ ಮಂತ್ರಿಗಳಿಗೆ ಪತ್ರ ಬರೆದಿದ್ದೆ. ಅದಕ್ಕೆ ಉತ್ತರವೇ ಬರಲಿಲ್ಲ.

ಇನ್ನು ಗ್ರಾಮಾಂತರ ಪ್ರದೇಶಕ್ಕೆ ವಿದ್ಯಾಭ್ಯಾಸದ ಬಗ್ಗೆ ಒದಗಿಸಿರತಕ್ಕ ಹಣ ಸಾಲದು. ಅನೇಕ ಗ್ರಾಮಗಳಲ್ಲಿ ಶಾಲಾಕಟ್ಟಡಗಳಿಲ್ಲ. ಆದ್ದರಿಂದ ಹೆಚ್ಚಿನ ಹಣವನ್ನು ಒದಗಿಸಬೇಕು.

ಇನ್ನು ಗ್ರಾಮಾಂತರ ಪ್ರದೇಶದ ಜನರಿಗೆ ಕುಡಿಯುವ ನೀರಿಗೂ ಬಹಳ ತೊಂದರೆ ಇದೆ. ಈ ತೊಂದರೆಯನ್ನು ಬರುವ ವರ್ಷದೊಳಗಾಗಿ ಪರಿಹರಿಸುತ್ತೇವೆಂದು ಮಾನ್ಯ ಮುಖ್ಯ ಮಂತ್ರಿಗಳು ಅಪ್ಪಣೆ ಕೊಡಿಸಿದ್ದಾರೆ. ಇದನ್ನು ಬೇಗ ಕಾರ್ಯಗತ ಮಾಡಬೇಕು. ನನಗೆ ಇಷ್ಟು ಮಾತನಾಡುವುದಕ್ಕೆ ಅವಕಾಶ ಮಾಡಿಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.
**ಜೈ ಹಿಂದ್.**

## ನೀರಾವರಿ ಮತ್ತು ರಸ್ತೆಗಳು

**16ನೇ ಮಾರ್ಚ್ 1970**

ಶಾಸಕರ ಘನತೆ ಗೌರವಗಳು ಉಳಿಯಬೇಕಾದರೆ ಸರಕಾರದವರು ಅವರು ಹೇಳುವ ಕೆಲಸವನ್ನು ಮಾಡಿ ಕೊಡಬೇಕು. _ _ _ ಇಲ್ಲದಿದ್ದರೆ ಅವರಿಗೆ ಬೆಲೆ ಇರುವುದಿಲ್ಲ.

ಸನ್ಮಾನ್ಯ ಸಭಾಧ್ಯಕ್ಷರೇ, ಇಂದು ನಮ್ಮ ಮುಂದಿರುವ ಎರಡು ಬೇಡಿಕೆಗಳನ್ನು ಸ್ವಾಗತಿಸುತ್ತಾ ಕೆಲವು ವಿಷಯಗಳನ್ನು ಗಮನಕ್ಕೆ ತರುತ್ತೇನೆ. ಲೋಕೋಪಯೋಗಿ ಇಲಾಖೆಯವರು ದೊಡ್ಡ ದೊಡ್ಡ ಜಲಾಶಯಗಳು ಮತ್ತು ಸಣ್ಣ ಸಣ್ಣ ಜಲಾಶಯಗಳ ಬಗ್ಗೆ ಒಂದು ವ್ಯವಸ್ಥೆ ಮಾಡಿದ್ದಾರೆ. ಅದಕ್ಕೆ ಪಟ್ಟಿ ಮಾಡಿದ್ದಾರೆ. ಆದರೆ ಮನುಷ್ಯನಿಗೆ ಅತ್ಯಾವಶ್ಯಕವಾಗಿ ಬೇಕಾದ ನೀರಾವರಿ ಕಾರ್ಯ ಮಾಡುವಾಗ ಬಹಳ ಕಾಲದಿಂದಲೂ ದುಸ್ಥಿತಿಯಲ್ಲಿರುವ ಕೆರೆಗಳನ್ನು ಪಟ್ಟಿ ಮಾಡಿ ಅವುಗಳ ಕೆಲಸ ಪೂರ್ಣಮಾಡಿ ಅನಂತರ ದೊಡ್ಡ ದೊಡ್ಡ ಜಲಾಶಯಗಳ ಕೆಲಸ

ತೆಗೆದುಕೊಳ್ಳುವುದು ಬಡತನದ ದೃಷ್ಟಿಯಿಂದ ಉತ್ತಮವಾದ ಕೆಲಸ, ಇದರ ಬಗ್ಗೆ ಒದಗಿಸಬೇಕಾದ ಹಣ ಇನ್ನೂ ಸ್ವಲ್ಪ ಜಾಸ್ತಿಯಾಗಬೇಕಾಗಿತ್ತು. ನೀರಾವರಿ ವಿಚಾರದಲ್ಲಿ ಸುಮಾರು ಮೂರು ವರ್ಷಗಳಿಂದ ನೀರಾವರಿ ಕಾಮಗಾರಿಗಳಿಗೆ ಯಥೇಚ್ಛವಾಗಿ ಹಣ ಖರ್ಚು ಮಾಡಿ ಆಹಾರದ ಅಭಾವವನ್ನು ಹೋಗಲಾಡಿಸಲು ಪ್ರಯತ್ನ ಮಾಡಿದ್ದಾರೆ. ಇದು ತುಂಬಾ ಸಂತೋಷದ ವಿಚಾರ. ಸಣ್ಣ ಸಣ್ಣ ಕೆರೆಗಳು ಮತ್ತು ಪಿಕಪ್‌ಗಳು ಮುಂತಾದುವುಗಳ ಬಗ್ಗೆ ಹೆಚ್ಚು ಆದ್ಯತೆ ಕೊಡಬೇಕಾದ್ದು ಅವಶ್ಯಕ. ದೊಡ್ಡ ದೊಡ್ಡ ಜಲಾಶಯಗಳ ಕೆಲಸ ನಿಧಾನವಾಗಿ ಆಗತಕ್ಕದ್ದು, ಅದು ಬೇಡವೆಂದು ಹೇಳುವುದಿಲ್ಲ, ಅವಶ್ಯಕವಿರುವ ಕೆಲವು ಕೆಲಸಗಳ ಬಗ್ಗೆ ಬಹಳ ದಿವಸಗಳಿಂದ ಪಟ್ಟಿ ಮಾಡಿದ್ದರೂ ಕೂಡ ಅವನ್ನು ತೆಗೆದುಕೊಳ್ಳದೆ ಬೇರೆ ಬೇರೆ ಕಾರ್ಯಗಳನ್ನು ಮಾಡುವುದು ಸರಿಯಲ್ಲ. ಇದನ್ನು ಸರಕಾರದವರು ಗಮನಿಸಿ ಎಂಟು ಹತ್ತು ವರ್ಷಗಳಿಂದ ಮಳೆಯಿಂದ ಒಡೆದು ಹೋಗಿರುವ ಜಲಾಶಯಗಳನ್ನು ಮೊದಲು ಸರಿಪಡಿಸಬೇಕು. ಇದಕ್ಕಾಗಿ ಮಾಗಡಿ ತಾಲ್ಲೂಕಿನಲ್ಲಿ ಒಡೆದಿರುವ ಅನೇಕ ಜಲಾಶಯಗಳ ಬಗ್ಗೆ ಅಂಕಿ ಅಂಶ ನಾನು ಒದಗಿಸಿದ್ದರೂ ಆ ಬಗ್ಗೆ ಗಮನ ಕೊಟ್ಟಿಲ್ಲ. ಅಲ್ಲಿ ಸುಮಾರು ಏಳೆಂಟು ಕೆಲಸಗಳಾಗಬೇಕಾಗಿವೆ ಈ ಮನೆಯ ಒಬ್ಬ ಸದಸ್ಯ ತನ್ನ ಕ್ಷೇತ್ರದಲ್ಲಿ ಆಗಬೇಕಾಗಿರುವ ಕೆಲಸದ ಬಗ್ಗೆ ಸಲಹೆ ಮಾಡಿದರೂ ಕೂಡ ಅದನ್ನು ಕೈಕೊಳ್ಳದಿರುವುದರಿಂದ ತೊಂದರೆಯಾಗಿದೆ. ಸದಸ್ಯರ ಘನತೆ ಗೌರವಗಳು ಉಳಿಯಬೇಕಾದರೆ ಸರಕಾರದವರು ಅವರು ಹೇಳುವ ಕೆಲಸಗಳನ್ನು ಮಾಡಿ ಕೊಡಬೇಕು, ಇಲ್ಲದಿದ್ದರೆ ಅವರು ಚುನಾಯಿತರಾಗಿ ಬಂದಿರುವ ಕ್ಷೇತ್ರಗಳಲ್ಲಿ ಅವರಿಗೆ ಬೆಲೆ ಇರುವುದಿಲ್ಲ. ಆದುದರಿಂದ ಸದಸ್ಯರು ಹೇಳುವುದು ನ್ಯಾಯವಾಗಿದ್ದರೆ ಅದನ್ನು ತಕ್ಷಣ ಮಾಡಲು ಕ್ರಮ ಕೈಕೊಳ್ಳಬೇಕೆಂದು ಸಲಹೆ ಮಾಡುತ್ತೇನೆ.

ನೀರಾವರಿ ಬಗ್ಗೆ ವ್ಯವಸಾಯಗಾರರಿಗೆ ಶುಲ್ಕ ತೀರ ಜಾಸ್ತಿಯಾಗಿದೆ, ಕಾವೇರಿ ಜಲಾಶಯ ಮುಂತಾದ ಜಲಾಶಯಗಳ ಬಳಿ ಹಾಕಿರುವುದಕ್ಕೂ ಗ್ರಾಮಾಂತರಗಳಲ್ಲಿ ಹಾಕಿರುವುದಕ್ಕೂ ಹೋಲಿಕೆ ಮಾಡಿದರೆ ತುಂಬ ಅಂತರವಿದೆ. ಸರಕಾರದವರು ಈ ಅಂತರವನ್ನು ಗಮನಿಸಿ ಸಾಧ್ಯವಾದ ಮಟ್ಟಿಗೆ ಸಣ್ಣ ಸಣ್ಣ ಕೆರೆ, ಪಿಕಪ್, ಮುಂತಾದುವು ಗ್ರಾಮಾಂತರಗಳಲ್ಲೇ ಇವೆ ಅವಕ್ಕೆ ಈಗಿರುವ ಕಂದಾಯ ಕಡಿಮೆ ಮಾಡಬೇಕು.

ನೀರಾವರಿ ವಿಚಾರದಲ್ಲಿ ಪೂರ್ಣವಾಗಿ ಕೆಲಸಗಳಿಗೆ ಆದ್ಯತೆ ಕೊಡಬೇಕು. ರೈತ ಉಳಿಯ ಬೇಕಾದರೆ ಅವನಿಗೆ ಅನುಕೂಲತೆಗಳನ್ನು ಕಲ್ಪಿಸಬೇಕು, ನೀರಿನ ಸೌಲಭ್ಯ ಮುಖ್ಯವಾಗಿ ಮಾಡಿಕೊಡಬೇಕು. ದೊಡ್ಡ ದೊಡ್ಡ ಜಲಾಶಯಗಳನ್ನು ತೆಗೆದುಕೊಳ್ಳುವಂತೆ ದೇಶದ ಎಲ್ಲಾ ಭಾಗಗಳಲ್ಲೂ ಕೂಡ ಏರು ಪೇರಿಲ್ಲದೆ ಸಮಾನವಾಗಿ ಎಲ್ಲ ಜಿಲ್ಲೆಗಳವರಿಗೂ ಅನುಕೂಲವಾಗುವಂತೆ ಒಂದು ತತ್ವವನ್ನನುಸರಿಸಿ ಕೆಲಸ ಮಾಡುವುದು ಅತ್ಯಗತ್ಯ. ಮುಖ್ಯವಾಗಿ ವಿದ್ಯುಚ್ಛಕ್ತಿ ಮತ್ತು ನೀರಾವರಿ ಇಲಾಖೆಗಳು ಸಂಸ್ಥಾನಕ್ಕೆ ಬಹಳ ಉಪಯೋಗಕರವಾದವುಗಳು ಈಗ ಕರೆಂಟಿನ ವಿಚಾರದಲ್ಲಿ 150 ಕೋಟಿ ರೂಪಾಯಿ ಖರ್ಚು ಮಾಡಿ ದೇಶದಾದ್ಯಂತ ಅನುಕೂಲ ಮಾಡಿ ಹೊರದೇಶಗಳಿಗೂ ಕರೆಂಟನ್ನು ಒದಗಿಸಿಲಾಗಿದೆ. ಆದರೆ ರೈತರಿಗೆ ಪಂಪ್ ಸೆಟ್ಟುಗಳಿಗೆ ಮತ್ತು ನೀರಾವರಿಗೆ ಒದಗಿಸಿರುವ ಕರೆಂಟಿನ ದರ ಜಾಸ್ತಿ. ಅದೇ ಮದ್ರಾಸಿನವರು ಇನ್ನೂ ಕಡಿಮೆ ದರದಲ್ಲಿ ಒದಗಿಸುತ್ತಿದ್ದಾರೆ ಮೈಸೂರು ಸರಕಾರ ಶರಾವತಿ ಯೋಜನೆ ಮಾಡಿ ರೈತರಿಗೆ ಹೆಚ್ಚಿನ ಸೌಕರ್ಯ ಕಲ್ಪಿಸಿರುವುದು ಸಂತೋಷಕರವಾದುದು. ರೈತರಿಗೆ ಕೊಟ್ಟ ಮಾತಿನಂತೆ ಸರ್ಕಾರ ನಡೆದುಕೊಳ್ಳ ಬೇಕಾಗಿದೆ. ಮದ್ರಾಸ್ ರಾಜ್ಯದಲ್ಲಿ 8 ಪೈಸೆ ಪ್ರಕಾರ ಒಂದು ಯುನಿಟ್‌ಗೆ ಚಾಜ್ ಮಾಡುತ್ತಿರಬೇಕಾದರೆ ನಮ್ಮ ರಾಜ್ಯದಲ್ಲಿ 10 ಪೈಸೆ ತೆಗೆಕೊಳ್ಳುತ್ತಿದ್ದಾರೆ. ಇದು ನ್ಯಾಯವೇ ಎನ್ನುವದನ್ನು ಸರ್ಕಾರದವರು ಆಲೋಚನೆ ಮಾಡಿ, ಇದರಿಂದ ರೈತರಿಗೆ ಉಂಟಾಗಿರತಕ್ಕ ಅನಾನುಕೂಲವನ್ನು ಸರಿಪಡಿಸಿ ಉತ್ತಮ ರೀತಿಯಿಂದ ವ್ಯವಸಾಯವನ್ನು ಮಾಡುವುದಕ್ಕೆ ಅವಕಾಶವನ್ನು ಸರ್ಕಾರ ಕಲ್ಪಿಸಿ ಕೊಡಬೇಕು. ಅನೇಕ ರಸ್ತೆಗಳನ್ನು ಸರ್ಕಾರದವರು 1947 ರಿಂದ ಈ ಹೊತ್ತಿನವರೆಗೂ ಬಹಳ ಚೆನ್ನಾಗಿ ಮಾಡಿ ಸಂಚಾರ ಸೌಲಭ್ಯವನ್ನು ಉತ್ತಮ ರೀತಿಯಲ್ಲಿ ಮಾಡಿದ್ದಾರೆ. ಬೆಂಗಳೂರಿನಿಂದ ಮಂಗಳೂರಿಗೆ, ಬೆಂಗಳೂರಿನಿಂದ ಪೂನಾವರೆಗೆ ಇರತಕ್ಕ ಮಹತ್ತರವಾದ ಎರಡು ದೊಡ್ಡ ರಸ್ತೆಗಳು ಅನೇಕ ತೊಂದರೆಗಳಿಗೆ ಒಳಗಾಗಿವೆ. ಕಾರಣ ಹೆಚ್ಚು ಲಾರಿಗಳು, ಕಾರುಗಳು, ಇತರ ವಾಹನಗಳು ರಸ್ತೆಗಳಲ್ಲಿ ಹೆಚ್ಚು ಹೆಚ್ಚು ಸಂಚಾರ ಮಾಡತಕ್ಕ ಕಾಲ ಹೆಚ್ಚಿರುವುದರಿಂದ ಇದನ್ನು ಡಬ್ಬಲ್ ರೋಡ್ ಆಗಿ ಪರಿವರ್ತನೆ ಮಾಡಿ ಸಾವು ನೋವುಗಳಿಗೆ ಅವಕಾಶವಿಲ್ಲದೆ, ವಾಹನಗಳಿಗೂ ಭದ್ರತೆಯುಂಟಾಗುವ ಹಾಗೆ ಸರ್ಕಾರದವರು ಈ ಕಾರ್ಯವನ್ನು ಬಜೆಟ್ಟಿನಲ್ಲಿ ಸೇರಿಸಿ ಇದಕ್ಕೆ ತಗಲಬಹುದಾದ ಹಣವನ್ನು ಸರ್ಕಾರ ಒದಗಿಸುವುದಕ್ಕ ಪ್ರಯತ್ನ ಮಾಡಬೇಕು. ಪಬ್ಲಿಕ್ ವರ್ಕ್ಸ್ ಇಲಾಖೆಯ

ಅಧಿಕಾರಿಗಳ ಮೇಲೆ ನಮ್ಮ ಸ್ನೇಹಿತರು ಅನೇಕ ದೂರುಗಳನ್ನು ಹೇಳಿದ್ದಾರೆ. ಈ ಇಲಾಖೆಯಲ್ಲಿ ಸಂಸ್ಥಾನದ ಇತರ ಇಲಾಖೆಗಳಲ್ಲಿ ಮತ್ತು ಅನೇಕ ಸಂಘ ಸಂಸ್ಥೆಗಳಲ್ಲಿ ಕೂಡ ದೂರುಗಳಿವೆ. ಆದರೆ ಈ ಇಲಾಖೆ ಬಹಳ ಮಹತ್ತರವಾದುದು. ದೇಶಕ್ಕೆ ಲಾಭ ಕೊಡತಕ್ಕದು. ಎಲ್ಲರೂ ತಪ್ಪು ದಾರಿಯಲ್ಲಿದ್ದಾರೆ ಎಂದು ಹೇಳುವುದಕ್ಕೆ ನಾನು ಬಯಸುವುದಿಲ್ಲ ಅನೇಕರು ತಪ್ಪು ಮಾಡಿದವರು ಸರ್ಕಾರದ ಕೈಗೆ ಸಿಕ್ಕಿದ್ದಾರೆ, ಮತ್ತು ಅವರಿಗೆ ಸರಿಯಾದ ಶಿಕ್ಷೆಯೂ ಆಗಿದೆ. ಇಂಥದನ್ನು ನಿವಾರಣೆ ಮಾಡುವುದಕ್ಕೆ ಒಂದು ವ್ಯವಸ್ಥೆಯನ್ನು ಕೂಡ ಸರ್ಕಾರ ಮಾಡಿದೆ. ಅದು ಪೂರ್ಣ ಕೆಲಸವನ್ನು ಮಾಡುತ್ತಿದೆ. ಆದರೆ ಈ ರೀತಿಯ ದೂರುಗಳು ಇನ್ನೂ ಹೋಗಿಲ್ಲ. ದೂರುಗಳು ಬರುವುದು ಪೂರ್ಣವಾಗಿ ನಿಲ್ಲಬೇಕಾದರೆ ಇಲಾಖೆಯ ಮಂತ್ರಿಗಳು, ಇಲಾಖೆಯ ದೊಡ್ಡ ದೊಡ್ಡ ಅಧಿಕಾರಿಗಳು ಎಲ್ಲರೂ ಹೆಚ್ಚಿನ ಗಮನ ಕೊಟ್ಟು ಸದಸ್ಯರು ಈ ವೇದಿಕೆಯ ಮೂಲಕ ಆಗಾಗ ಕೊಡುವಂಥ ಸಲಹೆಗಳಿಗೆ ಗಮನ ಕೊಡಬೇಕೆಂದು ನಾನು ಸರ್ಕಾರವನ್ನು ತಮ್ಮ ಮೂಲಕ ಪ್ರಾರ್ಥಿಸುತ್ತೇನೆ.

ನಾನು ಹೇಳಿರತಕ್ಕ ಎಲ್ಲಾ ನೀರಾವರಿ ಕಾಮಗಾರಿಗಳನ್ನೂ ತ್ವರಿತಗತಿಯಿಂದ ತೆಗೆದುಕೊಳ್ಳುವುದಕ್ಕೆ ಸರ್ಕಾರ ಮನಸ್ಸು ಮಾಡಬೇಕು ಮತ್ತು ಈಗಿರತಕ್ಕ ವಾಟರ್ ರೇಟ್ ಕಂದಾಯ ಇವುಗಳನ್ನು ಕಡಿಮೆ ಮಾಡಿ ರೈತರ ಬೆಳವಣಿಗೆಗೆ ಸಹಾಯಕರಾಗಬೇಕೆಂದು ಹೇಳುತ್ತೇನೆ.

ಮಾನ್ಯ ಚನ್ನಬಸಪ್ಪನವರು ಪಬ್ಲಿಕ್ ವರ್ಕ್ಸ್ ಮಂತ್ರಿಗಳಾಗಿ ಗ್ರಾಮಾಂತರ ಪ್ರದೇಶದಲ್ಲಿ ನಾನಾ ಕಡೆ ರಸ್ತೆಗಳನ್ನು ಕೈಗೊಂಡರು. ಅದಕ್ಕೆ 8 ಕೋಟಿ ರೂಪಾಯಿ ಖರ್ಚಾಯಿತು. ಆ ರಸ್ತೆಗಳ ಬಗ್ಗೆ ತಾಲ್ಲೂಕು ಬೋರ್ಡ್‌ಗಳಾಗಲಿ, ಸರ್ಕಾರದವರಾಗಲಿ ನಿಗಾ ಕೊಟ್ಟಿಲ್ಲ ಅವುಗಳ ರಿಪೇರಿ ಮಾಡುತ್ತಿಲ್ಲ. ಸರ್ಕಾರ ಖರ್ಚು ಮಾಡಿರುವ ಹಣ ಪೋಲಾಗದಂತೆ, ಮಾಡಿದ ಕೆಲಸ ಭದ್ರವಾಗಿರಬೇಕಾದರೆ ಅಂಥ ರಸ್ತೆಗಳನ್ನು ಮೆಂಟೇನ್ ಮಾಡುವ ಜವಾಬ್ದಾರಿಯನ್ನು ಯಾರಾದರೂ ವಹಿಸಿಕೊಳ್ಳಬೇಕು. ಈ ರಸ್ತೆಗಳ ಜವಾಬ್ದಾರಿಯನ್ನು ಯಾವ ಇಲಾಖೆಗಾದರೂ ವಹಿಸಬೇಕಾಗಿದೆ. ಇದನ್ನು ಸರ್ಕಾರದ ಗಮನಕ್ಕೆ ಅನೇಕ ಸಾರಿ ಬೇರೆ ಬೇರೆ ವೇದಿಕೆಗಳಲ್ಲಿ ತಂದಿದ್ದೇನೆ. ಇನ್ನು ಮೇಲಾದರೂ ರಸ್ತೆಗಳನ್ನು ಮಾಡಿ, ಅವುಗಳನ್ನು ಸರಿಯಾಗಿ ನೋಡಿಕೊಳ್ಳುವ ವ್ಯವಸ್ಥೆಯನ್ನು ಮಾಡಿ, ದೇಶಕ್ಕೆ ಒಂದು ಆಸ್ತಿ ಮಾಡಿ ಕೊಡಬೇಕು. ಮಾಡಿದ ಕೆಲಸವನ್ನು ಮಧ್ಯದಲ್ಲಿ ಬಿಟ್ಟರೆ ದೇಶದ ಹಣ ಪೋಲಾಗುತ್ತದೆ, ಜನರಿಗೆ ಅನುಕೂಲವಾಗಲಿಲ್ಲ; ದೇಶಕ್ಕೆ ಆಸ್ತಿಯೂ ಇಲ್ಲದಂತಾಗುತ್ತದೆ. ಆದ್ದರಿಂದ ರಸ್ತೆಗಳನ್ನು

ಮಾಡಲು ಖರ್ಚು ಮಾಡಿರುವ ಹಣ ಪೋಲಾಗದಂತೆ ಅವುಗಳನ್ನು ಸರಿಯಾಗಿ ನೋಡಿಕೊಳ್ಳುವ ಕೆಲಸವನ್ನೂ ಮಾಡಬೇಕು.

ಮಾಗಡಿ ತಾಲ್ಲೂಕಿನಲ್ಲಿ ಕೆಲವು ಕೆರೆಗಳು, ರಸ್ತೆಗಳು ದುಸ್ತಾಗಿವೆ. ಈ ಕೆಲಸಗಳನ್ನು ಜಾಗ್ರತೆ ಕೈಕೊಂಡು ಆ ಭಾಗದ ಜನರಿಗೆ ಸಂತೋಷವನ್ನುಂಟು ಮಾಡುವಂಥ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕೆಂದು ಹೇಳಿ, ಅಧ್ಯಕ್ಷರು ನನಗೆ ನಾಲ್ಕೈದು ನಿಮಿಷ ಹೆಚ್ಚಾಗಿ ಅವಕಾಶ ಕೊಟ್ಟು ಉಪಕಾರ ಮಾಡಿರುವುದಕ್ಕಾಗಿ ಅವರನ್ನೂ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಜೈ ಹಿಂದ್.

## ಪೋಲಿಸ್ ಇಲಾಖೆ ಚನ್ನಾಗಿ ಕೆಲಸ ಮಾಡಲಿ

13ನೇ ಮಾರ್ಚ್ 1970

ಮಾನ್ಯ ಅಧ್ಯಕ್ಷರೆ, ನಮ್ಮ ಮುಂದೆ ಮಂಡಿಸಿರತಕ್ಕಂಥ ಮೂರು ಡಿಮ್ಯಾಂಡ್‌ಗಳನ್ನು ಸಮರ್ಥನೆ ಮಾಡುತ್ತಾ ಕೆಲವು ವಿಚಾರಗಳನ್ನು ಸಭೆಯ ಗಮನಕ್ಕೆ ತುರುವುದಕ್ಕೆ ಇಚ್ಛಿಪಡುತ್ತೇನೆ. ಪೋಲೀಸ್ ಇಲಾಖೆಯ ವಿಚಾರದಲ್ಲಿ ಈಗಾಗಲೇ ಅನೇಕ ಮಾನ್ಯ ಸ್ನೇಹಿತರು ಮಾತನಾಡಿ ಅನೇಕ ವಿಚಾರಗಳನ್ನು ಸರ್ಕಾರದ ಗಮನಕ್ಕೆ ತಂದಿದ್ದಾರೆ, ಪೋಲೀಸ್ ಇಲಾಖೆಗೆ ನಾವು ಕೊಡುತ್ತಿರುವ ಉತ್ತೇಜನದಿಂದ ಒಳ್ಳೆಯ ಫಲ ಸಿಕ್ಕಿದೆ, ಮತ್ತು ಒಳ್ಳೆಯ ಕೆಲಸಗಳು ಆಗುತ್ತಿವೆ. ನಮ್ಮ ಸಂಸ್ಥಾನದಲ್ಲಿ ಸಾಧ್ಯವಾದ ಮಟ್ಟಿಗೂ ಪೋಲೀಸ್ ಇಲಾಖೆ ಉತ್ತಮ ಸ್ಥಿತಿಗೆ ಬಂದಿದೆ. ಶಾಸಕರಾದ ನಾವು ಆಗಾಗ್ಗೆ ಅಲ್ಲಿ ನಡೆಯುತ್ತಿರುವ ಕೆಲಸಗಳ ಬಗ್ಗೆ ಸರ್ಕಾರದ ಗಮನಕ್ಕೆ ತರುವುದು ಒಳ್ಳೆಯದು. ಪೋಲೀಸ್ ಇಲಾಖೆ ಗ್ರಾಮಾಂತರ ಪ್ರದೇಶಗಳಲ್ಲಿ ಚೆನ್ನಾಗಿ ಕೆಲಸ ಮಾಡುವಂತೆ ಸಂಬಂಧಪಟ್ಟ ಮಂತ್ರಿಗಳು ತಕ್ಕ ವ್ಯವಸ್ಥೆ ಮಾಡಬೇಕು. ಅಲ್ಲಿ ವಾಸ ಮಾಡತಕ್ಕಂಥ ಜನರ ರಕ್ಷಣೆ ಮಾಡುವುದು ಪೋಲೀಸರ ಕರ್ತವ್ಯ. ಅದರಂತೆ ಪೋಲೀಸಿನವರಿಗೂ ಕೂಡ ವಾಸ ಮಾಡುವುದಕ್ಕೆ ವಸತಿ ಸೌಕರ್ಯವನ್ನು ಒದಗಿಸಬೇಕು. ಕುಡಿಯುವ ನೀರಿನ ಸೌಕರ್ಯ ಒದಗಿಸಬೇಕು. ಅನೇಕ ಕಡೆಗಳಲ್ಲಿ ಪೋಲೀಸ್ ಸ್ಟೇಷನ್‌ಗಳಿಗೆ ಭದ್ರತೆ ಇರುವುದಿಲ್ಲ. ಆ ಬಗ್ಗೆ ಸರ್ಕಾರದವರು ತಕ್ಕ ವ್ಯವಸ್ಥೆ ಮಾಡಬೇಕು.

## ಜಾತಿಗಳ ಬಗ್ಗೆ ಮಾತಾಡುವುದು ಸರಿಯಲ್ಲ

ವಿದ್ಯಾ ಇಲಾಖೆಯಲ್ಲಿ ಉಪಾಧ್ಯಾಯರ ವರ್ಗದ ವಿಚಾರದಲ್ಲಿ ಸರ್ಕಾರಕ್ಕೆ ನನ್ನ ಕೆಲವು ಸ್ನೇಹಿತರು ಹಿತೋಕ್ತಿಗಳನ್ನು ಹೇಳಿದ್ದಾರೆ. ಮಾನ್ಯ ವೆಂಕಟಪ್ಪನವರು ವಿದ್ಯಾ ಮಂತ್ರಿಗಳಾಗಿದ್ದಾಗ ಉಪಾಧ್ಯಾಯರುಗಳನ್ನು ಅವರು ಹುಟ್ಟಿದ ತಾಲ್ಲೂಕಿನಲ್ಲಿಯೇ ಇಡದೆ ಬೇರೆ ತಾಲ್ಲೂಕ್‌ಗಳಿಗೆ ವರ್ಗ ಮಾಡಬೇಕೆಂದು ಒಂದು ಆಡಳಿತ ಹೊರಡಿಸಿದ್ದರು. ಅದನ್ನು ಇನ್ನೂ ಜಾರಿಗೆ ಕೊಡದಿರುವುದರಿಂದ ಬಹಳ ತೊಂದರೆಯಾಗುತ್ತಿದೆ. ಇನ್ನು ಮುಂದೆ ಉಪಾಧ್ಯಾಯರುಗಳನ್ನು ಅವರ ತಾಲ್ಲೂಕಿನಲ್ಲಿಯೇ ಇಡದೆ ಬೇರೆ ತಾಲ್ಲೂಕ್‌ಗಳಿಗೆ ವರ್ಗ ಮಾಡಿಸಿರೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಮಾನ್ಯ ಹುಚ್ಚ ಮಾಸ್ತಿಗೌಡರು ಪಬ್ಲಿಕ್ ವರ್ಕ್ಸ್ ಡಿಪಾರ್ಟ್‌ಮೆಂಟ್ ಬಗ್ಗೆ ಮಾತನಾಡುತ್ತಾ ಬಹಳ ಕಠಿಣ ಶಬ್ದಗಳನ್ನು ಉಪಯೋಗಿಸಿದರು, ಜಾತಿಯ ವಿಚಾರದಾರೆ ಮಾತನಾಡಿದರು. ನನ್ನ ಜೊತೆಯಲ್ಲಿ ಅವರು 20 ವರ್ಷದಿಂದ ಇದ್ದವರು ಅವರು ಈ ಸಭೆಯ ಮೂಲಕ ಅವಹೇಳನ ಮಾಡುವ ಮಾರ್ಗದಲ್ಲಿ ಕೆಲವು ವಿಚಾರಗಳನ್ನು ಹೇಳಿದ್ದಾರೆ. ಅವರು ಒಳ್ಳೆಯ ಅನುಭವಿಗಳು, ವ್ಯವಹಾರ ಚೆನ್ನಾಗಿ ತಿಳಿದುಕೊಂಡಿದ್ದಾರೆ. ಅವರು ಸರ್ಕಾರದ ನ್ಯೂನತೆಗಳನ್ನು ಹೇಳಬೇಕೇ ಹೊರತು, ಸರ್ಕಾರದವರು ತನ್ನ ಅಧಿಕಾರಿಗಳನ್ನು ತಮ್ಮ ಸ್ವಂತ ಕೆಲಸಗಳಿಗೆ ಉಪಯೋಗಿಸಿ ಕೊಳ್ಳುತ್ತಿದ್ದಾರೆ ಎಂದು ಹೇಳಿದ್ದು ಸರಿಯಲ್ಲ. ಅದನ್ನು ನಾನು ಒಪ್ಪುವುದಿಲ್ಲ ಅಧಿಕಾರಿಗಳ ಭದ್ರತೆಗೆ ಸರ್ಕಾರದವರು ತಕ್ಕ ವ್ಯವಸ್ಥೆ ಮಾಡಿರುವುದರಿಂದ ಇವತ್ತು ಅವರು ದಕ್ಷತೆಯಿಂದ ಕೆಲಸ ಮಾಡುತ್ತಿದ್ದಾರೆ ಮತ್ತು ಕೋಟ್ಯಾಂತರ ರೂಪಾಯಿಗಳ ಕೆಲಸಗಳು ಬಹಳ ಚೆನ್ನಾಗಿ ನಡೆಯುತ್ತಿವೆ. ಈ ರೀತಿ ಕೆಲಸಗಳು ಆಗುತ್ತಿರುವುದು ಶ್ರೀಮಾನ್ ಹುಚ್ಚ ಮಾಸ್ತಿ ಗೌಡರಿಗೆಸ ಗೊತ್ತಿದ್ದರೂ ಕೂಡ ಅವರು ಈ ಸಭೆಯಲ್ಲಿ ಅಧಿಕಾರಿಗಳ ಬಗ್ಗೆ ಮತ್ತು ಜಾತಿಯ ಬಗ್ಗೆ ಮಾತನಾಡುವುದು ಸರಿಯಲ್ಲ ಅವರು ಅನುಭವಿಗಳು ಮತ್ತು ತಿಳಿದವರಾಗಿದ್ದಾರೆ.

## "ಬಂಧೀಖಾನೆ" ಸ್ಥಳಾಂತರಿಸಿ

ಇನ್ನು ಬೆಂಗಳೂರಿನಲ್ಲಿರುವ ಸೆಂಟ್ರಲ್ ಜೈಲ್ ಪಟ್ಟಣದ ಮಧ್ಯೆ ಇದೆ. ಅದನ್ನು ಬೇರೆ ಸ್ಥಳಕ್ಕೆ ಸಾಗಿಸಬೇಕು ಎಂದು ಅನೇಕ ಸಲ ಹೇಳಿದ್ದೇನೆ, ಮತ್ತು ಸಂಬಂಧಪಟ್ಟ ಇಲಾಖೆಗೆ ಪತ್ರಗಳನ್ನು ಸಹ ಬರೆದಿದ್ದೇನೆ. ಈ ಸಭೆಯಲ್ಲಿ ಕೂಡ ಪ್ರಸ್ತಾಪ ಮಾಡಿದ್ದೇನೆ. ಪಟ್ಟಣದ ಮಧ್ಯೆ ಇರುವುದರಿಂದ ಜನರಿಗೆ

ತೊಂದರೆಯಾಗುತ್ತಿದೆ. ಪಟ್ಟಣದ ಹೊರಗಡೆಗೆ ಸ್ಥಳಾಂತರಿಸಬೇಕು ಎಂದು ಸರ್ಕಾರದವರನ್ನು ಕೇಳಿಕೊಂಡರೂ ಕೂಡ ಅದು ಕಾರ್ಯರೂಪಕ್ಕೆ ಬಂದಿಲ್ಲ. ಜೈಲು ಖೈದಿಗಳಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕು. ಮೈಸೂರು ಸಂಸ್ಥಾನದಲ್ಲಿ ಜೈಲುಗಳ ಭದ್ರತೆ ಇನ್ನೂ ಉತ್ತಮ ಮಟ್ಟಕ್ಕೆ ಬಂದಿಲ್ಲ. ಆ ಬಗ್ಗೆ ಸರ್ಕಾರದವರು ಗಮನ ಕೊಡಬೇಕು. ಮಾನ್ಯ ಚೆನ್ನ ಬಸಪ್ಪನವರು, ಮಾನ್ಯ ಸಿದ್ಧವೀರಪ್ಪನವರು ಮತ್ತು ಇನ್ನಿತರ ಸ್ನೇಹಿತರು ಈ ಸಭೆಯಲ್ಲಿ ಮಾತನಾಡುವಾಗ ಸಭೆಯ ಘನತೆ ಮತ್ತು ಗೌರವಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಮಾತನಾಡಬೇಕೆಂದು ಈ ಸಭೆಯ ಮೂಲಕ ಅವರನ್ನು ಪ್ರಾರ್ಥಿಸುತ್ತೇನೆ. ಅವರು ತಿಳಿದಂಥವರು, ಮಂತ್ರಿಗಳಾಗಿ ಒಳ್ಳೆಯ ಕೀರ್ತಿಯನ್ನು ಪಡೆದವರು ಆದರೆ ಇವತ್ತು ಅಧಿಕಾರ ಸ್ಥಾನ ಸಿಗಲಿಲ್ಲ ಎಂಬ ಭಾವನೆ ಇಟ್ಟುಕೊಡು ಆ ರೀತಿ ಮಾತನಾಡುವುದು ಸರಿಯಲ್ಲ, ದೇಶ ಸುಭಿಕ್ಷವಾಗಿ ಮತ್ತು ವ್ಯವಸ್ಥಿತ ರೀತಿಯಲ್ಲಿ ನಡೆಯುವಂತೆ ಮಾಡಲು ಅವರು ಒಳ್ಳೆಯ ಸಲಹೆಗಳನ್ನು ಈ ಸಭೆಯಲ್ಲಿ ಕೊಡಬೇಕೆಂದು ಪುನಃ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಪೋಲೀಸ್ ಇಲಾಖೆಯ ವಿಚಾರದಲ್ಲಿ ಮತ್ತು ವಿಜಿಲೆನ್ಸ್ ಕಮಿಷನ್ ಇಲಾಖೆಯ ವಿಚಾರದಲ್ಲಿ ನಮ್ಮ ಸ್ನೇಹಿತರು ಕೆಲವರು ವಿರೋಧ ಮಾಡಿದ್ದಾರೆ. ಈ ಇಲಾಖೆಗಳಿಗೆ ಸಂಬಂಧಪಟ್ಟ ಹಾಗೆ ಸರ್ಕಾರದವರು ಒದಗಿಸಿರತಕ್ಕ ಅಂಕಿ ಅಂಶಗಳನ್ನು ನೋಡುವುದಾದರೆ ಅದರಲ್ಲಿ ಅನೇಕ ಉಪಯುಕ್ತವಾದ ಅಂಶಗಳು ಮತ್ತು ಅನುಕೂಲತೆಗಳು ಆಗಿರುವುದು ಅದರಲ್ಲಿ ಇವೆ. ಈ ಇಲಾಖೆಯಲ್ಲಿ ಅನೇಕ ಉಪಯುಕ್ತವಾದ ಕೆಲಸಕಾರ್ಯಗಳು ಆಗಿವೆ. ನಾವು ಸುಮ್ಮನೆ ಈ ಸಭೆಯ ಮೂಲಕ ಯಾವುದನ್ನೇ ಆಗಲಿ, ಯಾರನ್ನೇ ಆಗಲಿ, ಅವಹೇಳನ ಮಾಡತಕ್ಕದ್ದು, ಟೀಕೆ ಮಾಡತಕ್ಕದ್ದು ಅಷ್ಟು ಸರಿಯಲ್ಲ. ಯಾವ ಯಾವ ಇಲಾಖೆಯಲ್ಲಿ ಏನೇನು ಕೆಲಸಕಾರ್ಯಗಳು ಆಗಿದೆ, ಎನ್ನತಕ್ಕ ಅಂಕಿ ಅಂಶಗಳನ್ನು, ಮತ್ತು ಏನೇನು ಅನುಕೂಲತೆಗಳು ಆಗಿವೆ ಎನ್ನತಕ್ಕದ್ದನ್ನೂ ಈ ಸಭೆಯ ಮುಂದೆ. ನಮ್ಮ ಮುಂದೆ ಸರ್ಕಾರದವರು ಇಟ್ಟಿದ್ದಾರೆ. ಮತ್ತು ಪೊಲೀಸ್ ಇಲಾಖೆಗೆ ಸಂಬಂಧಪಟ್ಟ ಹಾಗೆ ದೇಶದಲ್ಲಿ ಏನೇನು ಘಟನೆಗಳು ನಡೆದಿವೆ, ಎಷ್ಟೆಷ್ಟು ಕೇಸುಗಳು ಆಗಿವೆ. ಇವುಗಳ ಬಗ್ಗೆ ಪೊಲೀಸಿನವರು ಎಷ್ಟರ ಮಟ್ಟಿಗೆ ಕಾರ್ಯಾಚರಣೆಯನ್ನು ನಡೆಸಿದ್ದಾರೆ ಎನ್ನುವುದನ್ನು ನಾವು ಗಮನಿಸಬೇಕಾದದ್ದು ನ್ಯಾಯ. ಆದರೆ ಸುಮ್ಮನೆ ಈ ಸಭೆಯ ಮೂಲಕ ಇಲಾಖೆಗಳನ್ನೂ, ಈ ಇಲಾಖೆಯ ಅಧಿಕಾರಿಗಳನ್ನೂ

ಟೀಕೆ ಮಾಡುವುದರಿಂದ ನಮ್ಮ ದೇಶಕ್ಕೆ ಲಾಭವಾಗುವುದಿಲ್ಲ. ಅಧಿಕಾರಿಗಳು ಸಾಧ್ಯವಾದ ಮಟ್ಟಿಗೆ ಸರಿಯಾದ ರೀತಿಯಲ್ಲಿ ಎಲ್ಲಾ ಇಲಾಖೆಗಳಲ್ಲೂ ಕೆಲಸ ಮಾಡುತ್ತಿದ್ದಾರೆ. ನಾವು ಲೆಜಿಸ್ಲೇಟರ್ಸ್ ಆಗಿರುವವರು ತಾಲ್ಲೂಕುಗಳಲ್ಲಿ ಸಂಚಾರ ಮಾಡಿ ಆಫೀಸುಗಳಲ್ಲಿ ಕೆಲಸ ಕಾರ್ಯಗಳು ಯಾವ ರೀತಿ ನಡೆಯಬೇಕು. ದೇಶದ ಅಭಿವೃದ್ಧಿ ಕಾರ್ಯಗಳು ಯಾವ ರೀತಿ ನಡೆಯಬೇಕು, ಮತ್ತು ದೇಶದ ಆಡಳಿತಕ್ಕೆ ಸಂಬಂಧಪಟ್ಟ ಕೆಲಸಕಾರ್ಯಗಳು ಯಾವ ರೀತಿ ನಡೆಯಬೇಕು ಎಂಬ ಬಗ್ಗೆ ಇಲಾಖೆಯವರ ಮೂಲಕ ನೇರವಾಗಿ ತಿಳಿಸುವುದಕ್ಕೆ ಅವಕಾಶ ಇದೆ. ಒಂದು ಕ್ಷೇತ್ರದ ಲಕ್ಷಾಂತರ ಜನಗಳು ನಮಗೆ ವೋಟು ಕೊಟ್ಟು ನಮ್ಮನ್ನು ಈ ಸಭೆಗೆ ಕಳುಹಿಸಿದ್ದಾರೆ. ನಾವು ನಮ್ಮ ಕರ್ತವ್ಯವನ್ನು ಮಾಡಬೇಕು. ಅನೇಕ ಸಾರಿ ಈ ಸಭೆಯ ಮೂಲಕ ನೌಕರರನ್ನು ಸಂಸ್ಥೆಯ ಕೆಲಸಕಾರ್ಯಗಳನ್ನು ವಿರೋಧಿಸಿ ಮಾತನಾಡತಕ್ಕದ್ದು ಸರಿಯಲ್ಲ. ಸರ್ಕಾರವನ್ನು ಕಿತ್ತು ಒಗೆಯುತ್ತೇವೆ ಎಂದು ಪ್ರತಿಜ್ಞೆ ಮಾಡತಕ್ಕದ್ದು ಸರಿಯಲ್ಲ. ಸರ್ಕಾರವನ್ನು ಕಿತ್ತು ಒಗೆಯತಕ್ಕದ್ದು ಅಷ್ಟೊಂದು ಸುಲಭವಲ್ಲ ಇಂಥಾ ಮಾತುಗಳನ್ನು ಹೇಳುವುದಕ್ಕೆ ಬದಲಾಗಿ ಬೇರೆ ಮಾರ್ಗಗಳಲ್ಲಿ ಸರ್ಕಾರಕ್ಕೆ ಅವರು ತಮ್ಮ ಅಭಿಪ್ರಾಯಗಳನ್ನು ತಿಳಿಸಬಹುದು ದೇಶದ ಜನತೆಯಿಂದ ಚುನಾಯಿತರಾಗಿರತಕ್ಕ, ಪ್ರತಿನಿಧಿಗಳು ದೇಶದ ಏಳಿಗೆಗಾಗಿ ಕೆಲಸ ಮಾಡಬೇಕು. ಏನಾದರೂ ತಪ್ಪುಗಳು ಇದ್ದರೆ ಅದನ್ನು ಸಂಬಂಧಪಟ್ಟವರಿಗೆ ತಿಳಿಸುವುದಕ್ಕೆ, ದೇಶಕ್ಕೆ ಪ್ರಯೋಜನವಾಗುವ ರೀತಿಯಲ್ಲಿ ಮಾರ್ಗಗಳನ್ನು ಕಲ್ಪಿಸುವುದಕ್ಕೆ ನಮ್ಮ ಸ್ನೇಹಿತರಿಗೆ ಬೇರೆ ಅವಕಾಶ ಇದೆ.

ಶ್ರೀಮಾನ್ ಹುಚ್ಚ ಮಾಸ್ತಿಗೌಡರು ಸಹಕಾರ ಸಂಘಗಳಿಗೆ ಸಂಬಂಧಪಟ್ಟ ಹಾಗೆ ಕೆಲವು ವಿಚಾರಗಳನ್ನು ಹೇಳಿದರು. ಅವರು ಸಹಕಾರ ಸಂಸ್ಥೆಗಳ ಅಧ್ಯಕ್ಷರಾಗಿ ಬಹಳ ವರ್ಷಗಳಿಂದ ಇದ್ದಾರೆ. ಅವರಿಗೆ ವಿಚಾರಗಳೆಲ್ಲವೂ ಚೆನ್ನಾಗಿ ಗೊತ್ತಿದೆ. ಆದ್ದರಿಂದ ಅವರಿಗೆ ಚೆನ್ನಾಗಿ ಗೊತ್ತಿರತಕ್ಕ ವಿಚಾರವನ್ನು ಪದೇ ಪದೇ ಇನ್ನೊಬ್ಬರ ಮೇಲೆ ಸೇಡು ತೀರಿಸಿಕೊಳ್ಳುವ ಮನೋಭಾವದಿಂದ ಹೇಳಬಾರದು. ಮಾನ್ಯ ಉಪ–ಮಂತ್ರಿಗಳು ಮೈಸೂರು, ಮಂಡ್ಯ, ಮತ್ತು ಕುಣಿಗಲ್ ಈ ಪ್ರದೇಶಗಳಿಗೆ ಆಗಿಂದಾಗ್ಗೆ ಪ್ರವಾಸ ಹೋಗಿ ಬೇರೆ ಬೇರೆ ರಾಜಕೀಯ ನಡೆಸುತ್ತಿದ್ದಾರೆ ಎಂದು ಹೇಳಿದರು. ಅದು ಸರಿಯಲ್ಲ, ಅವರು ಆ ಕ್ಷೇತ್ರಗಳಿಗೆ ಹೋಗಬೇಕಾದ್ದು ಅವಶ್ಯಕ ಆದ್ದರಿಂದ ಅವರು ಆ ಪ್ರದೇಶಗಳಿಗೆ ಹೋಗಿದ್ದಾರೆ. ನಾವು ಅವರನ್ನು ಈ ಸಭೆಯ ಮೂಲಕ ಅವಹೇಳನ ಮಾಡಿ ಈ ಸಭೆಯ ಪವಿತ್ರವಾದ ಕಾಲವನ್ನು ಹಾಳುಮಾಡುವುದು ಸರಿಯಲ್ಲ.

ಜೈಲು ವಿಚಾರದಲ್ಲಿ ಹೇಳಬೇಕಾದರೆ ಈಗಾಗಲೇ ಮಾನ್ಯ ಸದಸ್ಯರನೇಕರು ಅನೇಕ ವಿಚಾರಗಳನ್ನು ಹೇಳಿದ್ದಾರೆ. ಅವರು ಅಭಿಪ್ರಾಯ ಪಟ್ಟ ಹಾಗೆ ಜೈಲಿನ ನೌಕರರ ಸ್ಥಿತಿಗತಿಗಳನ್ನು ಸುಧಾರಿಸಿ ಅವರ ಬೇಡಿಕೆಗಳನ್ನು ಕಾರ್ಯಗತ ಮಾಡಬೇಕು. ಜೈಲಿನಲ್ಲಿ ನಡೆಯತಕ್ಕ ಕೈಗಾರಿಕೆಗಳಲ್ಲಿ ಕೆಲಸಮಾಡತಕ್ಕವರ ಕುಂದು ಕೊರತೆಗಳನ್ನು ಸರಿಪಡಿಸಬೇಕು. ಮತ್ತು ಜೈಲಿನಲ್ಲಿ ಕೆಲಸ ಮಾಡತಕ್ಕ ಮೇಲಧಿಕಾರಿಗಳಿಗೆ ಒಂದು ಪೂರ್ಣವಾದ ಅವಕಾಶವನ್ನು ಕೊಟ್ಟು ಅಲ್ಲಿರತಕ್ಕ ಲೋಪದೋಷಗಳನ್ನು ಸರಿಪಡಿಸಬೇಕು ಜೈಲಿನಲ್ಲಿ ವಾಸಮಾಡತಕ್ಕ ಖೈದಿಗಳಿಗೆ ಸರಿಯಾದಂತಹ ಸ್ಥಳಾವಕಾಶ ಸರಿಯಾದ ಆಹಾರ, ನೀರು ಸರಬರಾಜು ಇತ್ಯಾದಿಗಳನ್ನು ಜೈಲಿನ ಅಧಿಕಾರಿಗಳು ವ್ಯವಸ್ಥೆ ಮಾಡಬೇಕು ಮತ್ತು ಈಗಿರತಕ್ಕ ವಿಧಾನವನ್ನು ಮಾರ್ಪಾಡು ಮಾಡುವುದು ಅವಶ್ಯಕ ಎಂದು ಹೇಳಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

## ಅರಣ್ಯ ಭೂಮಿಯನ್ನು ಬೇಸಾಯಕ್ಕೆ ನೀಡಬೇಡಿ

10ನೇ ಮಾರ್ಚ್ 1970

ಮಾನ್ಯ ಅಧ್ಯಕ್ಷರೆ, ನಮ್ಮ ಮುಂದೆ ಮಂಡಿಸಿರುವ ನಾಲ್ಕು ಡಿಮ್ಯಾಂಡ್‌ಗಳ ಬಗ್ಗೆ ಅನುಮೋದನೆ ಕೊಡುತ್ತಾ ಕೆಲವು ನ್ಯೂನತೆಗಳನ್ನು ಸರ್ಕಾರದ ಗಮನಕ್ಕೆ ತರುವುದಕ್ಕೆ ಬಯಸುತ್ತೇನೆ. ಮೊದಲು ಅರಣ್ಯ ಇಲಾಖೆಯ ಬಗ್ಗೆ ಕೆಲವು ಸಲಹೆಗಳನ್ನು ಸರ್ಕಾರಕ್ಕೆ ಕೊಡುವುದಕ್ಕೆ ಇಷ್ಟ ಪಡುತ್ತೇನೆ ಈ ಹೊತ್ತು ಅರಣ್ಯ ಸಂಪತ್ತು ಕುಂಠಿತವಾಗುತ್ತಿದೆ. ಅರಣ್ಯ ಇಲಾಖೆಯನ್ನು ಹೊಸ ಮಂತ್ರಿಗಳು ತಮ್ಮ ವಶಕ್ಕೆ ತೆಗೆದುಕೊಂಡ ಮೇಲೆ ಅತ್ಯುತ್ತಮ ಸ್ಥಿತಿಗೆ ತರುತ್ತಿದ್ದಾರೆ. ಮೊದಲಿನಿಂದಲೂ ಅರಣ್ಯ ಸಂಪತ್ತಿನಿಂದ ದೇಶಕ್ಕೆ ಅನುಕೂಲವಾಗುತ್ತಿರುವುದಲ್ಲದೆ ಇದರಿಂದ ರಾಜ್ಯದ ಬೊಕ್ಕಸಕ್ಕೂ ಹಣ ಬರುತ್ತಿದೆ. ಅರಣ್ಯ ಸಂಪತ್ತು ವೃದ್ಧಿಯಾದರೆ ರೈತರಿಗೆ ಬೇಕಾಗುವಂತಹ ಎಲ್ಲಾ ಅನುಕೂಲಗಳನ್ನು ಪಡೆಯುವುದಕ್ಕೆ ಸಾಧ್ಯವಿದೆ. ಕೆಲವು ಸಂದರ್ಭಗಳಲ್ಲಿ ಸರ್ಕಾರದವರು ಇದ್ದಿಲು ಮಾಡಲು ಮತ್ತು ಒಳ್ಳೆಯ ಟಿಂಬರ್‌ಗಳನ್ನು ಕಡಿಯಲು ಲೈಸನ್ಸ್ ಕೊಡುತ್ತಿರುವುದರಿಂದ ವನಸಂಪತ್ತು ದಿನೇ ದಿನೇ ನಾಶವಾಗುವುದಕ್ಕೆ ಅವಕಾಶವಾಗಿದೆ. ಇನ್ನು ಮುಂದೆ ಯಾವುದೇ ಕಾರಣದಿಂದಲೂ ಕೂಡ ಕಾಡಿನಲ್ಲಿ ಇದ್ದಿಲಿಗಾಗಿ ಮರಗಳನ್ನು ಕಡಿಯುವುದಕ್ಕೆ ಮತ್ತು ಕಾಡಿನಲ್ಲಿ ದನಗಳು ಮೇಯುವುದಕ್ಕೆ ಅವಕಾಶ ಕೊಡಬಾರದೆಂದು ಹೇಳುತ್ತೇನೆ. ಹುಣಸೆ, ಮಾವು, ಮುಂತಾದ ಅತ್ಯುತ್ತಮವಾದಂಥ ಮರಗಳನ್ನು ಬೆಳೆಸುವುದರ

ಮೂಲಕ ಅರಣ್ಯ ಸಂಪತ್ತು ಜಾಸ್ತಿಯಾಗುವುದಕ್ಕೆ ಅವಕಾಶ ಮಾಡಬೇಕು. ವನ್ಯ ಸಂಪತ್ತಿನಿಂದ ದೇಶಕ್ಕೂ ಹಾಗೂ ಸರ್ಕಾರಕ್ಕೂ ಲಾಭವಾಗುತ್ತಿದೆ. ಮಾನ್ಯ ಮಂತ್ರಿಗಳು ಸಂಚಾರ ಕೈಕೊಂಡು ಒಂದೇ ಕಡೆ ಕೆಲಸ ಮಾಡುತ್ತಿರುವವರನ್ನು ಕಂಡುಹಿಡಿದು ವರ್ಗ ಮಾಡಬೇಕು. 10–20 ವರ್ಷಗಳಿಂದ ಒಂದೇ ಕಡೆ ಫಾರೆಸ್ಟ್ ಗಾರ್ಡ್‌ಗಳು ಕೆಲಸ ಮಾಡುತ್ತಿದ್ದಾರೆ. ಇಂತಹವರನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ವರ್ಗ ಮಾಡಬೇಕು. ಇವತ್ತು ಅನೇಕ ಕಾರಣಗಳಿಂದ ವನ್ಯ ಸಂಪತ್ತು ಕುಂಠಿತವಾಗುವುದಕ್ಕೆ ಅವಕಾಶವಾಗಿದೆ. ಈ ವಿಚಾರ ಅಧಿಕಾರಿಗಳಿಗೂ ಮತ್ತು ಮಂತ್ರಿಗಳಿಗೂ ಮನವರಿಕೆಯಾಗಿದೆ. ಇವತ್ತು ಅರಣ್ಯದಿಂದಲೇ ಸರ್ಕಾರಕ್ಕೆ ಸುಮಾರು 15 ಕೋಟಿ ರೂಪಾಯಿಗಳಷ್ಟು ವರಮಾನ ಬರುತ್ತಿದೆ. ಈ ವರಮಾನ ಇನ್ನೂ ಜಾಸ್ತಿಯಾಗುವುದಕ್ಕೆ ಕಾಡುಗಳಲ್ಲಿ ಯೋಗ್ಯವಾದಂಥ ಮರಗಳನ್ನು ಬೆಳೆಸುವುದಕ್ಕೆ ವ್ಯವಸ್ಥೆ ಮಾಡಬೇಕು.

ಯಾವ ಒಂದು ಕಾರಣದಿಂದಲೂ ಅರಣ್ಯ ಪ್ರದೇಶವನ್ನು ಸಾಗುವಳಿಗಾಗಿ ಜನಗಳಿಗೆ ಕೊಡತಕ್ಕಂಥ ಒಂದು ಕಾರ್ಯವನ್ನು ಸರ್ಕಾರದವರು ಮಾಡಬಾರದು. ವನಸಂಪತ್ತನ್ನು ಹೆಚ್ಚಿಸಿ ದೇಶಕ್ಕೆ ಲಾಭದಾಯಕವಾಗುವಂತಹ ಅನುಕೂಲಗಳನ್ನು ಹೆಚ್ಚಿಸಬೇಕು ಎನ್ನತಕ್ಕಂಥಾ ಕಾಲದಲ್ಲಿ 50 ಎಕರೆ, 40 ಎಕರೆ, 30 ಎಕರೆ ಜಮೀನನ್ನು ಯಾವುದಕ್ಕೂ ಯಾವ ಕಾರಣದಿಂದಲೂ ಯಾರಿಗೂ ಅದನ್ನು ಕೊಡತಕ್ಕಂಥ ಕಾರ್ಯವನ್ನು ಇನ್ನು ಮೇಲೆ ಸರ್ಕಾರದವರು ಖಂಡಿತವಾಗಿಯೂ ನಿಲ್ಲಿಸಬೇಕು. ಈ ಸಭೆಯಲ್ಲಿ ನಾವು ಹೇಳುವಂಥಾ ಮಾತುಗಳನ್ನೂ ಸರ್ಕಾರದವರು ಗಮನಿಸಬೇಕು. ಅವರು ಅದನ್ನು ಗಮನಿಸದಿದ್ದರೆ ನಾವು ಹೇಳಿದಂತಹ ಮಾತುಗಳಿಂದ ಯಾವ ಪ್ರಯೋಜನವೂ ಆಗುವುದಿಲ್ಲ. ಜನರಿಂದ ಚುನಾಯಿತರಾಗಿ ಬಂದಂಥವರೇ ಈ ದಿನ ಮಂತ್ರಿಗಳಾಗಿರತಕ್ಕವರು. ಆದ್ದರಿಂದ ನಾವು ಹೇಳುವಂಥಾ ಮಾತನ್ನು ಗಮನಿಸಬೇಕು. ಅರಣ್ಯ ಸಂಪತ್ತನ್ನು ಹೆಚ್ಚಿಸದಿದ್ದರೆ ತುಂಬಾ ಕಷ್ಟವಾಗುತ್ತದೆ. ಮತ್ತು ಯಾವ ಕಾರಣದಿಂದಲೂ ಫಾರೆಸ್ಟಿನ ಜಮೀನನ್ನು ಯಾರಿಗೂ ಕೊಡಬಾರದು. ಫಾರೆಸ್ಟಿನ ಒಳಗಡೆ ಖಾಲಿ ಜಮೀನು ಇದ್ದರೆ ಅಂಥಾ ಜಮೀನನ್ನು ಯಾರಿಗಾದರೂ ಕೊಟ್ಟರೆ ಆ ಏರಿಯಾದಲ್ಲಿರತಕ್ಕ ವನ ಸಂಪತ್ತನ್ನೆಲ್ಲಾ ರೈತರು, ಜನಗಳು ಹಾಳು ಮಾಡುತ್ತಾರೆ. ಈ ದೃಷ್ಟಿಯಿಂದ ಫಾರೆಸ್ಟ್ ಜಮೀನನ್ನು ಯಾರಿಗೂ ಕೊಡಬಾರದು ಎಂದು ನಾನು ಹೇಳುತ್ತೇನೆ.

## ಮೀನುಗಾರಿಕೆ

ಮೀನುಗಾರಿಕೆಯ ವಿಷಯದಲ್ಲಿ ನಾನು ಒಂದೆರಡು ವಿಚಾರಗಳನ್ನು ಹೇಳುತ್ತೇನೆ. ಈಗ ಎರಡು ವರ್ಷಗಳಿಂದ ಈಚೆಗೆ ಈ ಖಾತೆಗೆ ಪ್ರತ್ಯೇಕವಾದ ಒಬ್ಬರು ಮಂತ್ರಿಗಳನ್ನು ನೇಮಿಸಿದ್ದಾರೆ. ಅದರ ಪರಿಣಾಮನಾಗಿ ದೇಶದ ಎಲ್ಲಾ ಭಾಗಗಳಲ್ಲಿಯೂ ಮೀನುಗಾರಿಕೆಯ ಉಪಯೋಗ ಜನಗಳಿಗೆ ದೊರೆತಿವೆ. ಇದರಿಂದ ಆಹಾರದ ಪರಿಸ್ಥಿತಿಯೂ ಸ್ವಲ್ಪಮಟ್ಟಿಗೆ ಸುಧಾರಣೆಯಾಗುತ್ತದೆ. ಸಣ್ಣ ಸಣ್ಣ ಕೆರೆಗಳಲ್ಲಿ ಕೂಡ ಈ ಮೀನುಗಾರಿಕೆಯ ಉದ್ಯಮವನ್ನು ಕೈಗೊಂಡು ಸರ್ಕಾರದವರು ನಡೆಸುತ್ತಿದ್ದಾರೆ. ಈ ಉದ್ಯಮವನ್ನು ಒಂದು ಉತ್ತಮ ಮಟ್ಟಕ್ಕೆ ತರುವುದಕ್ಕೆ ಸರ್ಕಾರದವರು ಹೆಚ್ಚಿನ ಪ್ರೋತ್ಸಾಹವನ್ನು ಕೊಟ್ಟಿದ್ದಾರೆ. ಜನತೆಗೆ ಅದರ ಪ್ರಯೋಜನ ಹೆಚ್ಚು ಹೆಚ್ಚಾಗಿ ದೊರೆಯುವಂತೆ ಮಾಡಬೇಕು.

## ಪಶುಸಂಗೋಪನೆ ಅಮೃತ ಮಹಲ್ ಕಾವಲುಗಳ ರಕ್ಷಣೆಯಾಗಲಿ

ಗೋಸಂಪತ್ತಿನ ಬಗ್ಗೆ ಹೇಳುವುದಾದರೆ ಈಗ ಗ್ರಾಮಾಂತರ ಪ್ರದೇಶಗಳಲ್ಲಿ ಎಲ್ಲೆಲ್ಲಿ ಅಮೃತ ಮಹಲ್ ಕಾವಲುಗಳು ಇವೆಯೋ ಅದನ್ನೆಲ್ಲಾ ದಿನೇ ದಿನೇ ಜನಗಳಿಗೆ ಕೊಡುತ್ತಿರುವುದರಿಂದ ಅದು ಕಡಿಮೆಯಾಗುತ್ತಿದೆ. ಅಮೃತಮಹಲ್ ಕಾವಲುಗಳಲ್ಲಿ ಉತ್ತಮವಾದ ತಳಿಯನ್ನು, ಉತ್ತಮವಾದ ಜಾನುವಾರುಗಳನ್ನು ತಯಾರು ಮಾಡತಕ್ಕಂಥ ಒಂದು ಕಾರ್ಯ ಕುಂಠಿತವಾಗಿದೆ. ಈ ರೀತಿಯಾಗಿ ತಳಿಗಳು ಕುಂಠಿತವಾದದ್ದು ರೈತರಿಗೆ ಬಹಳ ತೊಂದರೆಯಾಗಿದೆ ಅಮೃತಮಹಲ್ ಕಾವಲುಗಳಲ್ಲಿ ಒಳ್ಳೆಯ ಜಾನುವಾರುಗಳನ್ನು ಒಳ್ಳೆಯ ಹಸುಗಳನ್ನು, ಒಳ್ಳೆಯ ತಳಿಯ ರಾಸುಗಳನ್ನು ತಂದು ಸಾಕಿ ಗ್ರಾಮಾಂತರ ಪ್ರದೇಶಗಳಲ್ಲಿ ರೈತರಿಗೆ ಒಳ್ಳೆಯ ತಳಿಯನ್ನು ಒದಗಿಸುವಂಥಾ, ಹಂಚುವಂತಹ ಕೆಲಸವನ್ನು ಮಾಡಬೇಕು. ಮತ್ತು ತಳಿಗಳನ್ನು ಉತ್ತಮಪಡಿಸಬೇಕು.

## ಕೃಷಿಕರಿಗೆ ಹೆಚ್ಚಿನ ಹಣದ ನೆರವು ನೀಡಿ

ಇನ್ನು ವ್ಯವಸಾಯಕ್ಕೆ ಸಂಬಂಧಪಟ್ಟ ಹಾಗೆ ಹೇಳುವುದಾದರೆ ವ್ಯವಸಾಯಕ್ಕೆ ಇನ್ನೂ ಹೆಚ್ಚಿನ ಹಣವನ್ನು ಒಗದಿಸಿ ರೈತರಿಗೆ ಹೆಚ್ಚಿನ ಪ್ರೋತ್ಸಾಹವನ್ನು ಕೊಡಬೇಕು. ರೈತ ಬೆಳೆದಂತಹ ರಾಗಿ, ಭತ್ತ ಮುಂತಾದ ಆಹಾರ ಧಾನ್ಯಗಳಿಗೆ ಸರಿಯಾದಂತಹ

ಬೆಲೆ ಸಿಕ್ಕುವಂತೆ ಸರ್ಕಾರದವರು ವ್ಯವಸ್ಥೆ ಮಾಡಬೇಕು. ಈಗ ರೈತ ವ್ಯವಸಾಯವನ್ನು ಮಾಡಬೇಕಾದರೆ ಹೆಚ್ಚಿನ ಬೆಲೆಯನ್ನು ಕೊಟ್ಟು ಗೊಬ್ಬರ, ವ್ಯವಸಾಯದ ಇತರ ಸಲಕರಣೆಗಳನ್ನು ಕೊಂಡುಕೊಳ್ಳಬೇಕಾಗುತ್ತದೆ. ಮತ್ತು ಅವನು ನಾನಾ ರೀತಿಯಲ್ಲಿ ವ್ಯವಸಾಯಕ್ಕೆ ಹಣವನ್ನು ಖರ್ಚು ಮಾಡಬೇಕಾಗುತ್ತದೆ. ಇದರ ಜೊತೆಗೆ ಕಂದಾಯವನ್ನು ಜಾಸ್ತಿ ಕೊಡಬೇಕಾಗುತ್ತದೆ. ಮತ್ತು ವ್ಯವಸಾಯಕ್ಕೆ ಬೇಕಾದಂತಹ ಟ್ರ್ಯಾಕ್ಟರು ಮತ್ತು ಬುಲ್ಡೋಜರ್‌ಗಳನ್ನು ಪಡೆಯಬೇಕಾಗಿದ್ದರೆ ಅದಕ್ಕೆ ಅವನು ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡಿ ರೈತ ಕಷ್ಟಪಟ್ಟು ಆಹಾರಧಾನ್ಯಗಳನ್ನು ಬೆಳೆದರೆ ಅವನು ಬೆಳೆದಂತಹ ಬೆಳೆಗೆ, ಧಾನ್ಯಕ್ಕೆ ಕಡಿಮೆ ಬೆಲೆ ಸಿಕ್ಕುವುದಾದರೆ ಅವನಿಗೆ ಉತ್ಸಾಹ ಕಡಿಮೆಯಾಗುತ್ತದೆ. ಅವನು ವ್ಯವಸಾಯದಲ್ಲಿ ತೀರಾ ಹಿಂದುಳಿಯುತ್ತಾನೆ. ಆದ್ದರಿಂದ ರೈತರು ಬೆಳೆದಂತಹ ಧಾನ್ಯವನ್ನು ಸರ್ಕಾರದವರೇ ಕೊಂಡು ರೈತರಿಗೆ ಉಂಟಾಗುವ ನಷ್ಟವನ್ನು ಭರ್ತಿಮಾಡಿಕೊಡಬೇಕು. ಆ ರೀತಿ ಮಾಡುವುದಾದರೆ ರೈತ ಸಂತೋಷದಿಂದ ಕೆಲಸ ಮಾಡುತ್ತಾನೆ. ಜಮೀನನ್ನು ಹೆಚ್ಚು ಉತ್ಸಾಹದಿಂದ ಸಾಗುವಳಿ ಮಾಡಿ ಹೆಚ್ಚು ಹೆಚ್ಚು ಆಹಾರವನ್ನು ಉತ್ಪಾದನೆ ಮಾಡುತ್ತಾನೆ. ಮತ್ತು ಪಟ್ಟಣಗಳಲ್ಲಿರತಕ್ಕ ನೌಕರ ವರ್ಗದವರಿಗೆ ಕೈಗಾರಿಕೆಗಳಲ್ಲಿ ಕೆಲಸ ಮಾಡತಕ್ಕ ಕಾರ್ಮಿಕರಿಗೆ ಎಲ್ಲರಿಗೂ ಅವನು ಆಹಾರ ಧಾನ್ಯವನ್ನು ಒದಗಿಸುತ್ತಾನೆ. ಆದ್ದರಿಂದ ಈ ಕಡೆ ಸರ್ಕಾರದವರು ಗಮನ ಕೊಡಬೇಕು. ನಾವು ಹೇಳತಕ್ಕಂಥಾದ್ದು ಅರಣ್ಯರೋದನ ವಾಗಬಾರದು. ನಾವು ಹೇಳಿದಂತಹ ವಿಚಾರಗಳನ್ನು ಮಾನ್ಯ ಮಂತ್ರಿಗಳು ಗಮನಕ್ಕೆ ತೆಗೆದುಕೊಂಡು ಅವುಗಳನ್ನು ಕಾರ್ಯಗತ ಮಾಡಬೇಕು. ಇದನ್ನೆಲ್ಲಾ ಕಾರ್ಯಗತ ಮಾಡತಕ್ಕ ಅಧಿಕಾರಿಗಳು ಏನಿದ್ದಾರೆ ಅವರಿಗೆ ಸರ್ಕಾರದವರು ತಿಳುವಳಿಕೆ ಕೊಡುವಾಗ ಚೆನ್ನಾಗಿ ವಿಚಾರ ಮಾಡಿ ಯಾವ ರೀತಿ ಕೆಲಸಗಳನ್ನು ಮಾಡಬೇಕೆಂಬುದನ್ನು ಸೂಚನೆಯನ್ನು ಕೊಡಬೇಕು. ರೈತರು ಸರ್ಕಾರದ ಹತ್ತಿರ ಬಾರದ ಹಾಗೆ ಅವರು ಇದ್ದಲ್ಲಿಯೇ ಕೆಲಸಗಳು ಆಗುವಂತಹ ಒಂದು ವ್ಯವಸ್ಥೆಯನ್ನು ಸರ್ಕಾರದವರು ಮಾಡಬೇಕು. ದೇಶದ ಉನ್ನತಿಗೆ ನಾವೆಲ್ಲರೂ ಹೊಣೆಗಾರಿಕೆಯನ್ನು ಹೊರಬೇಕೆಂದು ನಾನು ಹೇಳುತ್ತೇನೆ.

ಇವೊತ್ತು ಸ್ಟೇಟ್ ಮಾರ್ಕೆಟಿಂಗ್ ಸೊಸೈಟಿಗಳಲ್ಲಿ ಸುಮಾರು ಒಂದೂವರೆ ಕೋಟಿ ರೂಪಾಯಿ ಲಾಸ್ ಆಗಿದೆ. ಪ್ರತಿ ವರ್ಷ ಈ ರೀತಿ ಸೊಸೈಟಿಗಳಲ್ಲಿ ಲಾಸ್ ಆಗುತ್ತಿದ್ದರೆ ಸೊಸೈಟಿಗಳು ಮುಂದೆ ಬರುವುದಿಲ್ಲ. ಮತ್ತು ಈ ರೀತಿ 4

1753-11

ಲಕ್ಷ, 5ಲಕ್ಷ, 8ಲಕ್ಷ ರೂಪಾಯಿಗಳು ಲಾಸ್ ಆದರೆ, ಅದರ ಹೊರೆಯನ್ನು ಹೊರತಕ್ಕವರು ಯಾರು? ಅದರ ಹೊರೆಯನ್ನು ಬಡ ಬೋರೇಗೌಡನು ಹೊರಬೇಕಾಗುತ್ತದೆ. ಆದ್ದರಿಂದ ಆ ರೀತಿ ಸೊಸೈಟಿಗಳಲ್ಲಿ ಲಾಸ್ ಆಗುವುದಕ್ಕೆ ಅವಕಾಶವನ್ನು ಕೊಡದಂತೆ ಸರ್ಕಾರದವರು ಭದ್ರ ಮಾಡಬೇಕು. ಮತ್ತು ಆ ಲಾಸ್ ಆಗುವುದಕ್ಕೆ ಯಾರು ಕಾರಣ ಕರ್ತರಾಗಿರುತ್ತಾರೆಯೋ ಅವರಿಂದ ಆ ಹಣವನ್ನು ವಸೂಲು ಮಾಡಬೇಕು. ಈ ದಿವಸ ನಾನು ಹೆಚ್ಚು ಕಾಲ ಮಾತನಾಡುವುದಕ್ಕೆ ಅಧ್ಯಕ್ಷರು ಕಾಲಾವಕಾಶವನ್ನು ಕೊಡದೇ ಇರುವುದರಿಂದ ಇನ್ನು ಉಳಿದ ವಿಚಾರಗಳನ್ನು ನಾನು ಸರ್ಕಾರಕ್ಕೆ ಬೇರೆ ಮಾರ್ಗದಲ್ಲಿ ತಿಳಿಸುತ್ತೇನೆ. ಇಷ್ಟು ಹೇಳಿ ಮಾನ್ಯ ಅಧ್ಯಕ್ಷರಿಗೆ ವಂದಿಸಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

## "ಬೆಂಗಳೂರು ದಿನ ಬೆಳಗಾದರೆ ಬೆಳೆಯುತ್ತಿದೆ ಈ ವಿಚಾರದಲ್ಲಿ ಸರಕಾರದವರು ಸರಿಯಾದ ವ್ಯವಸ್ಥೆ ಮಾಡಬೇಕಾಗಿದೆ"

**23ನೇ ಮಾರ್ಚ್ 1970**

ಈ ದಿವಸ ಮೂರು ಬೇಡಿಕೆಗಳು ನಮ್ಮ ಮುಂದಿವೆ, ಅವು ಪ್ರಾಮುಖ್ಯವಾದ ಬೇಡಿಕೆಗಳು, ಸ್ಥಳೀಯ ಸಂಸ್ಥೆಗಳು, ಸಾರಿಗೆ ಸಂಸ್ಥೆ ಮತ್ತು ಹರಿಜನರ ಸಂಸ್ಥೆ ಇವು ಮುಖ್ಯವಾದ ಇಲಾಖೆಗಳು. ದೇಶದಲ್ಲಿ ಪ್ರಜಾ ಪ್ರಭುತ್ವ ಬಂದ ಮೇಲೆ ಇಲ್ಲಿಯವರೆಗೆ 23 ವರ್ಷಗಳಲ್ಲಿ ಹರಿಜನರ ಬಗ್ಗೆ ಸರಕಾರ ಯಥೇಷ್ಟವಾಗಿ ಸೌಲಭ್ಯ ಒದಗಿಸಿದೆ. ಆದರೂ ತೃಪ್ತಿಯಾಗುವ ಪರಿಸ್ಥಿತಿಯಿಲ್ಲ.

## "ಜನರಲ್ ಹಾಸ್ಟೆಲ್ ದ್ವಾರಾ ಮೇಲು ಕೀಳು ದೂರ"

ಮೊದಲು ಜನರಲ್ ಹಾಸ್ಟಲುಗಳನ್ನು ತೆರೆದು ಎಲ್ಲಾ ಜನರೂ ಒಂದೇ ಕಡೆ ಸೇರುವಂತೆ ಮಾಡಬೇಕು. ಹಾಗೆ ಮಾಡುವುದರಿಂದ ಸಮಾಜದಲ್ಲಿರುವ ಭೇದಭಾವನೆ ದೂರವಾಗುವುದು, ಒಬ್ಬರಿಗೊಬ್ಬರಿಗೆ ಅನ್ಯೋನ್ಯತೆ ಬೆಳೆಯುವುದು. ಹರಿಜನರಿಗೆ ಸರಕಾರದವರು ಸಮಾಜ ಕಲ್ಯಾಣ ಇಲಾಖೆ ಮೂಲಕ ಅನೇಕ ಸೌಲಭ್ಯಗಳನ್ನು ಒಂದಲ್ಲ ಒಂದು ರೀತಿಯಲ್ಲಿ ಒದಗಿಸುತ್ತಿದ್ದಾರೆ. ಅವರಿಗೆ ಕೊಟ್ಟಿರುವ ಜಮೀನಿಗೆ ಇನ್ನೂ ಸರಿಯಾದ ಪಟ್ಟೆ ಕೊಟ್ಟಿಲ್ಲ, ಮಂಜೂರಾದ ಜಮೀನು ಇನ್ನೂ ಪೂರ್ಣವಾಗಿ ಅವರ ವಶಕ್ಕೆ ಬಂದಿಲ್ಲ. ಕುಡಿಯುವ ನೀರಿನ ಬಾವಿಗಳ ಪೂರ್ಣ

ಪ್ರಯೋಜನ ಎಲ್ಲರಿಗೂ ದೊರೆತಿಲ್ಲ. ಆದುದರಿಂದ ಸಮಾಜ ಕಲ್ಯಾಣ ಇಲಾಖೆಗೆ ಮಾಡಿರುವ ಬಜೆಟ್ ಸಾಲದು. ದೇಶ ವಿಶಾಲವಾಗಿರುವಾಗ ಹೆಚ್ಚು ಹಣ ಒದಗಿಸಬೇಕಾದ್ದು ಧರ್ಮ, ಹರಿಜನರಿಗೇ ಅಲ್ಲದೆ ಗೊಲ್ಲರು, ಲಂಬಾಣಿಗಳು ಮುಂತಾದವರೆಲ್ಲರಿಗೂ ಸೇರಿ ಸಂಸ್ಥೆ ಇದೆ. ಪ್ರತ್ಯೇಕ ಹಾಸ್ಟಲು ತೆರೆಯುವುದರಿಂದ ಹಣ ಖರ್ಚಾಗುವುದೇ ಹೊರತು ಅದರ ಲಾಭ ಈ ಜನರಿಗೆ ಹೆಚ್ಚಾಗಿ ಸಿಕ್ಕುವುದಿಲ್ಲ. ಆದುದರಿಂದ ಸಮಾಜ ಕಲ್ಯಾಣ ಇಲಾಖೆಯವರು ಇವರಿಗೆ ವ್ಯವಸ್ಥೆ ಮಾಡುವಾಗ ಜನರಲ್ ಹಾಸ್ಟಲುಗಳನ್ನಾದರೂ ಮಾಡಬೇಕು.

ಪ್ರಭಾಕರ್‌ರವರು 5 ವರ್ಷಗಳ ಕಾಲ ಮಂತ್ರಿಗಳಾಗಿದ್ದರು, ಅವರ ಕೈಲಿ ಈ ಸಂಸ್ಥೆ ಇದ್ದರೂ ಅವರ ಕೈಲಿ ಬೇಕಾದ ಕೆಲಸಗಳನ್ನು ಮಾಡುವುದಕ್ಕೆ ಆಗಲಿಲ್ಲವೆಂದು ನಾನು ಭಾವಿಸಿದ್ದೇನೆ. ನಾನು ಅವರೊಂದಿಗೆ ಅನೇಕ ಸಾರಿ ಪ್ರಸ್ತಾಪ ಮಾಡಿದ್ದೆ, ಬಜೆಟ್ಟಿನಲ್ಲಿ ಸೇರಿಸಿದ್ದರೂ ಫಲದಾಯಕವಾಗಿಲ್ಲ. ಕಾರಣ ಗೊತ್ತಿಲ್ಲ, ಸರಕಾರದವರು ಈ ಜನಾಂಗದ ಬಗ್ಗೆ ಹೆಚ್ಚಿನ ಮಾನ್ಯತೆ ಕೊಟ್ಟು ಸಾಧ್ಯವಾದಷ್ಟು ಹೆಚ್ಚಿನ ಸಹಾಯ ಮಾಡಬೇಕು.

## ಸ್ಥಳೀಯ ಸಂಸ್ಥೆಗಳಿಗೆ ಅನುದಾನ ಸಾಲದು

ಸ್ಥಳೀಯ ಸಂಸ್ಥೆಗಳ ಬಗ್ಗೆ ಮಾತನಾಡುವುದಾದರೆ ಅವುಗಳಿಗೆ ಒದಗಿಸುವ ಹಣ ಸಾಲದು. ಸಂಸ್ಥಾನಾಮಳೆ ಮುನಿಸಿಪಾಲಿಟಿಗಳ ಪಾರಿಶುದ್ಧತೆ ಉತ್ತಮವಾಗಬೇಕಾದರೆ ನೀರಿನ ಸೌಲಭ್ಯ. ಆಸ್ಪತ್ರೆ ಮತ್ತು ರಸ್ತೆಗಳ ಸೌಲಭ್ಯ ಆಗಬೇಕಾಗಿದೆ. ಇದಕ್ಕಾಗಿ ಕೊಟ್ಟಿರುವ ಹಣ ಸಾಲದು. ಮುಂದಾದರೂ ಸರಕಾರದವರು ಇದನ್ನು ಮನಗಂಡು ಸ್ಥಳೀಯ ಸಂಸ್ಥೆಗಳ ವಿಚಾರದಲ್ಲಿ ವ್ಯವಸ್ಥೆ ಮಾಡಬೇಕು. ಉದಾಹರಣೆಗೆ ಬೆಂಗಳೂರು ತೆಗೆದುಕೊಂಡರೆ ನಂಜಪ್ಪನವರು ಕೆಲವು ವಿಷಯಗಳನ್ನು ಹೇಳಿದ್ದಾರೆ, ಅದು ನಿಜಾಂಶ. ಬೆಂಗಳೂರು ದಿನ ಬೆಳಗಾದರೆ ಬೆಳೆಯುತ್ತಿದೆ. ಈ ವಿಚಾರದಲ್ಲಿ ಸರಕಾರದವರು ಸರಿಯಾದ ವ್ಯವಸ್ಥೆ ಮಾಡಬೇಕಾಗಿದೆ. ಮುನಿಸಿ ಪಾಲಿಟಿಗಳ ವಿಚಾರದಲ್ಲಿ ಈಗ ಚುನಾವಣೆಯಾಗದೆ "ಸ್ಟೇ" ಆಗಿದೆ. ಅವರು ಹೇಳಿದ ರೀತಿಯಲ್ಲಿ ಕೆಲವು ಸಮಿತಿಗಳನ್ನಾದರೂ ಮಾಡಿ ದಿನಚರಿ ಕೆಲಸ ಚುನಾವಣೆಯಾಗುವವರೆಗೆ ನಡೆಯುವುದಕ್ಕೆ ಅವಕಾಶ ಮಾಡಬೇಕು.

# "ಬಸ್ಸುಗಳ ಸಂಖ್ಯೆ ಹೆಚ್ಚಿಸಿ"

ಸಾರಿಗೆ ಸಂಸ್ಥೆಯಲ್ಲಿದ್ದ ಕೆಲವು ಲೋಪದೋಷಗಳನ್ನು ಮಾನ್ಯ ಸ್ನೇಹಿತರು ಹೇಳಿದ್ದಾರೆ ಸರ್ಕಾರದವರು ಉತ್ತಮವಾದ ಎಲ್ಲ ಮಾರ್ಗಗಳನ್ನೂ ತಮ್ಮ ವಶಪಡಿಸಿಕೊಂಡಿದ್ದಾರೆ, ಸಂತೋಷ ಆದರೆ ಅವರು ನಿಗದಿ ಮಾಡಿರತಕ್ಕ ಬಸ್ಸುಗಳ ಸಂಖ್ಯೆ ಸಾಲದು, ಪ್ರಯಾಣಿಕರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿರುವ ಕಾಲದಲ್ಲಿ ಅದಕ್ಕನುಗುಣವಾಗಿ ಬಸ್ಸುಗಳ ಸಂಖ್ಯೆಯನ್ನು ಹೆಚ್ಚು ಮಾಡಬೇಕಾದುದು ಸರ್ಕಾರದ ಕರ್ತವ್ಯ. ಅನೇಕ ಜನ ಕಂಡಕ್ಟರುಗಳು ಮತ್ತು ಡ್ರೈವರುಗಳು ಟ್ರೈನಿಂಗ್ ಇಲ್ಲದೆ ಇರುವವರಿದ್ದಾರೆ. ಪ್ರತಿನಿತ್ಯ ಅನೇಕ ಅಪಾಯಗಳು ಆಗುವುದನ್ನು ಪತ್ರಿಕೆಗಳಲ್ಲಿ ಓದುತ್ತೇವೆ ಮತ್ತು ಪ್ರತ್ಯಕ್ಷವಾಗಿ ನೋಡುತ್ತೇವೆ. ಸಾರಿಗೆ ಮಂತ್ರಿಗಳು ಇದರ ಕಡೆಗೆ ಗಮನಕೊಟ್ಟು ಚೆನ್ನಾಗಿ ತರಬೇತಾದ ಡ್ರೈವರುಗಳನ್ನು ನೇಮಕ ಮಾಡುವ ವ್ಯವಸ್ಥೆಯನ್ನು ಮಾಡಬೇಕು.

4. ಪಿ.ಎಂ.

ಕಂಟ್ರಾಕ್ಟ್ ಬಸ್ಸುಗಳಿಗೆ ಕೆಲವು ಮಾರ್ಗಗಳಲ್ಲಿ ಅವಕಾಶವನ್ನು ಕೊಟ್ಟಿದ್ದಾರೆ. ಬೆಂಗಳೂರು, ಹರಿಹರ, ಬೆಂಗಳೂರು–ಮಂಗಳೂರು, ಬೆಂಗಳೂರು–ಧಾರವಾಡ, ಇಂಥ ಮಾರ್ಗಗಳಲ್ಲಿ ಕಾಂಟ್ರಾಕ್ಟ್ ಬಸ್ಸುಗಳು ಹೋಗಲು ಅವಕಾಶ ಕೊಟ್ಟಿರುವುದರಿಂದ ಸರ್ಕಾರಿ ಬಸ್ಸುಗಳಿಗೆ ತುಂಬ ನಷ್ಟವಾಗಿ, ಸರ್ಕಾರ ಯಾವ ಉದ್ದೇಶದಿಂದ ರಸ್ತೆ ಸಾರಿಗೆ ಉದ್ಯಮವನ್ನು ತೆಗೆದುಕೊಂಡು ರಾಷ್ಟ್ರೀಕರಣ ಮಾಡಿತೋ ಆ ಉದ್ದೇಶ ನೆರವೇರದಂತೆ ಆಗಿದೆ. ಈ ಉದ್ಯಮದಿಂದ ಸರ್ಕಾರಕ್ಕೆ ಲಾಭ ಸಿಕ್ಕಬೇಕಾಗಿದ್ದರೆ ಪ್ರೈವೇಟ್ ಆಪರೇಟರುಗಳು ಬಸ್ಸುಗಳನ್ನು ಓಡಿಸುವುದನ್ನು ರಾಷ್ಟ್ರೀಕರಣ ಮಾಡಿರುವ ಮಾರ್ಗಗಳಲ್ಲಿ ನಿಲ್ಲಿಸಬೇಕು. ಇದಲ್ಲದೆ ಬಸ್ಸುಗಳಲ್ಲಿ ಓವರ್ ಲೋಡ್ ತಪ್ಪಿಸಬೇಕು. ಅನೇಕ ಮಾನ್ಯ ಸ್ನೇಹಿತರು ಈ ಬಗ್ಗೆ ಹೇಳಿರುವುದರಿಂದ ನಾನು ಹೆಚ್ಚು ಹೇಳುವುದಕ್ಕೆ ಹೋಗುವುದಿಲ್ಲ.

ಬೆಂಗಳೂರು ನಗರದಲ್ಲಿ ಪ್ರಯಾಣಿಕರಿಗೆ ಬಹಳ ತೊಂದರೆ ಇದೆ. ಆಫೀಸುಗಳಿಗೆ ಬರತಕ್ಕ ನೌಕರರು ಹತ್ತು ಗಂಟೆಗೆ ಬಸ್ಸಿಗಾಗಿ ಕಾದಿದ್ದರೆ ಮಧ್ಯಾಹ್ನವಾದರೂ ಬಸ್ಸುಗಳು ಬರದೆ, ಅವರು ಸಕಾಲಕ್ಕೆ ತಮ್ಮ ತಮ್ಮ ಸ್ಥಳಗಳಿಗೆ ಹೋಗುವುದಕ್ಕೆ ತೊಂದರೆಯಾಗಿದೆ. ಅದಕ್ಕಾಗಿ ನಗರದಲ್ಲಿನ ಬಸ್ಸುಗಳ ಸಂಖ್ಯೆ ಹೆಚ್ಚಬೇಕು, ಅವುಗಳ ವ್ಯವಸ್ಥೆ ಉತ್ತಮಗೊಳ್ಳಬೇಕು, ವಾಹನಗಳ ಬಗ್ಗೆ ಸರಿಯಾದ

ನಿಗಾವಣೆಯನ್ನು ಸರ್ಕಾರ ವಹಿಸಬೇಕು. ಇನ್ನು ಮೇಲಾದರೂ ಟ್ರೈನಿಂಗ್ ಆದಂಥ ಡ್ರೈವರ್ ಮತ್ತು ಕಂಡಕ್ಟರುಗಳನ್ನು ಇಟ್ಟುಕೊಳ್ಳುವುದಕ್ಕೆ ವ್ಯವಸ್ಥೆ ಮಾಡಬೇಕು. ಇಲ್ಲದೆ ಹೋದರೆ ಬೆಂಗಳೂರು ಪಟ್ಟಣದಲ್ಲಿ ಮತ್ತು ಸಂಸ್ಥಾನದಲ್ಲಿ ಎಲ್ಲಾ ಕಡೆಗಳಲ್ಲಿಯೂ ತೊಂದರೆಗಳು ಹೆಚ್ಚಾಗಿ ಅಪಾಯಗಳಾಗುವುದಕ್ಕೆ ಅವಕಾಶವಾಗುತ್ತದೆ. ಆಗಾಗ್ಗೆ ಅಪಾಯಗಳು ಸಂಭವಿಸುತ್ತಿರುವುದರಿಂದ ಜನರು ಭಯಪಟ್ಟಿದ್ದಾರೆ. ಇಂಥ ಭಯಕ್ಕೆ ಅವಕಾಶವಿಲ್ಲದಂತೆ ಸಾರಿಗೆ ಸಂಸ್ಥೆಯ ಮಂತ್ರಿಗಳು ಅವಕಾಶ ಮಾಡಿಕೊಡಬೇಕು. ಸಾರಿಗೆ ಸಂಸ್ಥೆ ಉತ್ತಮವಾಗಿ ಕೆಲಸ ಮಾಡಬೇಕಾದರೆ, ಸರ್ಕಾರದ ಉದ್ದೇಶ ನೆರವೇರಬೇಕಾದರೆ, ಪ್ರಜೆಗಳ ಬಗ್ಗೆ ಅವರಿಗೆ ಅನುಕಂಪವಿರುವಾಗ, ಪ್ರಜೆಗಳ ನೆಮ್ಮದಿಯನ್ನು ಕಾಪಾಡಲು ತಕ್ಕ ವ್ಯವಸ್ಥೆಯನ್ನು ಮಾಡುವುದು ಉತ್ತಮ.

ದೊಡ್ಡ ರಸ್ತೆಗಳಲ್ಲಿ ಬಸ್ ಸಂಚಾರದ ಬಗ್ಗೆ ಅನೇಕ ಸಾರಿ ಹೇಳಿದ್ದೇನೆ, ಸರ್ಕಾರಿ ಬಸ್ಸುಗಳು ಸಂಚಾರ ಮಾಡುವ ಮಾರ್ಗಗಳಲ್ಲಿ ಬಸ್ ಷೆಲ್ಟರುಗಳನ್ನು ಕಟ್ಟಬೇಕು ಎಂದು ಹೇಳಿದ್ದರೂ ಇನ್ನೂ ಆಗಿಲ್ಲ. ಕಾರಣ ಗೊತ್ತಿಲ್ಲ. ಬೆಂಗಳೂರು ನಗರದಲ್ಲಿ ಮಾತ್ರ ಕೆಲವು ಕಡೆ ಬಸ್ ಷೆಲ್ಟರುಗಳಾಗಿವೆ, ಇನ್ನೂ ಕೆಲವು ಕಡೆ ಆಗಿಲ್ಲ. ಸಂಸ್ಥಾನದಲ್ಲಿ ಎಲ್ಲ ಕಡೆಯೂ ಬಸ್ ಷೆಲ್ಟರುಗಳಾಗಿ, ಪ್ರಯಾಣಿಕರಿಗೆ ಮಳೆ ಮತ್ತು ಬಿಸಿಲಿನಿಂದ ತೊಂದರೆಯಾಗದಂತೆ ಕಾಪಾಡುವುದಕ್ಕೆ ಸಾರಿಗೆ ಸಂಸ್ಥೆ ಹೆಚ್ಚು ಬಸ್ ಷೆಲ್ಟರುಗಳನ್ನು ನಿರ್ಮಿಸಬೇಕು ಮತ್ತು ಹೆಚ್ಚು ಬಸ್ಸುಗಳನ್ನು ತರಿಸಿ ತನ್ಮೂಲಕ ಪ್ರಯಾಣಿಕರಿಗೆ ಸೌಲಭ್ಯವನ್ನುಂಟು ಮಾಡಬೇಕು. ಅಲ್ಲದೆ ಸರ್ಕಾರದವರು ವಹಿಸಿಕೊಂಡಿರುವ ಮಾರ್ಗಗಳಲ್ಲಿ ಮತ್ತೆ ಯಾರಿಗೂ ಅವಕಾಶವನ್ನು ಕೊಡಬಾರದು. ಬೆಂಗಳೂರು ನಗರದಲ್ಲಿ ಈಗ ಓಡಾಡುವ ಬಸ್ಸುಗಳು ಏನೇನೂ ಸಾಲದು. ಬಹಳ ಹೊತ್ತು ಕಾದಿದ್ದರೂ, ಗಂಟೆಗಟ್ಟಲೆ ಕಾದಿದ್ದರೂ ಬಸ್ಸುಗಳಲ್ಲಿ ಸ್ಥಳ ಸಿಕ್ಕುವುದಿಲ್ಲ. ಹೆಂಗಸರು ಮತ್ತು ಮಕ್ಕಳು ತುಂಬ ಕಷ್ಟಪಡತಕ್ಕ ಸಂದರ್ಭವನ್ನು ಕೂಡ ನಾವು ನಗರದಲ್ಲಿ ಓಡಾಡುವಾಗ ನೋಡಿದ್ದೇವೆ. ಸರ್ಕಾರ ಅಥವಾ ಮಂತ್ರಿಗಳು ನಾವು ಹೇಳತಕ್ಕ ವಿಷಯಗಳನ್ನೆಲ್ಲ ತಿಳಿದುಕೊಂಡು ಸರಿಯಾದ ವ್ಯವಸ್ಥೆಯನ್ನು ಮಾಡಿದ ಹೊರತು ಜನರಿಗೆ ಏನೂ ಪ್ರಯೋಜನವಾಗುವುದಿಲ್ಲ.

ಪಟ್ಟಣಗಳಲ್ಲಿ ಕಟ್ಟಡಗಳಿಗೆ ಲೈಸೆನ್ಸ್ ಕೊಡುವಾಗ ಉಂಟಾಗತಕ್ಕ ತೊಂದರೆಯನ್ನು ಪರಿಹಾರ ಮಾಡತಕ್ಕ ವ್ಯವಸ್ಥೆಯನ್ನು ಸಂಬಂಧಪಟ್ಟ ಮಂತ್ರಿಗಳು ಮಾಡಿ, ಈಗ ಆಗತಕ್ಕ ಅನಾಹುತಗಳಿಗೆ, ತೊಂದರೆಗಳಿಗೆ ಅವಕಾಶವಿಲ್ಲದಂತೆ ಮಾಡಿ ಪುರಜನರ ಗೌರವ ಘನತೆಗಳನ್ನು ಕಾಪಾಡಬೇಕು.

ಹಸುವೀಗಿ ಹಾಲ್ಕೊಟ್ಟು ಶಿಶುವೀಗಿ ಬೆಣ್ಣೆಕೊಟ್ಟು
ಬಿಸಲೀಗಿ ನಿಂತವರ ನೆರಳೀಗಿ ಕರೆದರೆ
ಆಸವಲ್ಲದ ಪುಣ್ಯ ಮಗನೀಗಿ

**– ಜಾನಪದ ಗೀತೆ**

ಶ್ರದ್ಧಾಂಜಲಿ

ಲೋಕದಾಗಿರೂ ತನಕ ಬೇಕಾಗಿ ಇರಬೇಕ
ಸಾಕಾಗಿ ಜೀವನ ಸದರಿಗೆ ಹೋಗುವಾಗ
ಎಲ್ಲರು ಅಳುತಾರ ನೆನೆ ನೆನೆದು॥

ಎಲ್ಲಾರ ಕೈಯಲ್ಲಿ ಒಳ್ಳೆನೆನಿಸಿಕೊಂಡ
ನಲ್ನುಡಿಯಿಂದ ಗುಣದಿಂದ ಶರಣಯ್ಯ
ಬೆಲ್ಲ ನೀರಾದ ಜನರೀಗೆ

–ಜನಪದ ಮುಕ್ತಕ

## 29–1–1981 (ಸಂತಾಪ ಸೂಚಕ ನಿರ್ಣಯ ವಿಧಾನ ಸಭೆ)

**ಶ್ರೀ.ಡಿ. ದೇವರಾಜ ಅರಸು (ವಿರೋಧ ಪಕ್ಷದ ನಾಯಕರು)** (ಮುಖ್ಯ ಮಂತ್ರಿಗಳು) ಶ್ರೀಮಾನ್ ಸೋಲೂರು ಸಿದ್ದಪ್ಪನವರು ನನಗೆ ತುಂಬಾ ಪರಿಚಯಸ್ಥರಾಗಿದ್ದರು. ಅವರ ಜೊತೆಯಲ್ಲಿ ಕೆಲಸ ಮಾಡುವಂತಹ ಅವಕಾಶ ನನಗಿತ್ತು. ಅವರಿಗೆ ತುಂಬಾ ವಯಸ್ಸಾಗಿತ್ತು. ತುಂಬು ಬಾಳನ್ನು ಬಾಳಿ ಹೋಗಿದ್ದಾರೆ. ಅವರಿಗೆ ಮರಣ ಕಾಲದಲ್ಲಿ ಬಹುಶಃ '90' ವರ್ಷಕ್ಕಿಂತ ಮೇಲಾಗಿರಬಹುದೆಂದು ಕೇಳಿದ್ದೇನೆ. ಅವರಲ್ಲಿ ನಾನು ಕಂಡ ವಿಶೇಷ ಗುಣವೆಂದರೆ, ಅವರು ಯಾವುದೇ ಸಂದರ್ಭದಲ್ಲಿ ತಮ್ಮನ್ನು ನಂಬಿದ ವ್ಯಕ್ತಿಯನ್ನು ಕೈ ಬಿಟ್ಟವರಲ್ಲ. ದಿವಂಗತ ಕೆಂಗಲ್ ಹನುಮಂತಯ್ಯನವರ ಜೊತೆಯಲ್ಲಿ ಬಂದವರು, ಕೊನೆಯವರೆವಿಗೂ ಅವರ ಸ್ನೇಹಿತರಾಗಿ ಉಳಿದಿದ್ದರು. ಅವರು ಜೀವನದಲ್ಲಿ ಬಹಳ ಸರಸಿಗಳಾಗಿದ್ದರು. ಬಹಳ ರಸಿಕರಾಗಿದ್ದರು. ಅವರು ಶಾಸನ ಸಭೆಯಲ್ಲಿ ಇರಲಿ, ಬಿಡಲಿ, ಕೊನೆ ತನಕ ತುಂಬು ಜೀವನವನ್ನು ನಡೆಸಿ ಈ ಲೋಕವನ್ನು ಬಿಟ್ಟಿದ್ದಾರೆ.

**ಶ್ರೀ ಎಸ್.ಆರ್. ಬೊಮ್ಮಾಂಯಿ (ಹುಬ್ಬಳ್ಳಿ ಶಾಸಕರು ನಂತರ ಮುಖ್ಯ ಮಂತ್ರಿ)** ನಾನು ಈ ಸಭೆಗೆ ಸದಸ್ಯನಾಗಿ ಬಂದಾಗ ಸೋಲೂರು ಸಿದ್ದಪ್ಪನವರೂ ಇಲ್ಲಿ, ಇದ್ದರು. ಅವರು ಹಳೆಯ ಮೈಸೂರಿನ ಪ್ರತೀಕವೆಂದು ನಾನು ತಿಳಿದು ಕೊಂಡಿದ್ದೆ. ಅವರು ಯಾವಾಗಲೂ ಹಳೆಯ ಮೈಸೂರಿನ ಪೇಟ, ಶುಭ್ರವಾದ ಬಟ್ಟೆ ಹಾಗೂ ಶಲ್ಯವನ್ನು ಧರಿಸುತ್ತಿದ್ದರು. ಅವರ ವೇಷ ಭೂಷಣವನ್ನು ನೋಡಿದಾಗ ಈ ಹಿರಿಯರಿಗೆ ನಮಸ್ಕಾರ ಮಾಡಬೇಕೆನ್ನುವ ಭಾವನೆ ನನ್ನಲ್ಲಿ ಮೂಡುತ್ತಿತ್ತು. ನಮ್ಮ ಪಕ್ಷ ಅಂದು ಎರಡಾದ ಮೇಲೆ ನಾವೊಂದು ಕಾಂಗ್ರೆಸಿನಲ್ಲಿ ಉಳಿದೆವು ಅವರೊಂದು ಕಾಂಗ್ರೆಸಿನಲ್ಲಿ ಉಳಿದರು. ಆ ಸಂದರ್ಭದಲ್ಲಿ ನಾವು ಅವರ ಊರಿಗೆ ಹೋಗಿದ್ದಾಗ, ಅವರು ಮಾಡಿದ್ದ ವ್ಯವಸ್ಥೆ ನೋಡಿದರೆ ಇಳಿವಯಸ್ಸಿನಲ್ಲಿಯೂ ಸಮಾಜಸೇವೆ, ಮಾಡತಕ್ಕ ಲವಲವಿಕೆ ಅವರಲ್ಲಿ ಎಷ್ಟಿತ್ತು ಎನ್ನುವುದು ಅರಿವಾಗುತ್ತಿತ್ತು.

**ಕು॥ ಎಸ್ ಪ್ರಮೀಳಾ (ಚಾಮರಾಜ ಪೇಟೆ)**

ಸೋಲೂರು ಸಿದ್ದಪ್ಪನವರು ನನ್ನ ಕ್ಷೇತ್ರದಿಂದ ಬಂದಿದ್ದವರು. ಡೆಲ್ಲಿಯ ವಿಚಾರವಾಗಲೀ ಕರ್ನಾಟಕದ ವಿಚಾರವಾಗಲೀ, ಅವರು ನನಗೆ ಬೆಳಿಗ್ಗೆ ಆರು ಗಂಟೆಗೆ ಮುಂಚೆ ಫೋನ್ ಮಾಡಿ ಪ್ರಮಿಳಾ ನೀವು ಪೇಪರ್ ಓದಿದ್ದೀರಾ? ಈ

ವಿಷಯದ ಬಗ್ಗೆ ನೀವು ಏನು ಯೋಚನೆ ಮಾಡಿದ್ದೀರಿ? ಎಂದು ಜ್ಞಾಪಕ ಮಾಡುತ್ತಿದ್ದರು. ಅಂಥವರು ಇವೊತ್ತು ಇಲ್ಲ. ಅವರ ಹೆಸರು ಉಳಿಯಬೇಕಾಗಿದೆ.

**ಶ್ರೀ. ಕೆ. ಪ್ರಭಾಕರ್ (ನೆಲಮಂಗಲ)**

ಮಾನ್ಯ ಸೋಲೂರು ಸಿದ್ದಪ್ಪನವರ ವಿಚಾರವನ್ನು ಎದುರು ಪಕ್ಷದ ನಾಯಕರು ಸಾಕಷ್ಟು ಹೇಳಿದ್ದಾರೆ. ಅಧಿಕಾರಿಗಳಿಂದ ಯಾವ ರೀತಿಯ ಕೆಲಸವೇ ಆಗಿರಲಿ, ಮಾಡಿಸಬೇಕಾದರೆ ಬಹಳ ಚಾಣಾಕ್ಷತನದಿಂದ ಮಾಡಿಸುತ್ತಿದ್ದರು. ರಾಜಕೀಯವಾಗಿ ಹಾಗೂ ವೈಯಕ್ತಿಕವಾಗಿ ಸೋಲೂರು ಸಿದ್ದಪ್ಪನವರು ಕೆಂಗಲ್ ಹನುಮಂತಯ್ಯನವರ ಸ್ನೇಹಿತರಾಗಿ ಕಡೆ ತನಕ ಉಳಿದಿದ್ದರು. ಕೆಂಗಲ್ಲರು ಸೋಲೂರರಿಗಿಂತ ನಾಲ್ಕಾರು ವರ್ಷ ಮುಂಚಿತವಾಗಿಯೇ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು. ಆಮೇಲೆ ಸೋಲೂರರೂ ಜೊತೆಗೂಡಿದ್ದರು. "ನಂಬಿದ ವ್ಯಕ್ತಿಯನ್ನು ಕೈ ಬಿಡುವ ಜಾಯಮಾನದವರಲ್ಲದ ಸೋಲೂರರು ಕಾಂಗ್ರೆಸ್ ಇಬ್ಭಾಗವಾದಾಗ, ನಿಜಲಿಂಗಪ್ಪನವರ ಕಡೆ ಹೋಗದೆ ಕೆಂಗಲ್ಲರ ಜೊತೆಯಲ್ಲಿಯೇ ಉಳಿದುಕೊಂಡರು. ನಿಷ್ಠೆಗೆ ಮತ್ತೊಂದು ಹೆಸರು ಸೋಲೂರು ಸಿದ್ದಪ್ಪನವರು ಎಂಬ ಖ್ಯಾತಿ ಪಡೆದುಕೊಂಡಿದ್ದರು.

**ಶರಣಬಸವಪ್ಪ ಅಪ್ಪಾ**

ಶ್ರೀ ಸಿದ್ದಪ್ಪನವರು ತುಂಬಾ ಒಳ್ಳೆಯವರು, ನಾವು ಅಲ್ಲಿಗೆ ಬಂದಾಗ್ಗೆ ಅವರು ತಮ್ಮ ಬಂಧು ಬಳಗದವರೆಲ್ಲಾ ತುಂಬಾ ಆತ್ಮೀಯತೆಯಿಂದ ನಮ್ಮನ್ನೆಲ್ಲಾ ಸತ್ಕರಿಸಿ ಸಂತೋಷಪಡಿಸಿದ್ದರು. ಶ್ರೀ ಸಿದ್ದಪ್ಪನವರು ಮಾತಾಡಿದ ಅನುಭವದ ಮಾತು ಇನ್ನೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿದೆ.

8--1--1981

ಶರಣ ಬಸವಪ್ಪ ಅಪ್ಪಾ
ಶರಣ ನಗರ ಗುಲ್ಬರ್ಗಾ.

*****

## ಶ್ರೀ ಶಿವಕುಮಾರ ಸ್ವಾಮಿಗಳು. (ಶ್ರೀ ಸಿದ್ದ ಗಂಗಾ ಕ್ಷೇತ್ರಾಧ್ಯಕ್ಷರು)

(4–6–2005 ರಂದು ಶ್ರೀ ಕ್ಷೇತ್ರದಲ್ಲಿ ಲೇಖಕನಿಗೆ ನೀಡಿದ ಸಂದರ್ಶನದಲ್ಲಿ) ಸೋಲೂರು ಸಿದ್ದಪ್ಪನವರು, ಬಹುದೀರ್ಘಕಾಲ ಸಾರ್ವಜನಿಕ ಸೇವೆಯಲ್ಲಿದ್ದವರು. ವೃತ್ತಿ, ಪ್ರವೃತ್ತಿಗಳೆರಡೂ ರಾಜಕೀಯವೇ ಆಗಿತ್ತು. ಧಾರ್ಮಿಕ ಶ್ರದ್ಧೆಯುಳ್ಳವರಾಗಿದ್ದರು. ಶ್ರೀ ಕ್ಷೇತ್ರದ ಶ್ರೇಯೋಭಿವೃದ್ಧಿಗೆ ಸಾಕಷ್ಟು ಶ್ರಮಿಸಿಯೂ ಇದ್ದರು. ಸೋಲೂರಿನಲ್ಲಿ ಸರ್ಕಾರಿ ಹೈಸ್ಕೂಲು ಮಂಜೂರು ಮಾಡಿಸಲು ಬಹಳ ಪ್ರಯತ್ನಿಸಿದರು, ರಾಜಕೀಯ ಪಿತೂರಿಯಿಂದ ಸಾಧ್ಯವಾಗಲಿಲ್ಲ, ನುರಿತ ರಾಜಕಾರಣಿಗೂ ಈ ವಿಷಯದಲ್ಲಿ ಹಿನ್ನೆಡೆಯುಂಟಾಗಿತ್ತು. ಅದಕ್ಕಾಗಿ ಸಿದ್ದಪ್ಪನವರು ಚಿಂತಿಸಲಿಲ್ಲ ಶ್ರೀ ಸಿದ್ದಗಂಗಾ ಶಿಕ್ಷಣ ಸಂಸ್ಥೆಯ ಶಾಖಾ ಹೈಸ್ಕೂಲನ್ನು ಪ್ರಾರಂಭಿಸಲು ಶ್ರಮಿಸಿದರು ಹೈಸ್ಕೂಲಿಗೆ ಬೇಕಾದಂಥ ನಿವೇಶನ, ಕ್ರೀಡಾಂಗಣಕ್ಕೆ ಅಗತ್ಯ ಭೂಮಿ ದೊರಕಿಸಿಕೊಟ್ಟರು. ಹುಟ್ಟಿದೂರಿಗೆ ಅವರು ಸಲ್ಲಿಸಿದಷ್ಟು ಸೇವೆ ಅನನ್ಯವಾಗಿತ್ತು.

ಸೋಲೂರು ಸಿದ್ದಪ್ಪನವರು ಚಾಣಾಕ್ಷ ರಾಜಕಾರಣಿಯೆನ್ನಿಸಿದ್ದರು. ಯಾರೊಡನೆಯೂ ವಿರೋಧ ಕಟ್ಟಿ ಕೊಳ್ಳುತ್ತಿರಲಿಲ್ಲ. ಅವರಿಗೆ ತಮ್ಮೂರಿನ ಕಡಲೆ ಮಠಕ್ಕೆ ಸ್ವಾಮಿಗಳನ್ನು ಮಾಡಬೇಕೆಂದು ಆಸೆಯಿತ್ತು. ಅವರು ದೈವಭಕ್ತರು. ವೀರಶೈವ ಮತಾಚಾರಗಳನ್ನು ಶ್ರದ್ದೆಯಿಂದ ಅನುಸರಿಸುತ್ತಿದ್ದರು. ಬಹಳ ಚತುರ ವಾಗ್ಮಿಗಳಾಗಿದ್ದರು. ಸಂಪ್ರದಾಯಗಳನ್ನು ಗೌರವಿಸುತ್ತಿದ್ದರು ಯುವಕರನ್ನು ಆತ್ಮೀಯವಾಗಿ ನಡೆಸಿಕೊಳ್ಳುತ್ತಿದ್ದರು. ಅವರಿರುವ ತನಕ ಮಾಗಡಿ ತಾಲ್ಲೂಕು ಸಮರ್ಥ ಜನಪ್ರತಿನಿಧಿಯೊಬ್ಬರನ್ನು ಹೊಂದಿದಂತಾಗಿತ್ತು. ಸೋಲೂರು ಸಿದ್ದಪ್ಪನವರು ಚುನಾವಣೆಗಳಿಗೆ ಹೆಚ್ಚು ಹಣ ಖರ್ಚು ಮಾಡುತ್ತಿರಲಿಲ್ಲ. ಚತುರೋಕ್ತಿಗಳಿಂದ ಮತದಾರರ ಮನ ಗೆಲ್ಲುತ್ತಿದ್ದರು.

## ಎಸ್. ನಿಜಲಿಂಗಪ್ಪ

ಅವರ ಸಂಗಡ ಮಾತನ್ನಾಡುವುದೇ ಒಂದು ಮರೆಯದ ಅನುಭವ. ಅವರ ಅನುಭವದ ಮಾತುಗಳು ಅಂತಹ ಬೆಲೆಯುಳ್ಳವು. ಮೇಲಾಗಿ ಯಾವ ಸ್ವಾರ್ಥವೂ ಕಿಂಚಿತ್ ಸಹ ಇಲ್ಲದೆ ಜನತೆಯ ರಾಜ್ಯದ ಸೇವೆ ಮಾಡಿದರು.

ಅದರಲ್ಲಿಯೂ ತಮ್ಮ ತಾಲ್ಲೂಕಿಗೆ ಮತ್ತು ಸುತ್ತುಮುತ್ತಲಿನ ಪ್ರದೇಶಕ್ಕೆ. ಬಹುಶಃ ಯಾರೂ ತಮ್ಮ ತಾಲ್ಲೂಕಿಗೆ ಸಿದ್ದಪ್ಪನವರಂತೆ ಅನೇಕ ರೀತಿಯಲ್ಲಿ ರಸ್ತೆ, ಆಸ್ಪತ್ರೆ, ಕೈಗಾರಿಕೆಗಳು, ಸ್ಕೂಲುಗಳು, ದನದ ಆಸ್ಪತ್ರೆ, ವಿಶ್ರಾಂತಿ ಗೃಹ ವಗೈರೆ, ವಗೈರೆ, ಯಾವ ವಿಧಾನ ಸಭೆಯ ಸದಸ್ಯನೂ ಮಾಡಿಲ್ಲ ಎಂದು ಧೈರ್ಯವಾಗಿ ಹೇಳಬಹುದು.

## ಬಿ.ಡಿ. ಜತ್ತಿ

ಶಾಸಕರಾಗಿ, ಗ್ರಾಮೀಣ ಜನರ ನೈಜ ಪ್ರತಿನಿಧಿಯಾಗಿ, ಸಮಾಜಸೇವಕರಾಗಿ, ಬಸವ ಸಮಿತಿಯು ಅಜೀವ ಸದಸ್ಯರಾಗಿ ಅವರು ಸಲ್ಲಿಸಿದ ಸೇವೆ ಚಿರಸ್ಮರಣೀಯವಾಗಿದೆ. ಲಿಂಗೈಕ್ಯರಿಗೆ ಬಸವ ಸಮಿತಿಯ ಪರವಾಗಿಯೂ ನನ್ನ ಪರವಾಗಿಯೂ ಹೃತ್ಪೂರ್ವಕ ಶ್ರದ್ಧಾಂಜಲಿಯನ್ನು ಅರ್ಪಿಸಿ ಅವರ ಆತ್ಮಕ್ಕೆ ಶಾಂತಿಯನ್ನು ಕೋರುತ್ತೇನೆ. ದಿವಂಗತರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬ ವರ್ಗದವರಿಗೆ ದಯಪಾಲಿಸಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

## ವಿ. ಎಸ್. ಕೃಷ್ಣಯ್ಯರ್

ಶ್ರೀ ಸೋಲೂರು ಸಿದ್ದಪ್ಪನವರು ನನ್ನ ಆತ್ಮೀಯ ಸ್ನೇಹಿತರಲ್ಲಿ ಒಬ್ಬರಾಗಿದ್ದರು. ಶಾಸನ ಸಭಾ ಸದಸ್ಯರಾಗಿ ಹಲವಾರು ಜನೋಪಕಾರಿ ಕೆಲಸಗಳನ್ನು ಮಾಡಿದ್ದಾರೆ.

ಅತ್ತ ಮಕ್ಕಳ ಕೈಗೆ ತುತ್ರೊಟ್ಟಿ ಕೊಡಲಿಲ್ಲ
ಮಕ್ಕಳ ಬಡಿ ಪರ್ವತಕೆ ಹೋದರೆ
ಮುಕ್ಕಣ್ಣ ಶಿವನು ನಗನೇನ

**– ಜಾನಪದ ಗೀತೆ**

## "ನುಡಿದದ್ದು ಸ್ಫಟಿಕದ ಶಲಾಕೆ"

1. ಲಾವಣಿ ಕಾರರಿಂದ ಲಾವಣಿ ಹಾಡಿಸಿ ತನ್ಮೂಲಕ ಸರ್ಕಾರದ ಯೋಜನೆಗಳನ್ನು ಜನರಿಗೆ ಮನದಟ್ಟು ಮಾಡಿಸಬೇಕು ಆಗ ಮನರಂಜನೆಯೂ ಅಭಿವೃದ್ಧಿಯ ಅರಿವೂ ಮೂಡುತ್ತದೆ.

2. ಅರಣ್ಯ ಸಂಪತ್ತು ನಾಶವಾಗಿದ್ದುವುದರಿಂದಲೇ ಸಂಸ್ಥಾನದ ಅನೇಕ ಕಡೆಗಳಲ್ಲಿ ಕ್ಷಾಮ ಮತ್ತು ಕ್ಷೋಭೆ ಬಂದಿರುವುದು.....

3. ಅರಣ್ಯ ನಾಶಕ್ಕೆ ಮೊದಲ ಕಾರಣ, ಅಲ್ಲೆಲ್ಲಾ ಇದ್ದಲು ಸುಡುವುದಕ್ಕೂ ಸೌದೆಗೆ ಮರಗಳನ್ನು ಕಡಿಯುವುದಕ್ಕೂ ಅವಕಾಶ ಕೊಟ್ಟಿರುವುದೇ ಆಗಿದೆ.

4. ಈ ಬಿಲ್ಲನ್ನು ಸರ್ಕಾರದವರು ತಯಾರಿಸಿ ಇಂಗ್ಲಿಷಿನಲ್ಲಿ ಮಾತ್ರ ಮುದ್ರಣ ಮಾಡಿದ್ದಾರೆ ಕನ್ನಡದಲ್ಲಿಯೂ ಪ್ರತಿಗಳನ್ನು ಮಾಡಿಸಿದ್ದರೆ ಕನ್ನಡ ಮಾತ್ರ ಬಲ್ಲವರು ಓದಿಕೊಂಡು ಸಲಹೆಕೊಡುವುದಕ್ಕೆ ಅನುಕೂಲವಾಗುತ್ತಿತ್ತು.

5. ಜನರಿಗೆ ಉಪಯುಕ್ತ ಕೆಲಸಗಳನ್ನು ಮಾಡಬೇಕೆಂಬುದೇ ಕಾಂಗ್ರೆಸ್ ಸರ್ಕಾರದ ಧ್ಯೇಯವಾಗಿದೆ.

6. ಗ್ರಾಮಾಂತರದ ಜನರು ಹೆಚ್ಚು ಬೆಳೆ-ಬೆಳೆದರೆ ಆಹಾರ ಸಮಸ್ಯೆ ಕಡಿಮೆಯಾಗುತ್ತದೆಂದು ಎಲ್ಲರೂ ಮನಗಂಡಿದ್ದಾರೆ.

7. ಸರ್ಕಾರದವರಿಗೆ ನೀರಾವರಿ ಯೋಜನೆಗಳೇ ಒಂದು ಆಸ್ತಿಯಾಗಿ ಪರಿಣಮಿಸುತ್ತದೆ. ಈ ಆಸ್ತಿಯನ್ನು ರೂಢಿಸುವುದು ಪ್ರಭುತ್ವದವರ ಕರ್ತವ್ಯ.

8. ಕೆರೆಗಳಲ್ಲಿ ಹೂಳು ತುಂಬಿಕೊಂಡರೆ ನೀರಾವರಿಯೂ ಇಲ್ಲ, ಬೆಳೆಯೂ ಇಲ್ಲ.

9. ಆಹಾರವನ್ನು ಬೆಳೆದು ಕೊಡುವ ಜನರಿಗೆ ಹೆಚ್ಚು ಬೆಲೆಯನ್ನು ಕೊಡುವುದು ನ್ಯಾಯ.

10. ನಾವು ಪ್ರಜಾಸರ್ಕಾರ ಬಂದ ಮೇಲೂ ಪ್ರಜೆಗಳ ಯೋಗ ಕ್ಷೇಮ ನೋಡಿಕೊಳ್ಳದೇ ಹೋದರೆ ಇದು ಎಂಥ ಅನ್ಯಾಯ!

11. ಮಾನ್ಯ ಸ್ನೇಹಿತರು (ವಿ--ಪಕ್ಷದವರು) ವಿವಿಧ ಸಂದರ್ಭಗಳಲ್ಲಿ ಈ ಸಭೆಯ ಗೌರವವನ್ನು ಕಾಪಾಡುವ ಉದ್ದೇಶವಿಟ್ಟು ಕೊಂಡು ಭಾಷಣ ಮಾಡಬೇಕಾಗಿತ್ತು.

12. ವಿರೋಧಪಕ್ಷದವರು ನಮ್ಮ ಸಹೋದರರು, ವಿನಾಕಾರಣ ಮಾತನಾಡುವುದು ಈ ಸಭೆಯ ಗೌರವಕ್ಕೆ ಸರಿಯಲ್ಲವೆಂದು ನಾನು ಭಾವಿಸುತ್ತೇನೆ.

13. ಕಾಂಗ್ರೆಸಿಗರ ಎದೆಯೇನೋ ಕಲ್ಲು ಆದರೆ ಹೃದಯ ಮೃದು.

14. ಯಾವ ವಿದ್ಯಾಭ್ಯಾಸದಿಂದ ರೈತರ ಮಕ್ಕಳಿಗೆ ಹೆಚ್ಚು ಅನುಕೂಲವಾಗುವುದೋ ಅದನ್ನು ಹೆಚ್ಚಾಗಿ ದೊರೆಯುವಂತೆ ವ್ಯವಸ್ಥೆ ಮಾಡಬೇಕು.

15.ಸಾಧ್ಯವಾದ ಮಟ್ಟಿಗೂ ಕೆಲವು ಅನುಪಯುಕ್ತ ಇಲಾಖೆಗಳನ್ನು ರದ್ದು ಮಾಡುವುದರ ಮೂಲಕ ಉಳಿಯುವ ಮೊಬಲಗನ್ನು ಕೃಷಿ ಇಲಾಖೆಗೆ ಮತ್ತು ಅದರ ಯೋಜನೆಗಳಿಗೆ ನೀರಾವರಿ ಸೌಲಭ್ಯಗಳಿಗೆ ಕರೆಂಟಿನ ಅನುಕೂಲಕ್ಕೆ ಒದಗಿಸುವುದು ಅವಶ್ಯಕ.

16. ನಮ್ಮ ಕಡೆ ಸಣ್ಣ ಸಣ್ಣ ಕೆರೆಗಳಲ್ಲಿ ಹೂಳು ತುಂಬಿ ಹೆಚ್ಚು ನೀರು ನಿಲ್ಲುವುದಕ್ಕೆ ಅವಕಾಶವಿಲ್ಲ..... ಬುಲ್‌ಡೋಜರುಗಳ ಮೂಲಕ ಮಣ್ಣನ್ನು ತೆಗೆಸಿ ಹೆಚ್ಚು ನೀರು ನಿಲ್ಲುವಂತೆ ಮಾಡಿದರೆ ಭೂಮಿಯ ಅಂತರ್ಜಲ ಹೆಚ್ಚುತ್ತದೆ.

17. ಈಗ ಎರಡು ಮೂರು ದಿನಗಳಿಂದ ದೇವರು ಮಳೆಯನ್ನು ದಯಪಾಲಿಸಿದ್ದಾನೆ. ರಾಜ್ಯಾದ್ಯಂತ ಇರತಕ್ಕ ಎಲ್ಲ ದೇವಾಲಯಗಳಲ್ಲಿ ಪೂಜೆ ಪುನಸ್ಕಾರಗಳು ನಡೆದು ನಾವು ಮಾಡಿರತಕ್ಕ ಅಪರಾಧಗಳಿಗೆ ಕ್ಷಮಾಪಣೆ ಕೇಳಿಕೊಂಡ ಪ್ರಯುಕ್ತ ಮಳೆಬರುತ್ತಾ ಇದೆ.

(1966ರಲ್ಲಿ ಭೀಕರ ಬರಗಾಲ ಬಂದಿತ್ತು. 1968ರಲ್ಲಿ ಮಳೆಬಂದಾಗ)

18. ನಮ್ಮ ಸರ್ಕಾರ ಸತ್ಯ-ಧರ್ಮಕ್ಕೆ, ಒಳಪಟ್ಟು ಕಾರ್ಯವನ್ನು ನೆರವೇರಿಸುತ್ತ ದೇಶದಲ್ಲಿ ಸಂಪ್ರದಾಯಿಕವಾಗಿ, ನೀತಿಬದ್ಧವಾಗಿ, ನ್ಯಾಯಬದ್ಧವಾಗಿ, ನಡೆಯತಕ್ಕ ಕಡೆಗೆ ಹೆಚ್ಚಿನ ಗಮನ ಕೊಟ್ಟರೆ, ದೇಶದಲ್ಲಿ ಉಂಟಾಗಿರತಕ್ಕ ಕಷ್ಟ ಪರಂಪರೆಯ ನಿವಾರಣೆಗೆ ಸಹಾಯಕವಾಗುತ್ತದೆ.

19.ತಂದೆಗೆ ಐದು ಜನ ಮಕ್ಕಳು ಹುಟ್ಟಿದಾಗ ಒಬ್ಬರೊರಬ್ಬರು ಅರಿತುಕೊಂಡು ಭಯ ಭಕ್ತಿಯಿಂದ ಇದ್ದುಕೊಂಡು, ಒಂದು ದೊಡ್ಡ ಸಂಸಾರವನ್ನಾಗಿ ಮಾಡಿಕೊಂಡು ಹೋಗುವುದು ಧರ್ಮ, (ಸಹಕಾರ ಸಂಘಗಳನ್ನು ಕುರಿತು)

20. ಕೆಟ್ಟದ್ದನ್ನು ಕೆಟ್ಟದ್ದು ಎಂದು ಹೇಳುವುದು ಮಾನವರಿಗೆ ಸೇರಿದ ಹಕ್ಕು.

21. ಮಹಾತ್ಮಾಗಾಂಧಿಜೀಯವರ ಹೆಸರಿನಲ್ಲಿ ದೇಶಾದ್ಯಂತ ಕಲ್ಯಾಣವಾಗಬೇಕಾದರೆ ಅದಕ್ಕೆ ತಕ್ಕಷ್ಟು ಹಣಬೇಕು. ಬಾಯಿಮಾತು ಪ್ರಯೋಜನವಿಲ್ಲ.

22. ಎಂದಿನವರೆಗೆ ನೀರಾವರಿ ಕಾಮಗಾರಿಗಳನ್ನು ಮಾಡುವುದಕ್ಕೆ ಏರ್ಪಾಡು ಮಾಡುವುದಿಲ್ಲವೋ ಅಲ್ಲಿಯವರೆಗೆ, ಪ್ರಜೆಗಳಿಗೆ ಸುಖ ಮತ್ತು ಸಂತೋಷ ಉಂಟಾಗುವುದಿಲ್ಲ.

23. ಯೋಜನೆಗಳನ್ನು ಮಾಡಿ, ಅಧಿಕಾರಿಗಳ ಸಂಖ್ಯೆಯನ್ನು ಹೆಚ್ಚಿಸುವುದರಿಂದ ಸರ್ಕಾರಕ್ಕೆ ಅನಾವಶ್ಯಕವಾಗಿ ಹಣ ವ್ಯಯವಾಗುತ್ತಿದೆಯೋ ಹೊರತು, ಕಾರ್ಯ ಮಾತ್ರ ಮೊದಲಿನ ಹಾಗೆಯೇ ಇದೆ.

24. ಶಾಸಕರ ಘನತೆ ಗೌರವಗಳು ಉಳಿಯಬೇಕಾದರೆ ಸರ್ಕಾರದವರು ಶಾಸಕರು ಹೇಳುವ ಅಭಿವೃದ್ಧಿ ಕೆಲಸಗಳನ್ನು ಮಾಡಿ ಕೊಡಬೇಕು. ಇಲ್ಲದಿದ್ದರೆ ಅವರಿಗೆ ಚುನಾಯಿತರಾಗಿ ಬಂದ ಕ್ಷೇತ್ರಗಳಲ್ಲಿ ಬೆಲೆಯಿರುವುದಿಲ್ಲ.

25. ಅರಣ್ಯ ಸಂಪತ್ತು ವೃದ್ಧಿಯಾದರೆ, ರೈತರಿಗೆ ಬೇಕಾಗುವಂತಹ ಎಲ್ಲಾ ಅನುಕೂಲಗಳನ್ನು ಪಡೆಯುವುದಕ್ಕೆ ಸಾಧ್ಯವಿದೆ.

26. ರೈತರು ಬೆಳದಂತಹ ಧಾನ್ಯವನ್ನು ಸರ್ಕಾರದವರೇ ಕೊಂಡು ರೈತರಿಗೆ ಉಂಟಾಗುವ ನಷ್ಟವನ್ನು ಭರ್ತಿ ಮಾಡಿ ಕೊಡಬೇಕು.

27. ಶಾಸಕರು ಹೇಳುವಂತಾದ್ದು ಅರಣ್ಯ ರೋಧನವಾಗಬಾರದು, ನಾವು ಹೇಳಿದಂತಹ ವಿಚಾರಗಳನ್ನು ಮಾನ್ಯ ಮಂತ್ರಿಗಳು ಗಮನಕ್ಕೆ ತೆಗೆದುಕೊಂಡು ಅವನ್ನು ಕಾರ್ಯಗತಗೊಳಿಸಬೇಕು.

28. ರೈತರು ಸರ್ಕಾರದ ಹತ್ತಿರ ಬಾರದ ಹಾಗೆ ಅವರು (ಅಧಿಕಾರಿಗಳು) ರೈತರು ಇದ್ದಲ್ಲಿಯೇ ಕೆಲಸಗಳು ಆಗುವಂತಹ ಒಂದು ವ್ಯವಸ್ಥೆಯನ್ನು ಸರ್ಕಾರದವರು ಮಾಡಬೇಕು. ಅದೇ ನಿಜವಾದ ಪ್ರಜಾಪ್ರಭುತ್ವ.

29. ಬೆಂಗಳೂರು ದಿನ ಬೆಳಗಾದರೆ ಬೆಳೆಯುತ್ತಿವೆ. ಈ ವಿಚಾರದಲ್ಲಿ ಸರ್ಕಾರದವರು ಸರಿಯಾದ ವ್ಯವಸ್ಥೆ ಮಾಡಬೇಕಾಗಿದೆ.

30. ಜನರಲ್ ಹಾಸ್ಪೆಲ್ ದ್ವಾರಾ ಮೇಲು ಕೀಳು ದೂರಾ.

1753-12

ಒಡವ ಆಡಿದ ಮಾತು ನುಡಿನುಡಿಗೆ ಬೇಸರ
ಒಡವಿ ಇಟ್ಟವ್ವ ಒನೆಒನೆದು ಹೇಳಿದರೆ
ನುಡಿನುಡಿಗೆ ಬಾಯ ಬಿಡುತಾರೆ

**– ಜಾನಪದ ಗೀತೆ**

ಬೆಳ್ಳಗೆ ಬೆಳಗಾಗಿ ಬೆಳ್ಳಿ ಮೂಡಲವಾಗಿ
ಒಳ್ಳೊಳ್ಳೇ ಮೀನ ಗರಿ ತೆಗೆದು ಆಡ್ಯಾವ
ಗರತಿ ಗಂಗಮ್ಮನ ಉಡಿಯಾಗ

**– ಜಾನಪದ ಗೀತೆ**



ಸೋಲೂರು ಸಿದ್ದಪ್ಪನವರು ಹುಟ್ಟಿದ ಮನೆ (ಮಾಳಿಗೆ ಮನೆ)



ಕಡಲೆ ಮಠ ಸಂಗಯ್ಯನವರ ಗದ್ದುಗೆ ಸೋಲೂರು



ಪ್ರಜಾ ಪ್ರತಿನಿಧಿ ಸದಸ್ಯ



ಮೈಸೂರು ಪ್ರಜಾಪ್ರತಿನಿಧಿ ಸಭೆ ಮಾತಿನಕುಪ್ಪೆ ಗೋವಿಂದರಾಜು ಸಹ ಸದಸ್ಯರೊಂದಿಗೆ



ನೆಹರೂ ಅವರ ಜೊತೆ ಮಗ ಶಿವಪ್ರಸಾದ್ 1957



ಭಾವಮೈದುನ ಹೊನ್ನಪ್ಪ ಅವರೊಡನೆ



ಹೆಂಡತಿ ಚನ್ನಬಸಮ್ಮ ಮತ್ತು ಕುಟುಂಬದೊಡನೆ



ರಾಜ್ಯಪಾಲರಾಗಿದ್ದ ಜಯ ಚಾಮರಾಜೇಂದ್ರ ಒಡೆಯರ ಸಮ್ಮುಖದಲ್ಲಿ
ಎಸ್.ನಿಜಲಿಂಗಪ್ಪ ಅವರೊಂದಿಗೆ



ಮಾಗಡಿ ಕಾಂಗ್ರೆಸ್ ಸಭೆಯಲ್ಲಿ



ಎ.ಪಿ.ಎಂ.ಸಿ. ಪ್ರಾರಂಭೋತ್ಸವ (ಬೆಂಗಳೂರು)



ಪ್ರಧಾನಮಂತ್ರಿ ಲಾಲ್ ಬಹದ್ದೂರ್ ಶಾಸ್ತ್ರಿ ಅವರೊಂದಿಗೆ



ನರನಾಗಿ ಬಂದು ಪರಶಿವ ಗುರುಲಿಂಗ ಸರಿಯಾಗ ಕಾಣೆ ಸರ್ವಜ್ಞ
ಶ್ರೀ ಸಿದ್ದಗಂಗಾ ಕ್ಷೇತ್ರಾಧ್ಯಕ್ಷರಾದ ಕರ್ನಾಟಕ ರತ್ನ
ಶ್ರೀ ಶ್ರೀ ಕುಮಾರಸ್ವಾಮಿಗಳಿಂದ ಸನ್ಮಾನ



ಸೂರ ತರುವು ಮರವಲ್ಲ ಸುರಭಿ ಯೊಂದು ಹಾವಲ್ಲ ಪುರುಷ ಪಾಷಣ ದೊಳಗಲ್ಲ
ಗುರುರಾಯ ನರರೊಳಗಲ್ಲ ಸರ್ವಜ್ಞ ಚಿತ್ರದುರ್ಗ ಹಿರಿಯ ಚೇತನ
ಶ್ರೀ ಶ್ರೀ ಮುರುಗರಾಜೇಂದ್ರ ಸ್ವಾಮಿಜಿಗಳಿಂದ ಸನ್ಮಾನ



ಉಪ ರಾಷ್ಟ್ರಪತಿ ಬಿ.ಡಿ. ಜತ್ತಿ ಅವರಿಂದ ಅಭಿನಂದನೆ



ಮಾಗಡಿಯಲ್ಲಿ ನ್ಯಾಯಾಲಯ ಪ್ರಾರಂಭೋತ್ಸವ ಉಚ್ಚ ನ್ಯಾಯಾಲಯದ
ಮುಖ್ಯನ್ಯಾಯಾಧೀಶರಾದ ಡಿ.ಎಂ. ಚಂದ್ರಶೇಖರ್. ಸುಪ್ರೀಂಕೋರ್ಟ್
ನ್ಯಾಯಾಧೀಶರಾದ ವೆಂಕಟಾಚಲರವರೊಂದಿಗೆ



ಸೋಲೂರು ಸಿದ್ಧಪ್ಪನವರ ಧರ್ಮಪತ್ನಿ ಶ್ರೀಮತಿ ಚನ್ನಬಸಮ್ಮನವರು



ತಿಪ್ಪಗೊಂಡನಹಳ್ಳಿ ಪ್ರವಾಸಿ ಬಂಗಲೆಯ ಮುಂದೆ ಕೆಂಗಲ್ ಹನುಮಂತಯ್ಯ,
ಟಿ. ಸಿದ್ದಲಿಂಗಯ್ಯ ಮತ್ತು ಇತರೆ ಮುಖಂಡರೊಂದಿಗೆ



ಶಿವಮೊಗ್ಗ ಮಲ್ಲಿಕಾರ್ಜುನಯ್ಯ (ಶಾಸಕರು) ಅವರೊಂದಿಗೆ



ಮಾಗಡಿಯಲ್ಲಿ ಉಪಹಾರ ಪೊಲೀಸ್ ಕಮೀಷನ್ ವೀರಭದ್ರಯ್ಯ ಮುಖ್ಯ ನ್ಯಾಯಾಧೀಶ ಡಿ.ಎಂ. ಚಂದ್ರಶೇಖರ್ ಅವರೊಂದಿಗೆ



ಸೋಲೂರಿನ ಸಹಕಾರ ಸಪ್ತಾಹದಲ್ಲಿ



ರಾಜ ಪ್ರತ್ಯಕ್ಷ ದೇವತಾ ಸೋಲೂರಿಗೆ ಮಹಾರಾಜರು ಬಂದಾಗ



ಕಾಂಗ್ರೆಸ್ ಧುರೀಣ ಹೆಚ್. ಸಿದ್ದಯ್ಯ ಅವರೊಂದಿಗೆ



ಮುಸ್ಲಿಂ ಸ್ನೇಹಿತನ ಮನೆ (ಅರೇ ಮನೆ) ಸೋಲೂರು



ವಿಜಯ ಬ್ಯಾಂಕಿನ ಮುಖ್ಯಸ್ಥರಾಗಿದ್ದ ಸುಂದರರಾಮ ಶೆಟ್ಟಿರೊಂದಿಗೆ



ಜಿ. ರಾಮೇಗೌಡ ಮಾಜಿ ಅರಣ್ಯ ಸಚಿವರೊಂದಿಗೆ



ಭೂ ಅಭಿವೃದ್ಧಿ ಬ್ಯಾಂಕ್ ಸಭಾದಲ್ಲಿ ಸಾವನದುರ್ಗ



ಉತ್ತುಂಗಮಾಣಿಕದ ಚಿತ್ತು ಮಂಟಪದೊಳಗೆ ನಿತ್ಯ ನಿರ್ಮಲದ ನಿಜ ಗಂಡ
ಶಿವಯೋಗಿ ಗೆತ್ತಾಣದು ಸಾವು?...... ಸರ್ವಜ್ಞ
ಸೋಲೂರು ಸಿದ್ದಪ್ಪನವರ ಸಮಾಧಿ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20–00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15–00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15–00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20–00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20–00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15–00 |
| 7. | ಜಿ.ವಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15–00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15–00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15–00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15–00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15–00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20–00 |
| 13. | ಜಗಳೂರು ಇಮಾಂ | ಜೆ.ಎಸ್. ಸದಾನಂದ | 15–00 |

| | | | |
|---|---|---|---|
| 14. | ಕೆ.ಸಿ. ರೆಡ್ಡಿ | ಡಾ. ಸಂಧ್ಯಾರೆಡ್ಡಿ | 20–00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20–00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20–00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20–00 |
| 18. | ಎಂ. ನಾಗಪ್ಪ | ಡಾ. ಎಂ.ಎಸ್. ಪಾಟೀಲ್ | 15–00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ. ಹೆಚ್.ಎಂ.ಪಂಚಾಕ್ಷರಯ್ಯ | 15–00 |
| 20. | ಗಂಗಾಧರ್ ನಮೋಶಿ | ಡಾ. ಕವಂಟೆ ಹಾಗೂ ಇತರರು | 15–00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15–00 |
| 22. | ಆರ್. ಗುಂಡೂರಾವ್ | ಈಶ್ವರ ದೈತೋಟ | 20–00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15–00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15–00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15–00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30–00 |
| 27. | ಬಿ.ಎಲ್. ಸುಬ್ಬಮ್ಮ | ಡಾ. ಡಿ.ಎಸ್. ಜಯಪ್ಪಗೌಡ | 15–00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20–00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವೆರ್ಣೇಕರ್ | 20–00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಹಾರೋಗದ್ದೆ ಉಷಾ<br>ರಮೇಶ್ ನಾಯಕ್ | 20–00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30–00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15–00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20–00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜಿ. ಸುರೇಶ್ | 25–00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30–00 |

| | | | |
|---|---|---|---|
| 36. | ಎಸ್.ಸಿ. ಮಲ್ಲಯ್ಯ | ಡಾ. ಟಿ.ಸಿ. ಪೂರ್ಣಿಮ | 20–00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30–00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30–00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20–00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20–00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15–00 |
| 42. | ಕೆ.ಎಚ್. ರಂಗನಾಥ್ | ಎಲ್.ಎಸ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ॥ ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 25–00 |
| 51. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–3 | ಡಾ. ಎಂ.ಜಿ. ನಾಗರಾಜ್ | 25–00 |
| 52. | ಬಿ.ಎಂ. ಚೌರಕೇರಿ | ಡಾ. ಎಂ.ಎಸ್. ಪಾಟೀಲ | 20–00 |
| 53. | ಕೆ. ಕೆಂಚಪ್ಪ | ಚಂದ್ರಶೇಖರ ತಾಳ್ಯ | 20–00 |

| | | | |
|---|---|---|---|
| 54. | ಕೇಶವರಾವ ನಿಟ್ಟೂರಕರ್ | ಡಾ. ಜಿ.ಬಿ. ವಿಸಾಜಿ | 20–00 |
| 55. | ಸರದಾರ ಶರಣಗೌಡ ಇನಾಂದಾರ | ಡಾ. ಬಿ.ವ್ಹಿ. ಮಲ್ಲಾಪುರ | 20–00 |
| 56. | ಬಸವರಾಜೇಶ್ವರಿ | ಪ್ರಹ್ಲಾದ ಬೆಟಗೇರಿ | 20–00 |
| 57. | ಕೊಲೂರು ಮಲ್ಲಪ್ಪ | ಗಂಗಾಧರಯ್ಯ ಹಿರೇಮಠ, ಡಾ. ದೇ.ಮಾ. ಪಾಟೀಲ | 20–00 |
| 58. | ದೇವೇಂದ್ರಪ್ಪ ಘಾಳಪ್ಪ ಜಮಾದಾರ | ಡಾ. ನಾಗಬಾಯಿ ಬಿ.ಬುಳ್ಳಾ | 20–00 |
| 59. | ಮೊಹಮ್ಮದ್ ಅಲಿ | ಪ್ರೊ|| ಶಿವರಾಜ ಪಾಟೀಲ | 20–00 |
| 60. | ಬಿ. ಶ್ಯಾಮಸುಂದರ್ | ಗಂಧರ್ವ ಸೇನಾ | 20–00 |
| 61. | ಶಂಕರಶೆಟ್ಟಿ ಪಾಟೀಲ | ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ | 20–00 |

# ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20–00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15–00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20–00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20–00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15–00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20–00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20–00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15–00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20–00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಲೂರು ಸುದರ್ಶನ್ | 20–00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶನಾಲಯ | 15–00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15–00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15–00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15–00 |

ಸರ್ಕಾರಿ ಮುದ್ರಣಾಲಯ, ಕೆಂಗೇರಿ, ಬೆಂಗಳೂರು–59.